श्रीजगद्गुरु मूरुसाविरमठ ग्रन्थमालायाः द्वाविंशतितम कुसुमम्

# वीरशैव सदाचार संग्रहः

पगडदिन्नि बृहन्मठाध्यक्षेण

पंडित बसवराजशास्त्रिणा

विरचित कर्नाटक भावार्थ विभूषितः

★

प्रकाशकः

श्री जगद्गुरु गङ्गाधर धर्मप्रचारक मण्डल

मूरुसाविरमठ, हुब्बली.

★

१९६४] [मूल्यम् रु. ३=००

श्रीजगद्गुरु मूरुसाविरमठ ग्रन्थमालायाः
द्वाविंशतितमकुसुमम्

# वीरशैव सदाचार संग्रहः

पगडदिन्नि बृहन्मठाध्यक्षेण
पंडित बसवराजशास्त्रिणा
विरचित कर्नाटक भावार्थ विभूषितः

★

प्रकाशकः
श्री जगद्गुरु गङ्गाधर धर्मप्रचारक मण्डल
मूरुसाविरमठ, हुब्बळी.

★

१९६४ ] [ मूल्यम् रू. ३=००

श्रीमज्जगद्गुरु गङ्गाधर महास्वामिनः
मूरुसाविरमठ धर्मप्रचारक मण्डल हुब्बल्ली.

अध्यक्षाः

श्रीमन्महाराज निरञ्जन जगद्गुरु गङ्गाधरराजयोगीन्द्र महास्वामिनः
मूरुसाविरमठ हुब्बल्ली.

सदस्याः

श्री. नि. प्र. बसवलिङ्गस्वामिनः गविमठ नविलुगुन्द
श्री. नि. प्र. शिवबसवस्वामिनः होसमठ हुब्बल्ली.
श्री. नि. प्र. चन्नवीरस्वामिनः एरडेत्तिनमठ हुब्बल्ली.
श्रीयुत बी. एस्. बसवनाळ वकील, बी. ए. एलेलबि, धारवाड.

श्री जगद्गुरु मूरुसाविरमठ ग्रन्थमालायाः द्वाविंशतितमकुसुमम्

# श्रीमद्वीरशैव सदाचार संग्रहः

★

सम्पादकमण्डल

श्री नि. प्र. शिवबसवस्वामिनः होसमठ हुबली.
श्री नि. प्र. शिवलिङ्गस्वामिनः हुक्केरिमठ, हावेरि.
श्री नि. प्र. गुरुमहान्तस्वामिनः चित्रगि इलकल.
श्री पण्डित बसवराजशास्त्रिणः बृहन्मठ पगडदिन्नि.

★

संशोधकः सम्पादकश्च

पंडित बसवराजशास्त्री पगडदिन्नीबृहन्मठाध्यक्षः
व्याकरणतीर्थ, व्याकरणशास्त्री, व्याकरणरत्नं साहित्यशिरोमणिः

ಶ್ರೀಮಜ್ಜಗದ್ಗುರು ಗಂಗಾಧರ ಮಹಾಸ್ವಾಮಿಗಳು
ಮೂರುಸಾವಿರಮಠ ಧರ್ಮಪ್ರಚಾರಕ ಮಂಡಳ,

ಹುಬ್ಬಳ್ಳಿ.

ಅಧ್ಯಕ್ಷರು :

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳು ಮೂರುಸಾವಿರಮಠ, ಹುಬ್ಬಳ್ಳಿ

ಸದಸ್ಯರು :

ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳು ಗವಿಮಠ, ನವಿಲುಗುಂದ
ಶ್ರೀ ನಿ. ಪ್ರ. ಶಿವಬಸವಸ್ವಾಮಿಗಳು ಹೊಸಮಠ, ಹುಬ್ಬಳ್ಳಿ
ಶ್ರೀ ನಿ. ಪ್ರ. ಚನ್ನವೀರಸ್ವಾಮಿಗಳು ಎರಡೆತ್ತಿನಮಠ, ಹುಬ್ಬಳ್ಳಿ
ಶ್ರೀಯುತ ವ್ಹಿ. ಎಸ್. ಬಸವನಾಳ ವಕೀಲರು, B.A., LL. B. ಧಾರವಾಡ

—

# ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
## ಮೂರುಸಾವಿರಮಠ, ಹುಬ್ಬಳ್ಳಿ

ಸಂಪಾದಕ ಮಂಡಳ :

ಶ್ರೀ ನಿ. ಪ್ರ. ಶಿವಬಸವಸ್ವಾಮಿಗಳು ಹೊಸಮಠ, ಹುಬ್ಬಳ್ಳಿ
ಶ್ರೀ ನಿ. ಪ್ರ. ಶಿವಲಿಂಗಸ್ವಾಮಿಗಳು ಹುಕ್ಕೇರಿಮಠ, ಹಾವೇರಿ
ಶ್ರೀ ನಿ. ಪ್ರ. ಗುರುಮಹಾಂತಸ್ವಾಮಿಗಳು ವೇದಾಂತಃಚಾರ್ಯರು
ಚಿತ್ರಿಗಿ, ಇಲಕಲ್ಲ ವಿರಕ್ತಮಠಾಧ್ಯಕ್ಷರು
ಶ್ರೀ ಪಂಡಿತ ಬಸವರಾಜಶಾಸ್ತ್ರಿಗಳು ಪಗಡದಿನ್ನಿ ಬೃಹನ್ಮಠ
ಪ್ರಿನ್ಸಿಪಾಲ ಜ. ಗಂಗಾಧರ ಸಂಸ್ಕೃತ ಕಾಲೇಜ, ಹುಬ್ಬಳ್ಳಿ

ಸಂಶೋಧಕರು ಮತ್ತು ಸಂಪಾದಕರು
ಪಂಡಿತ ಬಸವರಾಜ ಶಾಸ್ತ್ರಿಗಳು ಬೃಹನ್ಮಠ ಪಗಡದಿನ್ನಿ

ಮುದ್ರಕರು :
ಶ್ರೀ ಎಸ್. ಎಫ್. ಕಟ್ಟಿಮನಿ,
ಮನೋಹರ ಪಾವರಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ.

# ಅರ್ಪಣ

ಪರಮ ಶಿವಾನುಭಾವಿಗಳೂ ಕರ್ನಾಟಕದ ಶೈಕ್ಷಣಿಕ ರಂಗದಲ್ಲಿ
ಹೊಸಕಳೆಯನ್ನು ಉಂಟುಮಾಡಿದವರೂ ಸಮಾಜದ
ಹಿತಚಿಂತಕರೂ ಜಗದ್ಗುರು ಗಂಗಾಧರ ಧರ್ಮಪ್ರಚಾರಕ
ಮಂಡಲದ ಸಂಸ್ಥಾಪಕರೂ ಆದ
ಲಿಂಗೈಕ್ಯ ಪರಮಪೂಜ್ಯ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

**ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳವರು**
**ಮೂರುಸಾವಿರಮಠ**

ಅವರ

ದಿವ್ಯ ಚರಣಾರವಿಂದಗಳಲ್ಲಿ
ಈ ಇಪ್ಪತ್ತೆರಡನೆಯ ಪುಷ್ಪವನ್ನು
ಅತ್ಯಂತ ಭಕ್ತಿಪೂರ್ವಕವಾಗಿ ಅರ್ಪಿಸಲಾಗಿದೆ.

—ಪ್ರಕಾಶಕರು



ಲಿಂಗೈಕ್ಯ ಶ್ರೀಮನ್ ಮಹಾರಾಜ ನಿರಂಜನ
ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ

॥ ಶ್ರೀ ಸಿದ್ಧಲಿಂಗ ಪರಬ್ರಹ್ಮಣೇನಮಃ ॥

# ಮುನ್ನುಡಿಯು

ವೀರಶೈವ ಸದಾಚಾರ ಸಂಗ್ರಹಃ ಎಂಬ ಗ್ರಂಥವು ಪ್ರಾಚೀನ ಕಾಲದ ವೇದಾಗಮೋಪನಿಷತ್ತುಗಳನ್ನು, ಅರ್ವಾಚೀನ ಕಾಲದ ವೀರಶೈವ ಧರ್ಮಗ್ರಂಥಗಳನ್ನು ಆಳವಾಗಿ ಅಭ್ಯಾಸ ಮಾಡಿದ, ನುರಿತ ಅನುಭವಿಯಿಂದ ಸಂಗ್ರಹಿಸಲ್ಪಟ್ಟಿರುತ್ತದೆ. ಸಂಗ್ರಹಕಾರನ ಹೆಸರಿದ್ದ ಮೊದಲಿನ ಪುಟವು ಹುಳಗಳ ಬಾಯಿಗೆ ತುತ್ತಾದುದರಿಂದ ಆ ಪುಣ್ಯಪುರುಷನ ಹೆಸರು ತಿಳಿಯದಾಗಿದೆ. ವೀರಶೈವರ ದೈನಂದಿನ ವ್ಯವಹಾರಕ್ಕೂ, ಸಾಮಾಜಿಕ ವ್ಯವಸ್ಥೆಗೂ, ಧಾರ್ಮಿಕ ಸಂಸ್ಕಾರಗಳಿಗೂ, ಅವಶ್ಯವಾಗಿ ಬೇಕಾಗುವ ಯಾವತ್ತು ವಿಷಯವು ಈ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟಿರುವುದರಿಂದ ಈ ಗ್ರಂಥವು ಅತ್ಯಾವಶ್ಯಕವಾದುದಾಗಿದೆ.

ಗ್ರಂಥ ಬರೆಯುವವರು ತಮ್ಮ ಗ್ರಂಥದಲ್ಲಿಯ ವಿಷಯಕ್ಕೆ ಪರಿಪೋಷಕವಾದ ಬೇರೆ ಗ್ರಂಥದೊಳಗಿನ ಪ್ರಮಾಣ ವಾಕ್ಯಗಳನ್ನು ತೆಗೆದುಕೊಳ್ಳುವದು ಸರ್ವತ್ರ ಸಹಜವಾಗಿರುತ್ತದೆ. ಉದಾ-(೧) "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ | ಅತಪ್ತತನೂರ್ನ ತದಾಮೋ ಅಶ್ನುತೇ" ಎಂಬ ಋಗ್ವೇದ ಮಂತ್ರವನ್ನು, ಮತ್ತು (೨) "ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ" ಎಂಬ ಯಜುರ್ವೇದದ ಮಂತ್ರವನ್ನು ಸಿದ್ಧಾಂತ ಶಿಖಾಮಣಿಕಾರನು (೧) "ಋಗಿತ್ಯಾಹ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ | ಇತ್ಯಾದಿ— ಅತಪ್ತತನು ರಜ್ಞೋವೈ ಆಮಃ ಸಂಸ್ಕಾರವರ್ಜಿತಃ" ಎಂದು (೨) "ಅಘೋರಾಽಪಾಪಕಾಶೀತಿ ಯಾ ತೇ ರುದ್ರ ಶಿವಾ ತನೂಃ | ಯಜುಷಾಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ" ಎಂದು ತನ್ನ ಕವಿತಾದಲ್ಲಿ ಪರಿವರ್ತಿಸಿಕೊಂಡಿರುವನು. ಆದರೆ ಈ ಸಂಗ್ರಹಕಾರನು ಉಪಷ್ಟಂಭಕವಾದ ವಾಕ್ಯಗಳನ್ನು ಗ್ರಹಿಸಿ ತನ್ನ ಕವನದಲ್ಲಿ ಸೇರಿಸುವ ಸಾಹಸಕ್ಕೆ ಹೋಗದೆ ಪ್ರಮಾಣಗ್ರಂಥದಲ್ಲಿದ್ದುದನ್ನು ಇದ್ದಕ್ಕಿದ್ದ ಹಾಗೆ ಸಂಪೂರ್ಣವಾಗಿ ಸಂಗ್ರಹಿಸಿರುವನು. ಉದಾ— ಮಂಗಲ, ಸ್ವಪ್ರತಿಜ್ಞಾ ಇವುಗಳನ್ನು ಹೇಳುವ ಎರಡೇ ಶ್ಲೋಕಗಳ ನಂತರ—"ವೀರಶೈವ ಪ್ರಕಾಶಿಕಾಯಾಂ ಪಾಶುಪತ್ಯಾದಿ ತಂತ್ರೇಷು ಪ್ರತಿಪಾದ್ಯಂ ಸದಾಶಿವಂ ॥ ಸಂಪ್ರಣಮ್ಯ ಪ್ರವಕ್ಷ್ಯಾಮಿ ವೀರಶೈವ ಪ್ರಕಾಶಿಕಾಂ ॥ ಇಹಖಲು ಪರಮಕಾರುಣಿಕಃ ಇತ್ಯಾದಿ....

ವೀರಶೈವರ ಸದಾಚಾರಗಳನ್ನು ಸಂಗ್ರಹಿಸುವವನು ಮಂಗಲದ ನಂತರ ತನ್ನ ಪ್ರತಿಜ್ಞೆಗೆ ಅನುಗುಣವಾಗಿ ಸದಾಚಾರಗಳನ್ನು ಹೇಳುವದನ್ನು ಬಿಟ್ಟು ವೀರಶೈವ ಪ್ರಕಾಶಿಕೆಯೆಂಬ ಗ್ರಂಥ ಬರೆಯುವವನು ಹೇಳಿದ ಮಂಗಲ ಹಾಗು ಪ್ರತಿಜ್ಞಾ ವಾಕ್ಯ

ಗಳನ್ನೂ ಸಹ ವೀರಶೈವ ಪ್ರಕಾಶಿಕೆಯನ್ನು ಬರೆಯುವೆನು ಎಂದು ಆರಂಭಿಸಿ ಪೂರ್ಣವಾಗಿ ಇದ್ದಕ್ಕಿದ್ದಹಾಗೆ ವೀರಶೈವ ಪ್ರಕಾಶಿಕೆಯನ್ನು ಎತ್ತಿಕೊಂಡಿರುವನು.

ಈ ಸದಾಚಾರ ಸಂಗ್ರಹದಲ್ಲಿ ವೀರಶೈವ ಪ್ರಕಾಶಿಕೆಯ ಬಹುಭಾಗವು ಸಂಗ್ರಹಿಸಲ್ಪಟ್ಟಿದೆ ಮತ್ತು ವೀರಶೈವಾಚಾರ ಕೌಸ್ತುಭವು, ವೀರಶೈವಾನಂದ ಚಂದ್ರಿಕಾ, ಸಿದ್ಧಾಂತ ಶಿಖಾಮಣಿ, ಸುಪ್ರಭೇದ ಮೊದಲಾದ ಶಿವಾಗಮಾದಿಗಳು ಸಂಗ್ರಹಿಸಲ್ಪಟ್ಟಿರುತ್ತವೆ. ಆಯಾಯ ಪ್ರಕರಣ, ಸನ್ನಿವೇಶ, ಸಂದರ್ಭಗಳಿಗೆ ಅನುಗುಣವಾಗಿ ಅನೇಕ ಪ್ರಮಾಣ ಗ್ರಂಥಗಳ ಶ್ಲೋಕ ಮತ್ತು ವಾಕ್ಯ ಇವುಗಳನ್ನು ಸಂಯೋಜನ ಮಾಡಿದ ಸಂಯೋಜಕತ್ವವು ಮಾತ್ರ ಗ್ರಂಥಕಾರನದಲ್ಲದೆ ಸ್ವತಂತ್ರ ಕೃತಿಯು ಇದರಲ್ಲಿ ಯಾವುದೂ ಇರುವದಿಲ್ಲವೆಂದು ಕಂಡುಬರುತ್ತದೆ. ಈ ಸಂಯೋಜನೆಯಲ್ಲಿಯೂ ಕೆಲವು ಕಡೆ ತಪ್ಪಿರುವನೆಂದು ಪೂರ್ವಾಪರ ಸಂಬಂಧವನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಾಗ ಕಂಡುಬರುವದು ಅದನ್ನು ಮುಂದೆ ವಿವರಿಸುವೆವು. ಪ್ರಾಚೀನ ಗ್ರಂಥಗಳ ಪ್ರಮಾಣವಾಕ್ಯಗಳನ್ನೇ ಸಂಗ್ರಹಿಸಿರುವುದರಿಂದ ಆಯಾಯ ಗ್ರಂಥಗಳಂತೆ ಈ ಸದಾಚಾರ ಸಂಗ್ರಹ ಗ್ರಂಥವೂ ಪ್ರಮಾಣವಾದುದಾಗಿದೆ ಎಂಬುದು ನಿರ್ವಿವಾದವು.

ವೀರಶೈವರ ಪ್ರತಿಯೊಂದು ಕಾರ್ಯಕ್ಕೂ ಬೇಕಾಗುವ ಆಧಾರ ವಾಕ್ಯಗಳನ್ನು ಪ್ರಮಾಣತಮ ಗ್ರಂಥಗಳಿಂದ ಸಂಗ್ರಹಿಸಿದ ಈ ಸದಾಚಾರ ಸಂಗ್ರಹವು ಪ್ರತಿಯೊಬ್ಬ ವೀರಶೈವನಿಗೂ ಅವಶ್ಯವಾಗಿ ಬೇಕಾಗುವದರಿಂದ ಈ ಗ್ರಂಥವನ್ನು ಮೂರು–ನಾಲ್ಕು ನೂರು ವರ್ಷಗಳಿಂದ ಎತ್ತಿ ಬರೆದುಕೊಳ್ಳುತ್ತ ಬಂದಿರುವರು. ಈ ಬರಹಗಾರರ ಹಸ್ತದೋಷದಿಂದಲೂ ವಿಷಯಗ್ರಹಣ ಸಾಮರ್ಥ್ಯವಿಲ್ಲದುದರಿಂದಲೂ ಬರೆಯುವ ಕಾಲಕ್ಕೆ ಅನೇಕ ಲೋಪದೋಷಗಳು ಆಗುವದು ಸಹಜವಿದೆ. ಅಂತೆಯೇ ಕೈಬರಹದ ಪ್ರತಿಗಳಲ್ಲಿಯೂ ಸೊಲ್ಲಾಪುರದಲ್ಲಿ ಮುದ್ರಣವಾದ ಪ್ರತಿಯಲ್ಲಿಯೂ ಅನೇಕ ದೋಷಗಳು ವ್ಯಾಕರಣ ದೃಷ್ಟಿಯಿಂದ, ಛಂದಸ್ಸಿನ ದೃಷ್ಟಿಯಿಂದ, ಪ್ರಕರಣಾದಿಗಳಿಂದ ಕಂಡು ಬರುತ್ತವೆ. ಅವುಗಳನ್ನು ಸಾಧ್ಯವಾದಮಟ್ಟಿಗೆ ಸರಿಪಡಿಸಲಾಗಿದೆ. ಈ ವಿಷಯವು ಸರ್ವರಿಗೂ ತಿಳಿಯಲೆಂಬ ಸದುದ್ದೇಶದಿಂದ ಮಾದರಿಗಾಗಿ ಕೆಲವನ್ನು ಮಾತ್ರ ಉದಾಹರಿಸಿದ್ದೇವೆ. ವಾಚಕರು ಪರಾಮರ್ಶಿಸಬೇಕು.

ಏವಂ ಗಿರಿಜಯಾ ಪೃಷ್ಟಃ ಕಿಂಚಿದ್ಧಾಸ್ಯಮುಖಃ ಶಿವಃ
ಸಮಾಚಕ್ಷ್ವೇ ಪುರಾವೃತ್ತಂ ಪಾಶುಪತ್ಯಾಗಮೋದಿತಂ ||೧೪|| ಪ್ರಕರಣ ೧
1

ಪದ್ಭ್ಯಾಂ ಶೂದ್ರಾಶ್ಚ ಸಂಸೃಷ್ಟಾ ಮನಸಾ ಮೃಗಲಾಂಛನಃ ||
ಅರ್ಕೋರ್ದಿವಾಕರಶ್ಚೈವ ಇಂದ್ರಾಗ್ನೀ ಮುಖತಶ್ಚ ಮೇ ||೨೧|| ಪ್ರ–೧
2

ರೇವಣೋ ಮರುಳಶ್ಚೈ ಕೋರಾಮಃಪಂಡಿತ ಏವಚ | ವಿಶ್ವಾರಾಧ್ಯ........
ವೀರಶೈವ ಮತೋದ್ಧಾರಹೇತವೇ ಪಂಚಾಮಾನಪಿ |

3

ಮನ್ಮುಖೇಭ್ಯಃ ಸಮುತ್ಪಾದ್ಯ ತೈರೇವಾಕಾರ್ಯಮಂಜಸಾ ||೩೫|| ಪ್ರ-೧
ಪಂಚಮಾಚಾರ್ಯಮಧ್ಯೇ ತು ಯಃ ಪೀಠಮಾಧಿರೋಹತಿ |

4

ತದಾಸೌ ಗುರುಶಬ್ದೇನ ವಾಚ್ಯ ಇತ್ಯಭಿಧೀಯತೇ ||೧೩|| ಪ್ರ-೧೨
ಏವಂ ಶಾಸ್ತ್ರೋಕ್ತವಿಧಿನಾ ಪಂಚಮಾನ್ ಕಲಶಾನಪಿ ||

5

ಸಂಪೂಜ್ಯ ಫಲನೈವೇದ್ಯೈಃ ಸತಾಂಬೂಲೈಃ ಸದಕ್ಷಿಣೈಃ ||೨೦|| ಪ್ರ-೧೨
ಶಿಷ್ಯದತ್ತಫಲಾದ್ಯೈಶ್ಚ ಕಲಶಂ ಸ್ವಂ ಪ್ರಪೂಜಯೇತ್ ||
ತತಶ್ಚತ್ವಾರ ಕಲಶಾನ್ ಪೂಜಯೇಚ್ಚ ಯಥಾಕ್ರಮಂ ||೩೫|| ಪ್ರ-೧೨

6 7

ಕಂಬಲೋ ವೃಷಭಶ್ಚೈವ ದಶಮುಖೋರಜ್ಯುಕಂಥಕಃ

8

ವೀಟಃ ಪಂಚಮುಖಶ್ಚೈವ ಗೋಚರೋಗಗನಂ ತಥಾ ||೧೧|| ಪ್ರ-೨
ಉತ್ತಿಷ್ಠಂತು ಭೂತಪಿಶಾಚಾ ಏತೇ ಭೂಮಿಭಾರಕಾಃ ||

9

ಏತೇಷಾಮ ವಿರೋಧೇನ ಶಿವಕರ್ಮ ಸಮಾರಭೇತ್ ||೮|| ಪ್ರ-೯

10

ಗುರುಸ್ತಸ್ಯಾಂವೇದಿಕಾಯಾಂ ತಂಡುಲಾನರ್ಪಯೇತ್ತತಃ ||
ತಸ್ಯೋಪರಿ ಸ್ವಕಲಶಂ ಮಧ್ಯಮೇ ಸ್ಥಾಪಯೇತ್ತತಃ ||೧೪|| ಪ್ರ-೧೨

11 12

ಚತುರ್ವಿಧಪ್ರಕಾರಾಣಾಂ ಶೈವಾನಾಂ ಲಿಂಗಧಾರಣೇ ||

13

ವೈವಾಹಾದಿಕ ಮಾಂಗಲ್ಯೇ ಪುಣ್ಯಸರ್ವೇಷು ಕರ್ಮಸು ||೪|| ಪ್ರ-೪

14

ಸಿದ್ಧಾಂತೋ ವೀರಶೈವಶ್ಚ ಪುನಶ್ಚಾಪಿ ಚತುರ್ವಿಧಃ ||
ಧರ್ಮಾರ್ಥ ಕಾಮಮೋಕ್ಷೇತಿ ಯಥಾ ಮುಕ್ತೇಶ್ಚತುರ್ವಿಧಂ ||೧೫|| ಪ್ರ-೮

15

ತಾಸಾಮಾದ್ಯಾಶ್ಚತಸ್ರಸ್ತು ನಿಂದಿತಾ ದ್ವಾದಶೀ ತಥಾ ||

16

ತ್ರಯೋದಶೀಚ ಶೇಷಾಃಸ್ಯುಃ ಪ್ರಶಸ್ತಾ ದಶ ರಾತ್ರಯಃ ||೧೫|| ಪ್ರ-೯

ಪೂರ್ವೋಕ್ತ ಪಂಚಮಾನಾಂ ತು ನಂದಿಭೃಂಗ್ಯಾದಯೋ ಮತಾಃ ||
17

ಗುರವಸ್ತು ತತಸ್ತೇಷಾಂ ದ್ವಾವಗೌ ಪರಿಕೀರ್ತಿತೌ ||೫|| ಪ್ರ-೧೪
18

ನಿರಾಭಾರಿಸ್ಥಲಪ್ರೋಕ್ತ ಲಕ್ಷಣೈರ್ಯುತ ಶಿಷ್ಯಕಂ ||
19

ಗುರುರಾದೌಪರೀಕ್ಷೇತ ನಖನೇತ್ರಾದಿ ಲಕ್ಷಣೈಃ ||೬|| ಪ್ರ-೧೧

ಇವುಗಳಲ್ಲಿ 1-3-4-5-7-10-12-17 ಇವು ವ್ಯಾಕರಣ ಪ್ರಕಾರ ಅಶುದ್ಧ ಪ್ರಯೋಗಗಳು. 2 ಇದು ಹಿಂದೆ ಮುಂದೆ ತೃತೀಯಾ ಪಂಚಮೀ ವಿಭಕ್ತಿ ಹೇಳಿರುವುದರಿಂದ ಭಗ್ನಪ್ರಕ್ರಮ ದೋಷವುಳ್ಳದ್ದು. ಮತ್ತು ಸಂಸ್ಪೃಷ್ಟ ಎಂಬ ಕರ್ಮವಾಚಕ ಕೃದಂತ ಕ್ರಿಯಾಪದದೊಡನೆ ಅನ್ವಿತವಾದದ್ದು 6-8-9-11 ಇವು ಛಂದೋಭಂಗ ದೋಷವುಳ್ಳವು. ಅನುಷ್ಟುಪ್ ಛಂದಸ್ಸಿನಲ್ಲಿ ಒಂದು ಚರಣದೊಳಗೆ ೮ ಅಕ್ಷರಗಳಿರಬೇಕು, ಅವುಗಳಲ್ಲಿ ೫ ನೆಯದು ಎಲ್ಲಾ ಚರಣಗಳಲ್ಲಿ ಲಘುವಿರಬೇಕು, ೬ ನೆಯದು ಗುರುವಿರಬೇಕು, ೭ ನೆಯ ಅಕ್ಷರ ೧-೩ ಚರಣಗಳಲ್ಲಿ ಗುರುವು, ೨-೪ ಚರಣಗಳಲ್ಲಿ ಲಘುವಿರಬೇಕು. ಮೇಲಿನವುಗಳಲ್ಲಿ ಹಾಗಿಲ್ಲ. 12 ಇದರಲ್ಲಿ ಮಧ್ಯಮ ಶಬ್ದವು ನಡುವಿರುವ ವಸ್ತುವಾಚಕವಾಗಿರುವದಲ್ಲದೆ ನಡುವೆ ಎಂಬ ಅರ್ಥವನ್ನು ಹೇಳಲಾರದು ಆದುದರಿಂದ ಅವಾಚಕತ್ವ ದೋಷವುಳ್ಳದ್ದು. 13 ಇದರಲ್ಲಿ ಅಧಿಕಪದ ದೋಷವಿದೆ. 14 ಇದರಲ್ಲಿ ಪುಣ್ಯ ಶಬ್ದದ ಅನ್ವಯವು ಕರ್ಮ ಶಬ್ದದೊಡನೆ ಆಗಬೇಕಾದುದು ಇಷ್ಟವಾಗಿದೆ ಆದರೆ "ಪುಣ್ಯ ಸರ್ವೇಷು" ಎಂದು ಸಮಾಸಮಾಡಿರುವುದರಿಂದ ಅದು ಆಗುವದಿಲ್ಲ ಕಾರಣ "ಅಭವನ್ಮತ ಸಂಬಂಧ" ದೋಷವಿದೆ. 15 ಇದರಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಇವು ಮುಕ್ತಿಯ ಭಾಗಗಳೆಂದು ಎಲ್ಲಿಯೂ ಪ್ರಸಿದ್ಧಿಯಿರುವದಿಲ್ಲ. ಅವು ಪುರುಷಾರ್ಥದ ಭಾಗಗಳಿರುತ್ತವೆ. ಕಾರಣ "ಪ್ರಸಿದ್ಧಿ ತ್ಯಾಗ" ಅಥವಾ ಖ್ಯಾತಿ ವಿರುದ್ಧತಾ ದೋಷವಿರುತ್ತದೆ. 16 ಇದು ಪ್ರಕರಣ ವಿರುದ್ಧವಾದುದು. ಪೂರ್ವದಲ್ಲಿ "ಏಕಾದಶ್ಯಾಮಧರ್ಮಾಸ್ತ್ರೀ ದ್ವಾದಶ್ಯಾಂ ಪುರುಷೋತ್ತಮಃ" ಸ್ತ್ರೀಯಳು ಋತುವಾದ ಹನ್ನೊಂದನೆಯ ರಾತ್ರಿಯಲ್ಲಿ ಸಂಗಮಾಡಿದರೆ ಧರ್ಮದ್ರೋಹಿಯಾದ ಹೆಣ್ಣು ಹುಟ್ಟುವದು, ಹನ್ನೆರಡನೆಯ ರಾತ್ರಿಯಲ್ಲಿ ಸಂಗಮಾಡಿದರೆ ಪುರುಷಶ್ರೇಷ್ಠನು ಹುಟ್ಟುವನೆಂದು ಹೇಳಿರುತ್ತದೆ. ಕಾರಣ ಹನ್ನೆರಡನೆಯ ರಾತ್ರಿ ಕೆಟ್ಟದ್ದಲ್ಲ, ಹನ್ನೊಂದನೆಯದು ಕೆಟ್ಟದಿರುತ್ತದೆ.

ಸೊಲ್ಲಾಪುರದಲ್ಲಿ ಮುದ್ರಣವಾದ ಈ ಸದಾಚಾರ ಸಂಗ್ರಹದಲ್ಲಿ "ಪಂಚಕ" ಎಂದು ಹೇಳಬೇಕಾದ ಬಹುಭಾಗದಲ್ಲಿ "ಪಂಚಮ" ಎಂಬ ಶಬ್ದವು ಮುದ್ರಿತವಾಗಿರುವದು. ಈ ಪ್ರಯೋಗವು ಪ್ರಕರಣ ಪೂರ್ವಾಪರ ಸಂಬಂಧಾದಿಗಳಿಗೆ ವಿರೋಧವಾಗಿ

ರುತ್ತದೆ. ಇದು ಮುದ್ರಣದ ದೋಷವೋ, ಬರಹಗಾರರ ದೋಷವೋ, ಬುದ್ಧ್ಯಾ ಪೂರ್ವಕ ಸೇರಿಸಿದುದೋ ತಿಳಿಯದಾಗಿದೆ. ಮತ್ತು ಹದಿನಾಲ್ಕನೆಯ ಪ್ರಕರಣದಲ್ಲಿ "ಪಂಚಕ" ಶಬ್ದದ ಸ್ಥಾನದಲ್ಲಿ ಪಂಚಮ ಇದನ್ನು ಸೇರಿಸಿ, ಇದೇ ಗ್ರಂಥದಲ್ಲಿ ಹನ್ನೊಂದನೆಯ ಪ್ರಕರಣಲ್ಲಿ ಹೇಳಿದ

ಪಂಚಗೋತ್ರ ಸಮುದ್ಭೂತಾಃ ಪಂಚಸೂತ್ರಾನುಸಾರಿಣಃ ||
ಗುರುಸ್ಥಲ ಸಮಾಖ್ಯಾತಾ ಗುರವಃ ಸರ್ವಲಿಂಗಿನಾಂ ||೪೧||

ಸರ್ವಲಿಂಗಿಗಳಿಗೂ ಪಂಚಗೋತ್ರೋತ್ಪನ್ನರಾದ ಮತ್ತು ಪಂಚಸೂತ್ರಗಳುಳ್ಳ, ಗುರುಸ್ಥಲದವರೆಂದು, ಪ್ರಸಿದ್ಧರಾದ ಮಾಹೇಶ್ವರೇ ಗುರುಗಳು ಎಂಬ ಉಕ್ತಿಗೆ ವಿರುದ್ಧವಾಗಿ ಕೆಲವು ಪ್ರಕ್ಷಿಪ್ತ ವಾಕ್ಯಗಳು ಸೇರಿರುವವು. ಹೇಗೆಂದರೆ ನಂದಿ-ಭೃಂಗಿ ಮೊದಲಾದವರು ಗೋತ್ರಪುರುಷರು, ಗುರುಗಳಲ್ಲ. ಹೀಗಿದ್ದರೂ ನಂದಿ-ಭೃಂಗ್ಯಾದಿಗಳು ಗುರುಗಳೆಂದು ಹೇಳಿದ್ದು ತಪ್ಪಾಗುವುದರಿಂದ ಪ್ರಕ್ಷಿಪ್ತವು ಇದಲ್ಲದೆ ನಂದಿ-ಭೃಂಗ್ಯಾದಿಗಳ ವಂಶೀಯರ ವಿಭಾಗಗಳಾದ ಪುತ್ರವರ್ಗ, ಶಿಷ್ಯವರ್ಗ ಇವನ್ನು ಹೇಳುವ ಪ್ರಕರಣದಲ್ಲಿ ಇತರರ ಸಂಬಂಧವೇ ಇರುವದಿಲ್ಲ. ಮಾಹೇಶ್ವರ ವರ್ಗದಲ್ಲಿಯೇ ಮಠಸ್ಥರೊಬ್ಬರನ್ನು ಬಿಟ್ಟು ಉಳಿದ ನಾಲ್ವರಿಗೂ ವೀರಮಾಹೇಶ್ವದೀಕ್ಷಾ ಮಾಡಬಾರದೆಂದೂ ತನ್ಮೂಲಕ ಗುರುತ್ವಾಧಿಕಾರವಿಲ್ಲವೆಂದೂ ಹಿಂದೆ ಹೇಳಿದ ಮತ್ತು ಮುಂದೆ ಇದೇ ಹದಿನಾಲ್ಕನೆಯ ಪ್ರಕರಣದಲ್ಲಿ

ಗುರುಸ್ಥಲ ಸಮಾಖ್ಯಾತಾ ವೀರಮಾಹೇಶ್ವರಾಭಿಧಾಃ ||
ಏತೇ ಗುರುಪದಾಧ್ಯಕ್ಷಾ ನಾನ್ಯೇ ಲಾಂಛನಧಾರಿಣಃ ||

ಎಂದು ಹೇಳುವಂತಹ ಗ್ರಂಥಕಾರನು ಮಧ್ಯದಲ್ಲಿ ತನ್ನ ಮಾತಿಗೆ ತಾನೇ ವಿರುದ್ಧವಾಗಿ ಬೇರೆಯವರಿಗೆ ಗುರುತ್ವಾಧಿಕಾರವನ್ನು ಹೇಳಲು ಹೇಗೆ ಸಾಧ್ಯವಾದೀತು, ಪೂರ್ವಾಪರ ವಿರುದ್ಧವಾಗಿ ಹೇಳುತ್ತ ಹೋದರೆ ಆ ಮಾತಿಗೆ ಬೆಲೆಬರುವುದೆ? ಕಾರಣ ಅವು ಪ್ರಕ್ಷಿಪ್ತವಾಕ್ಯಗಳು ಎಂಬುದು ಸ್ಫುಟವಾಗಿ ತೋರುತ್ತಿದೆ. ಇದಲ್ಲದೆ ಆ ಪ್ರಕ್ಷಿಪ್ತವಾಕ್ಯಗಳಂತೆ ಹೋದರೆ ಭಕ್ತವರ್ಗದಲ್ಲಿಯೇ ಕೆಲವರು ಶ್ರೇಷ್ಠರು, ಕೆಲವರು ಕನಿಷ್ಠರು ಎಂಬ ಅಭಿಪ್ರಾಯವು ಭಾಸವಾಗುವದರಿಂದ ಭಕ್ತವರ್ಗದಲ್ಲಿಯೇ ಪರಸ್ಪರ ಕಲಹವುಂಟಾಗಿ ಸಮಾಜದೊಳಗೆ ಗೊಂದಲವೇಳುವದು. ಈ ಪುತ್ರವರ್ಗ, ಮತ್ತು ಶಿಷ್ಯವರ್ಗ ಮಠಗಳ ಬಗ್ಗೆ ನಮ್ಮ ಹಿರಿಯಮಠದ ಪೂರ್ವಜರಿಂದ ಪ್ರಮಾಣ ಗ್ರಂಥಗಳಿಂದ ಸಂಗ್ರಹಿಸಿ ಬರೆದಿಟ್ಟ ಕೈಬರಹದ ಪ್ರತಿಗಳ ಆಧಾರದಿಂದ ಆ ಪ್ರಕ್ಷಿಪ್ತವಾಕ್ಯಗಳನ್ನೆಲ್ಲಾ ಸರಿಪಡಿಸಲಾಗಿದೆ ಮೂಲವನ್ನು ನೋಡಿರಿ.

"ಐದು" ಎಂಬ ಸಂಖ್ಯೆಯನ್ನು ಹೇಳುವ ಪಂಚನ್ ಶಬ್ದದಮುಂದೆ "ಸಂಖ್ಯಾಯಾಃ ಸಂಜ್ಞಾ ಸಂಘ ಸೂತ್ರಾಧ್ಯಯನೇಷು ೫-೧-೫೮" ಎಂಬ ವ್ಯಾಕರಣ ಸೂತ್ರ

ದಿಂದ ಸ್ವಾರ್ಥದಲ್ಲಿ ಕನ್ ಪ್ರತ್ಯಯ ಬಂದು ಪಂಚೈವ ಪಂಚಕಾಃ ಎಂದು ಸಿದ್ಧವಾಗುತ್ತದೆ. ಇದೇ ಪಂಚನ್ ಶಬ್ದವುಮುಂದೆ ಪೂರಣಾರ್ಥದಲ್ಲಿ "ನಾಂತಾದಸಂಖ್ಯಾದೆರ್ಮಟ್; ೫-೨-೪೯" ಎಂಬ ವ್ಯಾಕರಣ ಸೂತ್ರದಿಂದ ಮಟ್ ಪ್ರತ್ಯಯ ಬರಲು 'ಐದನೆಯ' ಎಂಬ ಅರ್ಥವುಳ್ಳ "ಪಂಚಮ" ಶಬ್ದವು ಸಿದ್ಧವಾಗುತ್ತದೆ. ಐದು ಜನ ಆಚಾರ್ಯರನ್ನು, ಐದು ಜನ ಆಚಾರ್ಯರ ಮಧ್ಯದಲ್ಲಿ, ಐದು ಕಲಶಗಳನ್ನು ಎಂದು ಹೇಳುವ ಸ್ಥಲದಲ್ಲಿ ಕ್ರಮದಿಂದ ''ಪಂಚಮಾನ್'' ''ಪಂಚಮಾಚಾರ್ಯ ಮಧ್ಯೇ'' ಮತ್ತು ''ಪಂಚಮಾನ್ ಕಲಶಾನ್'' ಎಂದು ಹೇಳಿದರೆ ಐದನೆಯ ಆಚಾರ್ಯರನ್ನು, ಐದನೆಯ ಆಚಾರ್ಯರ ಮಧ್ಯದಲ್ಲಿ, ಐದನೆಗಳ ಕಲಶಗಳನ್ನು ಎಂದು ಅಸಂಬದ್ಧಾರ್ಥವನ್ನು ತೋರಿಸುವುದರಿಂದ ಇಂತಹ ಪ್ರಯೋಗಗಳು "ಅವಾಚಕತ್ವ ದೋಷವುಳ್ಳವುಗಳಾಗುವದರಿಂದ ಅಶುದ್ಧ ಪ್ರಯೋಗಗಳು. 19 ಇದು ಪ್ರಕರಣ ಸಂದರ್ಭಾದಿಗಳಿಗೆ ವಿರುದ್ಧವಾದುದು. ಹೇಗೆಂದರೆ ಹನ್ನೊಂದನೆಯ ಪ್ರಕರಣವು ಎಂಟನೆಯ ವರ್ಷದ ಬಾಲಕರಿಗೆ ಮಾಡುವ ವೀರಶೈವ ದೀಕ್ಷಾ, ವೀರಮಾಹೇಶ್ವರ ದೀಕ್ಷಾ ಇವುಗಳನ್ನು ಹೇಳುವದಿರುತ್ತದೆ. ಅದರಲ್ಲಿ ವೀರಮಾಹೇಶ್ವರ ದೀಕ್ಷಾ ವಿಧಾನವನ್ನು ಹೇಳುವ ಸಂದರ್ಭದಲ್ಲಿ ವೀರ ಮಾಹೇಶ್ವರನು ದೀಕ್ಷಾ ಸಂಸ್ಕಾರ ಹೊಂದಲಿಕ್ಕೆ ಬಂದಾಗ್ಗೆ ಅವನ ಅವಯವಗಳನ್ನು ಪರೀಕ್ಷಿಸಬೇಕು ಎಂಬ ಸನ್ನಿವೇಶದಲ್ಲಿ ನಿರಾಭಾರಿ ಸ್ಥಲದ ಸಂಬಂಧವೇ ಇರುವದಿಲ್ಲ ಆದುದರಿಂದ ಹಾಗೆ ಹೇಳಿದ್ದು ತಪ್ಪು. ಈ ಎಲ್ಲ ದೋಷಗಳು ಕೆಳಗೆ ಉಲ್ಲೇಖಿಸಿದಂತೆ ಅನುಕ್ರಮವಾಗಿ ಸರಿಪಡಿಸಲ್ಪಟ್ಟಿರುವವು.

1 ಸಮಾಚಷ್ಟೇ, 2 ಆಕ್ಷ್ಣ್ಣ, 3 ಪಂಚಕಾನಪಿ, 4 ಪಂಚಕಾಚಾರ್ಯ ಮಧ್ಯೇತು (ವಾ) ಆಚಾರ್ಯ ಪಂಚಕೇತತ್ರ, 5 ಪಂಚಕಾನ್ ಕಲಶಾನಪಿ, 6 ಕಲಶಾನೃತ್ವಿಜಶ್ಚಾಥ, 7 ಪೂಜಯೇಯುಃ, 8 ಕಂಬಲೋವೃಷಭಶ್ಚೈವ ಗೋಚರೋರಜ್ಜು ಕಂಥುಕಃ । ಪಂಚಮುಖಶ್ಚ ವೀಟಿರ್ದಶಮುಖೋಗಗನಂ ತಥಾ॥ 9 ಉತ್ತಿಷ್ಟಂತು ಪಿಶಾಚಾಯೇ ಭೂತಾಶ್ಚ ಭೂಮಿಭಾರಕಾಃ ॥ 10 ಸಮಾರಭೇ, 11-12 ತಸ್ಯೋಪರಿ ಸ್ವಕಂ ಕುಂಭಂ ಮಧ್ಯೇಚ ಸ್ಥಾಪಯೇತ್ತತಃ॥ 13 ವೀರಶೈವ ಪ್ರಭೇದಾನಾಂ, 14 ಸರ್ವೇಷು ಪುಣ್ಯಕರ್ಮಸು, 15 ಧರ್ಮಾರ್ಥ ಕಾಮ ಮೋಕ್ಷೇತಿ ಪುರುಷಾರ್ಥೋಯಥಾ ತಥಾ, 16 ನಿಂದಿತೈಕಾದಶೀತಥಾ, 17 ಪೂರ್ವೋಕ್ತ ಪಂಚಕಾನಾಂತು, 18 ಗೋತ್ರಾಧಿಕಾರಿಣಸ್ತೇಷಾಂ, 19 ಮಾಹೇಶ್ವರ ಸ್ಥಲಪ್ರೋಕ್ತ.

ಈಗ ಮುದ್ರಿತವಾಗಿರುವ ಈ ಸದಾಚಾರ ಸಂಗ್ರಹವನ್ನು ಚನ್ನಾಗಿ ಪರಿಶೀಲಿಸಿದರೆ ಇದು ಎಷ್ಟರ ಮಟ್ಟಿಗೆ ಪರಿಶುದ್ಧವಾಗಿರುವದೆಂಬುದು ವೀರಶೈವಧರ್ಮ ಶಾಸ್ತ್ರಜ್ಞರಿಗೆ ಗೋಚರವಾಗುವದು. ಮುದ್ರಣದ ದೋಷಗಳು ಕೆಲವಾದರೂ ಉಳಿಯುವದು ಸಹಜವಿದೆ. ನಮ್ಮಲ್ಲಿಯು ಉಳಿದಿವೆ ಅಂಥವುಗಳಿಗಾಗಿ ಶುದ್ಧಾಶುದ್ಧ ಪತ್ರಿಕೆ ಇರುತ್ತದೆ.

## — ಭಕ್ತಮಾಹೇಶ್ವರ ನಿರ್ವಚನಂ —

ಭಕ್ತವರ್ಗ ಮಾಹೇಶ್ವರವರ್ಗ ಎಂಬ ಎರಡು ವರ್ಗಗಳು ಬೇರೆಬೇರೆ ಇರುತ್ತ ವೆಂಬುದನ್ನು ಇತರ ಗ್ರಂಥಕಾರರಿಗಿಂತಲೂ ಈ ಸಂಗ್ರಹಕಾರನು ಬಹು ಸ್ಫುಟವಾಗಿ ಹೇಳಿರುವನು. ಮೊದಲಿಗೆ ಈ ಭಕ್ತಮಾಹೇಶ್ವರ ಶಬ್ದಗಳ ವ್ಯುತ್ಪತ್ತಿಯ ಸ್ವರೂಪ ವನ್ನು ವಿಚಾರಮಾಡೋಣ. ಭಕ್ತ ಶಬ್ದಕ್ಕೆ ಮೂರು ಅರ್ಥಗಳಿರುತ್ತವೆ, ಒಂದು ಅವಯವಾರ್ಥ, ಎರಡು ಪಾರಿಭಾಷಿಕಾರ್ಥಗಳು ಹೇಗೆಂದರೆ ಭಜ ಸೇವಾಯಾಂ ಎಂಬ ಧಾತುವಿನಿಂದ ಭಕ್ತ ಶಬ್ದವು ಸಿದ್ಧವಾಗುವುದರಿಂದ ಭಕ್ತಿಯುಳ್ಳವನು ಭಕ್ತನು ಎಂಬುದು ಒಂದು ಅರ್ಥವು, ಈ ಅರ್ಥದಲ್ಲಿ ಭಕ್ತ ಶಬ್ದವು ಸರ್ವಧರ್ಮದವರಿಂದ ಪ್ರಯೋಗಿಸಲ್ಪಡುತ್ತಿದೆ. ವೀರಶೈವ ಸಿದ್ಧಾಂತದಲ್ಲಿ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನು ಎಂಬ ಅರ್ಥದೊಡನೆ ಸ್ಥಲ ಮತ್ತು ವರ್ಗ ಎಂಬ ಎರಡು ಅರ್ಥಗಳು ಪಾರಿಭಾಷಿಕ ಗಳಾಗಿ ಹೇಳಲ್ಪಡುತ್ತವೆ. ಅಂತು ಭಕ್ತ ಶಬ್ದಕ್ಕೆ ಭಕ್ತಿಯುಳ್ಳವ, ಭಕ್ತಸ್ಥಲ, ಭಕ್ತ ವರ್ಗ ಎಂದು ಮೂರು ಅರ್ಥಗಳಿರುವವು. ಸ್ಥಲ ಮತ್ತು ವರ್ಗ ಎಂಬ ಅರ್ಥದಲ್ಲಿ ಬೇರೆ ಯಾವ ಸಮಾಜದವರೂ ಭಕ್ತ ಶಬ್ದವನ್ನು ಪ್ರಯೋಗಿಸುವದಿಲ್ಲವಾದುದರಿಂದ ಭಕ್ತ ಶಬ್ದಕ್ಕೆ ಇವೆರಡು ವೀರಶೈವರ ಪಾರಿಭಾಷಿಕಾರ್ಥಗಳು ಇರುತ್ತವೆ.

ಮಾಹೇಶ್ವರ ಶಬ್ದಕ್ಕೂ ಒಂದು ಅವಯವಾರ್ಥ, ಎರಡು ಪಾರಿಭಾಷಿಕಾರ್ಥಗಳು ಅಂತು ಮೂರು ಅರ್ಥಗಳಿರುತ್ತವೆ. ಹೇಗೆಂದರೆ—ದೇವರು ಎಂಬ ಅರ್ಥವುಳ್ಳ 'ಈಶ್ವರ' ಶಬ್ದದಿಂದ ಬ್ರಹ್ಮ ವಿಷ್ಣು ಮೊದಲಾದವರೆಲ್ಲರು ಹೇಳಲ್ಪಡುವರು. ಈ ಈಶ್ವರ ಶಬ್ದಕ್ಕೆ ಮಹತ್ ಶಬ್ದವನ್ನು ಕೂಡಿಸಿ ಮಹಾಂಶ್ಚಾಸೌ ಈಶ್ವರಶ್ಚ ಮಹೇಶ್ವರಃ ಎಂದು ಸಮಾಸದಿಂದ ಸಿದ್ಧವಾದ ಮಹೇಶ್ವರ ಶಬ್ದವು "ಮಹೇಶ್ವರಸ್ತ್ರ್ಯಂಬಕ ಏವನಾ ಪರಃ" ಎಂಬ ಮಹಾಕವಿಯಾದ ಕಾಳಿದಾಸನ ಉಕ್ತಿಯಂತೆ ಮೂರು ಕಣ್ಣುಳ್ಳ ಪರ ಶಿವನನ್ನೇ ಬೋಧಿಸುವದಲ್ಲದೆ ಅನ್ಯರನ್ನು ಹೇಳುವದಿಲ್ಲ. ಇಂತಹ ಮಹೇಶ್ವರೋ ದೇವತಾ ಅಸ್ಯ ಇತಿ ಮಾಹೇಶ್ವರಃ ಈ ಶಬ್ದವು ಶಿವೋ ದೇವತಾ ಅಸ್ಯ ಇತಿ ಶೈವಃ ಎಂಬ ಶೈವಶಬ್ದದ ಪರ್ಯಾಯವಾಚಕವಾದುದು. ಮಹೇಶ್ವರನೇ ದೇವರಾಗುಳ್ಳ ಶಿವಭಕ್ತನು ಎಂಬುದು ಒಂದನೆಯ ಅರ್ಥವು. ಈ ಅರ್ಥದಲ್ಲಿ ಮಾಹೇಶ್ವರ ಶಬ್ದ ವನ್ನು ಎಲ್ಲರೂ ಪ್ರಯೋಗಿಸುತ್ತಾರೆ. ವೀರಶೈವ ಸಿದ್ಧಾಂತದಲ್ಲಿ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂಬ ಅರ್ಥದ ಜೊತೆಗೆ ಸ್ಥಲ ಮತ್ತು ವರ್ಗ ಎಂಬ ಎರಡು ಅರ್ಥ ಗಳು ಪಾರಿಭಾಷಿಕವಾಗಿ ಹೇಳಲ್ಪಡುತ್ತವೆ. ಆದುದರಿಂದ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು, ಮಾಹೇಶ್ವರಸ್ಥಲ, ಮಾಹೇಶ್ವರ ವರ್ಗ ಎಂದು ಮೂರು ಅರ್ಥಗಳಿ ರುತ್ತವೆ.

ಪಾರಿಭಾಷಿಕಾರ್ಥವುಳ್ಳ ಶಬ್ದಗಳನ್ನು ವೀರಶೈವರೊಂದೇ ಕಲ್ಪಿಸಿಕೊಂಡಿರು ವರೋ ? ಎಂದು ಯಾರೂ ಸಂದೇಹಪಡಬೇಕಾಗಿಲ್ಲ. ಬೇರೆ ಬೇರೆ ಶಾಸ್ತ್ರಗಳಲ್ಲಿಯೂ

ಅವರವರ ಸಾಂಕೇತಿಕಾರ್ಥವನ್ನು ಬೋಧಿಸುವಂತಹ ಎಷ್ಟೋ ಪಾರಿಭಾಷಿಕ ಶಬ್ದ ಗಳಿರುತ್ತವೆ. ಸ್ಥಾಲೀಪುಲಾಕನ್ಯಾಯದಿಂದ ಒಂದನ್ನು ಮಾತ್ರ ಇಲ್ಲಿ ತೋರಿಸುತ್ತೇವೆ. ಉದಾ—ಗುಣ ಶಬ್ದವನ್ನು ಆಯಾಯ ಶಾಸ್ತ್ರಕಾರರು ಹೇಗೆ ಸಂಕೇತ ಮಾಡಿಕೊಂಡಿ ರುವರೆಂಬುದನ್ನು ನೋಡಿರಿ, ಧರ್ಮಶಾಸ್ತ್ರಕಾರರು ದಯೆ, ದಾಕ್ಷಿಣ್ಯ, ಶಮ, ದಮ, ಸತ್ಯ ಮೊದಲಾದವುಗಳಿಗೆ ಗುಣವೆಂದು ಹೇಳುವರು. ನೈಯಾಯಿಕರು ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಜ್ಞಾನಾದಿಗಳಿಗೆ ಗುಣವೆಂದು ಹೇಳುವರು. ಆಲಂಕಾರಿಕರು ಪ್ರಸಾದ, ಓಜ, ಮಾಧುರ್ಯ ಮುಂತಾದವುಗಳಿಗೆ ಗುಣವೆಂದು ಹೇಳುವರು. ವೈಯಾಕರಣಿಗಳು ಅ, ಏ, ಓ, ಎಂಬ ಮೂರು ವರ್ಣಗಳಿಗೆ ಗುಣ ವೆಂದು ಹೇಳುವರು. ವೇದಾಂತಿಗಳು ಸತ್ವ, ರಜಃ, ತಮಃ ಈ ಮೂರಕ್ಕೆ ಗುಣ ಎಂದು ಹೇಳುವರು, ಇದರಂತೆ ಇನ್ನು ಅನೇಕರು ಅನೇಕ ಶಬ್ದಗಳನ್ನು ತಮ್ಮ ತಮ್ಮ ಪಾರಿಭಾಷಿಕಗಳನ್ನಾಗಿ ಮಾಡಿಕೊಂಡಿರುವರು.

ಒಂದು ಶಬ್ದವನ್ನು ತಮಗೆ ಬೇಕಾದ ಒಂದು ಅರ್ಥದಲ್ಲಿ ಸಂಕೇತ ಮಾಡಿಕೊಳ್ಳು ವದು ಸಹಜ, ಒಂದಕ್ಕೆ ಎರಡು ಸಂಕೇತಗಳು ಹೇಗೆ? ಭಕ್ತ, ಮಾಹೇಶ್ವರ ಶಬ್ದ ಗಳಿಗೆ, ಭಕ್ತಸ್ಥಲ, ಮಾಹೇಶ್ವರಸ್ಥಲ ಎಂದಾಗಲಿ, ಅಥವಾ ಭಕ್ತವರ್ಗ, ಮಾಹೇಶ್ವರ ವರ್ಗ ಎಂದಾಗಲಿ ಸಂಕೇತ ಮಾಡಬಹುದಾಗಿತ್ತು, ಎರಡೂ ಹೇಳುವದು ಹೇಗೆ? ಎಂದು ಸಂದೇಹಪಡಬೇಕಾದ ಕಾರಣವಿಲ್ಲ ನೋಡಿರಿ ನ್ಯಾಯಶಾಸ್ತ್ರದಲ್ಲಿ ಅನುಭೂತಿ ರೂಪವಾದ ಪ್ರಮಾಜ್ಞಾನವು ಪ್ರತ್ಯಕ್ಷ, ಅನುಮಿತಿ, ಉಪಮಿತಿ, ಶಾಬ್ದ ಎಂದು ನಾಲ್ಕು ಪ್ರಕಾರವಾಗಿರುತ್ತದೆ. ಈ ನಾಲ್ಕು ಪ್ರಮಾಗಳಿಗೆ ಕರಣಗಳು (ಸಾಧನಗಳು) ನಾಲ್ಕು ಇರುತ್ತವೆ. ಅನುಮಿತಿ ಎಂಬ ಪ್ರಮಾಕ್ಕೆ ಕರಣವಾದುದಕ್ಕೆ ಅನುಮಾನ ಎಂದು, ಉಪಮಿತಿ ಪ್ರಮಾಕ್ಕೆ ಸಾಧನವಾದುದಕ್ಕೆ ಉಪಮಾನ ಎಂದು. ಶಾಬ್ದ ಪ್ರಮಾಕ್ಕೆ ಸಾಧನವಾದುದಕ್ಕೆ ಶಬ್ದ ಎಂದು ಹೆಸರಿರುತ್ತವೆ ಅರ್ಥಾತ್ ಅನುಮಿತಿ ಅನುಮಾನ, ಉಪಮಿತಿ, ಉಪಮಾನ, ಶಾಬ್ದ ಶಬ್ದ ಎಂದು ಪ್ರಮಾಕ್ಕೂ ಪ್ರಮಾಸಾಧ ನಕ್ಕೂ ಬೇರೆ ಬೇರೆ ಹೆಸರುಗಳಿರುವವು. ಪ್ರತ್ಯಕ್ಷ ಪ್ರಮಾಕ್ಕೆ ಸಾಧನವಾದುದಕ್ಕೆ ಪ್ರತ್ಯಕ್ಷ ಎಂದೇ ಹೆಸರಿರುತ್ತದೆ ಅರ್ಥಾತ್ ಪ್ರತ್ಯಕ್ಷ ಎಂಬ ಒಂದೇ ಶಬ್ದದಿಂದ ಪ್ರಮಾ, ಮತ್ತು ಪ್ರಮಾಸಾಧನ ಎರಡನ್ನೂ ಹೇಳುವರು. ಅಲಂಕಾರಶಾಸ್ತ್ರದಲ್ಲಿ ಪ್ರಪಂಚದೊಳಗೆ ಯಾವ ಭಾಷೆಯ ಶಬ್ದಗಳೇ ಇರಲಿ ಆ ಶಬ್ದಗಳಿಗೆ ಪ್ರಧಾನವಾಗಿ ಸಂಸ್ಕೃತ ಶಬ್ದಗಳಿಗೆ ವಾಚ್ಯ, ಲಕ್ಷ್ಯ, ವ್ಯಂಗ್ಯ, ತಾತ್ಪರ್ಯ ಎಂದು ನಾಲ್ಕು ಅರ್ಥಗಳಿ ರುತ್ತವೆ.

ಅರ್ಥೋ ವಾಚ್ಯಶ್ಚ ಲಕ್ಷ್ಯಶ್ಚ ವ್ಯಂಗ್ಯಶ್ಚೇತಿ ತ್ರಿಧಾ ಮತಃ ||
ವಾಚ್ಯಾರ್ಥೋಽಭಿಧಯಾ ಬೋಧ್ಯೋ ಲಕ್ಷ್ಯೋ ಲಕ್ಷಣಯಾ ಮತಃ ||
ವ್ಯಂಗ್ಯೋ ವ್ಯಂಜನಯಾ ತಾಃ ಸ್ಯುಸ್ತಿಸ್ರಃ ಶಬ್ದಸ್ಯ ಶಕ್ತಯಃ ||

ತಾತ್ಪರ್ಯಾಖ್ಯಾಂ ವೃತ್ತಿಮಾಹುಃ ಪದಾರ್ಥಾನ್ವಯಬೋಧನೇ ||
ತಾತ್ಪರ್ಯಾರ್ಥಂ ತದರ್ಥಂ ಚ ವಾಕ್ಯಂ ತದ್ಬೋಧಕಂ ಪರೆ ||

ಈ ನಾಲ್ಕು ವಿಧ ಅರ್ಥಗಳನ್ನು ತಿಳಿಸಿಕೊಡುವಂಥ ಶಕ್ತಿಗಳು (ವೃತ್ತಿಗಳು) ನಾಲ್ಕು ವಿಧ, ಆ ಅರ್ಥಗಳನ್ನು ಹೇಳುವಂಥ ಶಬ್ದಗಳು ನಾಲ್ಕುವಿಧ ಇರುತ್ತವೆ ಅರ್ಥಾತ್ ಅರ್ಥ, ಶಕ್ತಿ (ವೃತ್ತಿ), ಶಬ್ದ ಇವು ಮೂರು ಒಂದೊಂದು ಭಾಗದಲ್ಲಿರುತ್ತವೆ. ಹೇಗೆಂದರೆ ೧ ನೆಯದು ಅಭಿದಾವೃತ್ತಿ ಇದರಿಂದ ಬೋಧ್ಯವಾದ ಅರ್ಥಕ್ಕೆ ವಾಚ್ಯ ಎಂದೂ, ಈ ವಾಚ್ಯಾರ್ಥವನ್ನೂ ಹೇಳುವ ಶಬ್ದಕ್ಕೆ ವಾಚಕ ಎಂದು ಹೇಳುವರು. ೨ ನೆಯದು ಲಕ್ಷಣಾವೃತ್ತಿ ಇದರಿಂದ ಬೋಧ್ಯವಾದ ಅರ್ಥಕ್ಕೆ ಲಕ್ಷ್ಯ ಎಂದೂ, ಈ ಲಕ್ಷ್ಯಾರ್ಥವನ್ನು ಹೇಳುವ ಶಬ್ದಕ್ಕೆ ಲಕ್ಷ್ಯಕ ಎಂದು ಹೇಳುವರು. ೩ ನೆಯದು ವ್ಯಂಜನಾವೃತ್ತಿ ಇದರಿಂದ ಬೋಧ್ಯವಾದ ಅರ್ಥಕ್ಕೆ ವ್ಯಂಗ್ಯ ಎಂದೂ, ಈ ವ್ಯಂಗ್ಯಾರ್ಥವನ್ನೂ ಹೇಳುವ ಶಬ್ದಕ್ಕೆ ವ್ಯಂಜಕ ಎಂದೂ ಹೇಳುವರು, ೪ ನೆಯದು ತಾತ್ಪರ್ಯವೃತ್ತಿ ಇದರಿಂದ ಬೋಧ್ಯವಾದ ಅರ್ಥಕ್ಕೂ ತಾತ್ಪರ್ಯ ಎಂದೇ ಹೇಳುವರು ಇದನ್ನು ತಿಳಿಸಿಕೊಡುವದು ವಾಕ್ಯವು. ಅರ್ಥಾತ್ ನಾಲ್ಕನೆಯ ವೃತ್ತಿಯು ತಾತ್ಪರ್ಯ ಅರ್ಥವು ತಾತ್ಪರ್ಯ, ಅಂತು ತಾತ್ಪರ್ಯ ಎಂಬ ಒಂದೇ ಶಬ್ದದಿಂದ ವೃತ್ತಿ ಮತ್ತು ಅರ್ಥ ಎರಡನ್ನು ಹೇಳುವರು. ಇದರಂತೆ ವೀರಶೈವರು ಭಕ್ತ ಮತ್ತು ಮಾಹೇಶ್ವರ ಎಂಬ ಶಬ್ದಗಳಿಂದ ಸ್ಥಲ ಮತ್ತು ವರ್ಗ ಎಂಬ ಎರಡನ್ನೂ ಹೇಳಿದರೆ ತೊಂದರೆಯೇನಿದೆ.

ನೈಯಾಯಿಕರು ಪ್ರತ್ಯಕ್ಷ ಶಬ್ದದಿಂದ ಪ್ರಮಾಜ್ಞಾನವನ್ನು ತಿಳಿಸುವ ಸಂದರ್ಭದಲ್ಲಿ ಪ್ರತ್ಯಕ್ಷ ಶಬ್ದದ ಜ್ಯೊತೆಗೆ ಪ್ರಮಾಶಬ್ದವನ್ನು ಸೇರಿಸಿ "ಪ್ರತ್ಯಕ್ಷಪ್ರಮಾ" ಎಂದೂ. ಪ್ರಮಾ ಸಾಧನವನ್ನು ತಿಳಿಸುವಾಗ್ಗೆ ಪ್ರಮಾಣ ಶಬ್ದವನ್ನು ಸೇರಿಸಿ "ಪ್ರತ್ಯಕ್ಷಪ್ರಮಾಣಂ" ಎಂದು ಹೇಳುವರು. ಆಲಂಕಾರಿಕರು ತಾತ್ಪರ್ಯ ಶಬ್ದದಿಂದ ವೃತ್ತಿ (ಶಕ್ತಿ) ಯನ್ನು ತಿಳಿಸುವ ಸಂದರ್ಭದಲ್ಲಿ ತಾತ್ಪರ್ಯದ ಮುಂದೆ ವೃತ್ತಿ ಶಬ್ದವನ್ನು ಸೇರಿಸಿ "ತಾತ್ಪರ್ಯವೃತ್ತಿಃ" ಎಂದು ಅರ್ಥವನ್ನು ತಿಳಿಸುವಾಗ್ಗೆ ಅರ್ಥ ಶಬ್ದವನ್ನೇ ಸೇರಿಸಿ "ತಾತ್ಪರ್ಯಾರ್ಥಃ" ಎಂದು ಹೇಳುವರು. ಇವರಂತೆ ವೀರಶೈವರಾದರೂ ಭಕ್ತ ಮತ್ತು ಮಾಹೇಶ್ವರ ಶಬ್ದಗಳ ಸಾಂಕೇತಿಕವಾದ ಸ್ಥಲ ಮತ್ತು ವರ್ಗ ಎಂಬ ಅರ್ಥವನ್ನು ಹೇಳುವ ಸಂದರ್ಭದಲ್ಲಿ ಸ್ಥಲ ಮತ್ತು ವರ್ಗ ಎಂಬ ಶಬ್ದಗಳನ್ನು ಸೇರಿಸಿಯೇ "ಭಕ್ತಸ್ಥಲ, ಭಕ್ತವರ್ಗ, ಮಾಹೇಶ್ವರಸ್ಥಲ, ಮಾಹೇಶ್ವರವರ್ಗ" ಎಂದು ಹೇಳುವರು. ಸ್ಥಲವೋ, ವರ್ಗವೋ ಎಂಬ ಸಂಶಯವಿಲ್ಲದ ಕಡೆಯಲ್ಲಿ ಕೇವಲ ಭಕ್ತ, ಮಾಹೇಶ್ವರ ಎಂಬ ಶಬ್ದಗಳನ್ನು ಪ್ರಯೋಗಿಸುವರು.

ಈ ಭಕ್ತ ಮಾಹೇಶ್ವರ ಶಬ್ದಗಳಿಗೆ ಮೂರು ಮೂರು ಅರ್ಥಗಳಿರುವವೆಂಬ ಬಗ್ಗೆ ಆಧಾರ (ಪ್ರಮಾಣ)ಗಳನ್ನು ತೋರಿಸುವೆವು ನೋಡಿರಿ. ಉದಾಹರಣೆ:—

೧ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವ ಎಂಬ ಅರ್ಥವಿರುವ ಬಗ್ಗೆ
ಸಿದ್ಧಾಂತ ಶಿಖಾಮಣಿಯ ನವಮ ಪರಿಚ್ಛೇದದಲ್ಲಿ ಆಧಾರಗಳಿರುತ್ತವೆ.

ಅಧಮೇ ಚೋತ್ತಮೇ ವಾಪಿ ಯತ್ರ ಕುತ್ರಚಿದೂರ್ಜಿತಾ ।
ವರ್ತತೇ ಶಾಂಕರೀ ಭಕ್ತಿಃ ಸ ಭಕ್ತ ಇತಿ ಗೀಯತೇ ॥ ೪ ॥
ಭಕ್ತ್ಯಾ ಪರಮಯಾ ಯುಕ್ತಃ ಸ ವೈ ಭಕ್ತ ಇತಿ ಸ್ಮೃತಃ ॥ ೨೫ ॥

ಅಧಮನಲ್ಲಿಯೇ ಆಗಲಿ ಉತ್ತಮನಲ್ಲಿಯೇ ಆಗಲಿ ಅಥವಾ ಯಾವನಲ್ಲಿಯೇ ಆಗಲಿ ಶಿವನ ವಿಷಯವಾದ ಭಕ್ತಿ ಇದ್ದರೆ ಅವನು ಭಕ್ತನೆನಿಸಿಕೊಳ್ಳುವನು. ಶ್ರೇಷ್ಠವಾದ ಭಕ್ತಿಯಿಂದ ಕೂಡಿದವನೇ ಭಕ್ತನು.

೧ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂಬ ಅರ್ಥವಿರುವ ಬಗ್ಗೆ ಸಿದ್ಧಾಂತ ಶಿಖಾಮಣಿ ನವಮ ಪರಿಚ್ಛೇದದಲ್ಲಿ ಆಧಾರವಿದೆ.

ಶಿವಕ್ಷೇತ್ರೋತ್ಸವ ಮಹಾ ಯಾತ್ರಾ ದರ್ಶನಕಾಂಕ್ಷಿಣಾಂ ।
ಮಾರ್ಗೇನ್ನಪಾನದಾನಂ ಚ ಕುರ್ಯಾನ್ಮಾಹೇಶ್ವರೋ ಜನಃ ॥ ೪೭ ॥

ಮಾಹೇಶ್ವರಃ ಜನಃ ಶಿವೋಪಾಸಕ ಶಿವಭಕ್ತಜನವು ಶಿವಕ್ಷೇತ್ರ ಶಿವೋತ್ಸವ ಮೊದಲಾದ ದರ್ಶನಾಪೇಕ್ಷಿಗಳಿಗೂ, ಶಿವಯಾತ್ರಿಕರಿಗೂ ಮಾರ್ಗದಲ್ಲಿ ಅನ್ನದಾನ ವನ್ನು ಜಲದಾನವನ್ನು ಮಾಡಬೇಕು ಎಂದು ಹೇಳಿದೆ. ಇಲ್ಲಿ ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ಸ್ಥಲದವರು ಅಥವಾ ಮಾಹೇಶ್ವರ ವರ್ಗದವರು ಎಂದು ಅರ್ಥ ಮಾಡಲಿಕ್ಕೆ ಬರುವದಿಲ್ಲ. ಏಕೆಂದರೆ ಹಾಗೆ ಮಾಡಿದರೆ ಒಂದೇ ಸ್ಥಲದವರೇ ಅಥವಾ ಒಂದೇ ವರ್ಗದವರೇ ಅನ್ನ ಜಲಗಳನ್ನು ದಾನ ಮಾಡಬೇಕೆಂದು ಅರ್ಥವಾಗುವದರಿಂದ ಕೆಲವರಿಗೆ ಮಾತ್ರ ಇದನ್ನು ಹೇಳಿದಂತಾಗುವದಲ್ಲದೆ ಸರ್ವರಿಗೂ ಹೇಳಿದಂತಾಗುವ ದಿಲ್ಲ. ಇದರಿಂದ ಅವ್ಯಾಪ್ತಿ ದೋಷ ಬರುವದು ಮತ್ತು ಜನಶಬ್ದವು ವಿರುದ್ಧ ಅಥವಾ ಅಧಿಕಪದವಾಗುವದು ಕಾರಣ ಶಿವೋಪಾಸಕರಾದ ಸರ್ವರೂ ದಾನ ಮಾಡಬೇಕೆಂದು ಹೇಳುವದೇ ಇಲ್ಲಿ ಇಷ್ಟನಾಗಿದೆ. ಕಾರಣ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕ ಎಂದು ಅರ್ಥ ಮಾಡಬೇಕು.

೨ ಭಕ್ತ ಹಾಗು ಮಾಹೇಶ್ವರ ಶಬ್ದಗಳಿಗೆ ಸ್ಥಲ ಎಂಬ ಅರ್ಥವಿರುವ ಬಗ್ಗೆ ಸಿದ್ಧಾಂತಶಿಖಾಮಣಿಯ ೯-೧೦ ಪರಿಚ್ಛೇದಗಳಲ್ಲಿ ಆಧಾರಗಳು.

ಉಕ್ತಾಖಿಲಾಚಾರ ಪರಾಯಣೋಽಸೌ ಸದಾ ವಿತನ್ವನ್ ಸಹಜಂ ತು ದಾನಂ ।
ಬ್ರಹ್ಮಾದಿ ಸಂಪತ್ಸು ವಿರಕ್ತಚಿತ್ತೋ ಭಕ್ತೋಹಿ ಮಾಹೇಶ್ವರತಾಮುಪೈತೀ
॥ ಪರಿಚ್ಛೇದ ೯ ಶ್ಲೋಕ ೯೪ ॥

ಭಕ್ತಸ್ಥಲಂ ಸಮಾಖ್ಯಾತಂ ಭವತಾ ಗಣನಾಯಕ ॥
ಕೇನ ವಾ ಧರ್ಮಭೇದೇನ ಭಕ್ತೋ ಮಾಹೇಶ್ವರೋ ಭವೇತ್
॥ ಪರಿಚ್ಛೇದ ೧೦ ಶ್ಲೋಕ ೧ ॥

ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ॥
ಬ್ರಹ್ಮಾದಿಸ್ಥಾನ ವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ
॥ ಪರಿಚ್ಛೇದ ೧೦ ಶ್ಲೋಕ ೨ ॥

ಆಯಿ ಭಗವನ್ ಶ್ರೀ ರೇಣುಕ ಗಣೇಶ್ವರನೇ ಭಕ್ತಸ್ಥಲದ ಆಚಾರವು ತಮ್ಮಿಂದ ಹೇಳಲ್ಪಟ್ಟಿತು. ಯಾವ ಧರ್ಮ (ಆಚಾರ) ಭೇದದಿಂದ ಭಕ್ತಸ್ಥಲದಲ್ಲಿರುವವನು ಮಾಹೇಶ್ವರ ಸ್ಥಲವನ್ನು ಹೊಂದಲು ಅರ್ಹನಾಗುವನು? ಎಂದು ಅಗಸ್ತ್ಯ ಮಹರ್ಷಿಯು ಪ್ರಶ್ನ ಮಾಡಲು ಅದಕ್ಕೆ ಶ್ರೀ ರೇಣುಕ ಭಗವತ್ಪಾದರು ಭಕ್ತಸ್ಥಲದಲ್ಲಿ ಹೇಳಿದ ಎಲ್ಲಾ ಆಚಾರಗಳನ್ನು ಅನುಸರಿಸುತ್ತ ಅಂತಿಮವಾದ ಸಹಜ ದಾನದಲ್ಲಿ ಅತ್ಯಂತ ನಿಷ್ಣಾತನು ಶಿವಾಸಕ್ತನು ಬ್ರಹ್ಮ ವಿಷ್ಣು ಮುಂತಾದ ಪದವಿಗಳಲ್ಲಿಯೂ ಸಹ ವಿರತಿಯುಳ್ಳವನಾದರೆ ಮಾಹೇಶ್ವರ ಸ್ಥಲದ ಆಚಾರಗಳನ್ನು ಆಚರಿಸಲು ಅರ್ಹ ನಾಗುವನು ಎಂದು ಅಪ್ಪಣೆ ಮಾಡಿರುವರು. ಇಲ್ಲಿ ಮೊದಲಿಗೆ ಭಕ್ತ ಸ್ಥಲಂ ಎಂದು ಸ್ಥಲಶಬ್ದವನ್ನು ಹೇಳಿ ಮುಂದೆ ಸಂದೇಹವಿಲ್ಲದುದರಿಂದ ಕೇವಲ ಭಕ್ತ ಮಾಹೇಶ್ವರ ಶಬ್ದಗಳನ್ನು ಹೇಳಿದ್ದರೂ ಎರಡೂ ಶಬ್ದಗಳಿಗೆ ಸ್ಥಲ ಎಂಬ ಅರ್ಥವು ಸ್ಫುಟವಾಗಿ ತೋರುತ್ತಿದೆ.

ಈ ಭಕ್ತ ಹಾಗು ಮಾಹೇಶ್ವರ ಶಬ್ದಗಳಿಗೆ ವರ್ಗವೆಂಬ ಅರ್ಥವಿರುವ ಬಗ್ಗೆ ಸಿದ್ಧಾಂತಶಿಖಾಮಣಿಯ ಪರಿಚ್ಛೇದ ೯ರಲ್ಲಿ ಆಧಾರವಿದೆ.

ಸ್ವಮಾರ್ಗಾಚಾರನಿರತಾ ಸಜಾತೀಯಾ ದ್ವಿಜಾಸ್ತು ಯೇ ॥
ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ ॥ ೫೯ ॥

ಈ ಶ್ಲೋಕಕ್ಕೆ ವ್ಯಾಖ್ಯಾನ ಬರೆಯುವಾಗ್ಗೆ ಶ್ರೀಮಂತೋಂಟದಾರ್ಯರು ಕೆಳಗಿನಂತೆ

ಶಿವೋಕ್ತಾಂ ಜಾತಿಮರ್ಯಾದಾಂ ಯೋಽತೀತ್ಯ ಭುವಿ ವರ್ತತೇ ॥
ಸ ಚಾಂಡಾಲ ಇತಿಜ್ಞೇಯಃ ಇತ್ಯಾದಿ ವಚನ ಪ್ರಾಮಾಣ್ಯಾತ್ ಶಿವಾಗ್ನಿ ದಗ್ಧ ಮಲತ್ರಯತ್ವ ಪೂರ್ವಕಪ್ರಾಪ್ತ ಮಂತ್ರಪಿಂಡತ್ವಾತ್ ದ್ವಿಜನ್ಮನಾಂ ವೀರಶೈವ ಮತೋಚಿತಾಚಾರನಿಷ್ಠಾನಾಂ ಸ್ವಜಾತಿಸಂಭವಾನಾಂ ಭಕ್ತಮಾಹೇಶ್ವರಾಣಾ ಮಾಲಯೇಷು ತೇಷಾಂ ಪಂಕ್ತೌ ಚ ಭುಂಜೀಯಾತ್ ನಾನ್ಯತ್ರೇತಿ ತಾತ್ಪರ್ಯಂ॥

ಎಂದು ಹೇಳಿರುವರು.

ತಾಯಿಯ ಗರ್ಭದಿಂದ ಜನಿಸಿದ ಬಳಿಕ ವೀರಶೈವನು ದೀಕ್ಷಾ ಸಂಸ್ಕಾರವನ್ನು ಹೊಂದುವಾಗ್ಗೆ ದೀಕ್ಷಾಗ್ನಿಯಿಂದ ಮಲತ್ರಯಗಳನ್ನು ದಹಿಸಿ ಮಾಂಸಪಿಂಡವನ್ನು ಕಳೆದು ಮಂತ್ರಪಿಂಡವನ್ನು ಶ್ರೀ ಗುರುವು ಮಾಡುವುದರಿಂದ ಗುರುಕರಜಾತ ನಾಗುವನು. ಆದಕಾರಣ ದೀಕ್ಷಾ ಸಂಸ್ಕಾರ ಹೊಂದಿದ ಪ್ರತಿಯೊಬ್ಬ ವೀರಶೈವನು ದ್ವಿಜನೆನಿಸಿಕೊಳ್ಳುವನು. ಅಂಥ ವೀರಶೈವನು ತನ್ನಂತೆ ಆಚಾರವುಳ್ಳವರೂ ತನ್ನ ಜಾತಿಯವರು ಆದ ಭಕ್ತ ಮಾಹೇಶ್ವರರ ಮನೆಯಲ್ಲಿ ಮತ್ತು ಅಂಥವರ ಪಂಕ್ತಿಯಲ್ಲಿ

ಪ್ರಸಾದವನ್ನು ಸೇವಿಸಬೇಕಲ್ಲದೆ ಇತರರ (ಅಲಿಂಗಿಗಳ) ಮನೆಯಲ್ಲಿಯೂ ಅಲಿಂಗಿಗಳ ಪಂಕ್ತಿಯಲ್ಲಿಯೂ ಪ್ರಸಾದವನ್ನು ಸೇವಿಸಕೂಡದೆಂದು ಸ್ಪಷ್ಟವಾಗಿ ಹೇಳಿರುವರು.

ಶ್ರೀ ಮರಿ ತೋಂಟದಾರ್ಯರು "ಭಕ್ತಮಾಹೇಶ್ವರಾಣಾಂ" ಎಂದು ಇಷ್ಟೇ ಹೇಳಿರುವರಲ್ಲದೆ ವರ್ಗಶಬ್ದವನ್ನು ಸೇರಿಸಿರುವದಿಲ್ಲ. ನೀವೇಕೆ? ವರ್ಗವನ್ನು ಸೇರಿಸುವಿರೆಂದು ಯಾರಾದರೂ ಆಕ್ಷೇಪ ಮಾಡಬಹುದು. ಆದರೆ ಇಂತಹ ಆಕ್ಷೇಪವು ಅವಿಚಾರಿತ ರಮಣೀಯವಾದುದಾಗುವದು. ಸ್ಥಲವೋ ವರ್ಗವೋ ಎಂದು ಸಂಶಯ ಬರುವಲ್ಲಿ ಆ ಆ ಶಬ್ದಗಳನ್ನು ಹೇಳುವರಲ್ಲದೆ ಸಂದೇಹವಿಲ್ಲದ ಕಡೆಯಲ್ಲಿ ಹೇಳುವದಿಲ್ಲ. ಇಲ್ಲಿ ಭಕ್ತ ಶಬ್ದಕ್ಕೆ ಭಕ್ತಸ್ಥಲ, ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ಸ್ಥಲ ಎಂದು ಅರ್ಥ ಮಾಡಿದರೆ ಆ ಎರಡು ಸ್ಥಲಗಳ ಆಚಾರವುಳ್ಳವರ ಮನೆಯಲ್ಲಿ ಮಾತ್ರ ಭೋಜನ ಮಾಡಬೇಕು. ಉಳಿದ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ನಾಲ್ಕು ಸ್ಥಲಗಳ ಆಚಾರವುಳ್ಳವರಲ್ಲಿ ಭೋಜನ ಮಾಡಬಾರದು ಎಂದು ಅರ್ಥವಾಗುವದರಿಂದ ವೀರಶೈವರಲ್ಲಿಯೇ ಕೆಲವರಲ್ಲಿ ಮಾಡಬೇಕು. ಕೆಲವರಲ್ಲಿ ಮಾಡಬಾರದೆಂದು ಹೇಳಿದಂತಾಗುವುದರಿಂದ ಇದು ಅವ್ಯಾಪ್ತಿ ದೋಷವುಳ್ಳದ್ದಾಗುವದು. ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನು ಎಂದು ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂದು ಅರ್ಥ ಮಾಡಿದರೆ ಎಲ್ಲಾ ವೀರಶೈವರೂ ಬರುವರಲ್ಲಾ ಎಂಬ ಮಾತೂ ಸರಿಯಾದುದಲ್ಲ. ವೀರಶೈವರೆಲ್ಲರೂ ಬರುವುದರ ಜೊತೆಗೆ ವೀರಶೈವರಲ್ಲದವರೂ ಭಕ್ತಿಯುಳ್ಳವರು ಶಿವೋಪಾಸಕರು ಇರುವುದರಿಂದ ಅವರ (ಅಲಿಂಗಿಗಳ) ಮನೆಯಲ್ಲಿಯೂ ಸಹ ಭೋಜನ ಮಾಡಬೇಕೆಂಬ ಅತಿ ವ್ಯಾಪ್ತಿ ದೋಷ ಬರುವದು. ಆದ ಕಾರಣ ಇಲ್ಲಿ ಭಕ್ತ ಮಾಹೇಶ್ವರ ಶಬ್ದಗಳಿಗೆ ಭಕ್ತವರ್ಗ ಮಾಹೇಶ್ವರ ವರ್ಗ ಎಂದು ಅರ್ಥ ಮಾಡಿದರೇನೆ ಸರಿಯಾಗುತ್ತದೆ. ಏಕೆಂದರೆ ಈ ಎರಡೂ ವರ್ಗದವರಿಗೂ ಆರಾರು ಸ್ಥಲಗಳಿರುವ ಪ್ರಯುಕ್ತ ಎಲ್ಲಾ ಸ್ಥಲಾಚರಣೆ ಮಾಡುವವರೂ ಆ ಎರಡು ವರ್ಗದಲ್ಲಿರುವುದರಿಂದ ಸದಾಚಾರವುಳ್ಳ ಎಲ್ಲಾ ವೀರಶೈವರ ಮನೆಯಲ್ಲಿ ಮತ್ತು ಪಂಕ್ತಿಯಲ್ಲಿ ಭೋಜನ ಮಾಡಬೇಕೆಂದು ಸಿದ್ಧವಾಗುವದು ಹೀಗೆ ಅರ್ಥ ಮಾಡಿದರೆ ಅವ್ಯಾಪ್ತಿ ಅತಿವ್ಯಾಪ್ತಿ ದೋಷಗಳೂ ಬರುವದಿಲ್ಲ.

ಇದೇ ರೀತಿ ಸಿದ್ಧೇಶ್ವರ ಪುರಾಣದಲ್ಲಿ ಶ್ರೀ ಮರಿ ತೋಂಟದಾರ್ಯರು ಭಕ್ತ ಮತ್ತು ಮಾಹೇಶ್ವರ ಶಬ್ದಗಳಿಗೆ ಮೂರು ಮೂರು ಅರ್ಥಗಳಿರುವವೆಂದು ಹೇಳಿರುವರು. ಉದಾಹರಣೆ:- ೧ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನೆಂಬ ಅರ್ಥವಿರುವ ಬಗ್ಗೆ

ಪಾಶಹರ ಚಿತ್ಸುಖೋಲ್ಲಾಸ ಮಹಿಮಾವೇಶ<br>
ದೋಷವನದಾವ ನೀನೆಮ್ಮೊರ್ಗೆ ಒಂದು ಸಂ<br>
ತೋಷದಿಂ ಸಲಹೆಂದು ಗುಹ್ಯರ ಸದ್ಭಕ್ತರರೆ ಬಿನ್ನಪಂಗೆಯ್ಯಲು ॥ ೩ ॥

ಚೆಂದದಿಂ ಸಿದ್ಧೇಶನಂ ಕಂಡು ಪಾದಾರ — ಸಂಧಿ ೧೪
ವಿಂದದೊಳು ಸೈಗೆಡೆದು ಸಕಲ ಸದ್ಭಕ್ತ ಜನ
ಬಂಧುವೇ ಕಾರುಣ್ಯಸಿಂಧುವೇ ವಿಧೃತತರುಣೇಂದುವೇ ನಿರ್ಭೇದ್ಯನೆ ||
...............ರಕ್ಷಿಪುದೆಂದು ಪೊಗಳ್ದು ಸಂತಸದೊಳಿರಲು || ೫ || ಸಂಧಿ ೧೪

೧೪ನೆಯ ಸಂಧಿಯ ೩–೫ ಈ ಎರಡು ಪದ್ಯಗಳಲ್ಲಿರುವ ಭಕ್ತ ಶಬ್ದಕ್ಕೆ ಭಕ್ತ ಸ್ಥಲ ಅಥವಾ ಭಕ್ತ ವರ್ಗ ಎಂದು ಅರ್ಥ ಮಾಡಿದರೆ ಒಂದೇ ಸ್ಥಲದವರು ಅಥವಾ ಒಂದೇ ವರ್ಗದವರು ಆ ಸಿದ್ಧಲಿಂಗ ಮಹಾ ಶಿವಯೋಗಿಯನ್ನು ಕರೆಯಲಿಕ್ಕೆ ಬಂದಿದ್ದರು ಎಂದು, ಉಳಿದ ಐದು ಸ್ಥಲದವರು ಅಥವಾ ಮಾಹೇಶ್ವರ ವರ್ಗದವರು ಬಂದಿರಲಿಲ್ಲ ಎಂದು ಅರ್ಥವಾಗುವುದರಿಂದ ಈ ಭಕ್ತ ಮಾಹೇಶ್ವರ ಶಬ್ದಗಳಿಂದ ಯಾವತ್ತೂ ವೀರ ಶೈವರ ಗ್ರಹಣವಾಗದ ಮೂಲಕ ಅವ್ಯಾಪ್ತಿ ದೋಷ ಬರುವದು. ಇದಲ್ಲದೆ ಗೂಳೂರ ಲ್ಲಿಯ ಭಕ್ತಸ್ಥಲದ ಆಚಾರವುಳ್ಳವರಷ್ಟೇ ಅಥವಾ ಭಕ್ತವರ್ಗದವರೊಂದೇ ಕರೆಯಲಿಕ್ಕೆ ಬರುವದರಿಂದ ಕೆಲವರೇ ಬಂದಿರುವರು ಸರ್ವರ ಅಪೇಕ್ಷೆ ಇದ್ದ ಹಾಗೆ ತೋರುವದಿಲ್ಲ ಎಂಬ ಭಾವನೆಯಿಂದ ಕರೆಯುವವರ ವಿಷಯದಲ್ಲಿ ಗೌರವವು ಕಡಿಮೆಯಾಗುತ್ತದೆ. ಹಾಗೂ ಆ ಸಿದ್ಧಲಿಂಗ ಮಹಾಶಿವಯೋಗಿಯು ಭಕ್ತಸ್ಥಲದವರಿಗೆ ಅಥವಾ ಭಕ್ತವರ್ಗ ದವರಿಗೆ ಮಾತ್ರ ಬಂಧುವೂ ಕಾರುಣ್ಯಸಿಂಧುವೂ ಆಗಿದ್ದನೆಂದು, ಇತರರಿಗೆ ಹಾಗೆ ಆಗಿರಲಿಲ್ಲವೆಂದು ಅರ್ಥವಾಗುವುದರಿಂದ ಸಿದ್ಧಲಿಂಗೇಶನಲ್ಲಿ ನ್ಯೂನತೆಯು ಉಂಟಾಗು ತ್ತದೆ. ಮತ್ತು

ಕರುಣದಿಂದವರ ಬಿನ್ನಪವನಂಗೀಕರಿಸಿ
ಗುರುವರಂ ಗೂಳೂರನೈದಿಯೊಪ್ಪುತ್ತಿರಲು
ತರತರಂಗೊಂಡು ಸತ್ಯರು ಶಾಂತಿಯುತರು ಸಾತ್ವಿಕರು ಸುಗುಣಾಭರಣರು ||
ಪರಮದಾಸೋಹಿಗಳು ಚರಲಿಂಗಭಕ್ತಿ ತ
ತ್ಪರರು ಪಾದಾಂಬು ಪರಿಪೂರ್ಣ ಪ್ರಸಾದ ನಿ
ಷ್ಠರು ಶೀಲನಿಯತವ್ರತಿಗಳು ಸಿದ್ಧೇಶನಂ ನೋಡಲೆಂದೈತಂದರು || ೪ ||

ಎಂಬ ಅದೇ ಸಂಧಿಯ ನಾಲ್ಕನೆಯ ಪದ್ಯದರ್ಥಕ್ಕೆ ವಿರೋಧವೂ ಆಗುತ್ತದೆ. ಆದಕಾರಣ ಇಲ್ಲಿರುವ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವರು ಎಂದು ಅರ್ಥ ಮಾಡಿದರೆ ಭಕ್ತವರ್ಗದವರಾಗಲಿ ಮತ್ತು ಮಾಹೇಶ್ವರ ವರ್ಗದವರಾಗಲಿ ಆರು ಸ್ಥಲಗಳ ಆಚರಣೆ ಮಾಡುವರೆಲ್ಲರಲ್ಲಿಯೂ ಭಕ್ತಿಯಿರುವುದರಿಂದ ಎಲ್ಲರೂ ಭಕ್ತರೆನಿಸಿಕೊಳ್ಳುತ್ತಾರೆ. ಇಂಥವರೆಲ್ಲರೂ ಕರೆಯಲಿಕ್ಕೆ ಬಂದಿದ್ದರೆಂದೂ, ಇಂಥವರೆಲ್ಲರಿಗೂ ಸಿದ್ಧಲಿಂಗೇಶನು ಬಂಧುವಾಗಿದ್ದನೆಂದೂ ಹೇಳಿದಂತಾಗುವುದರಿಂದ ಯಾವ ದೋಷವು ಬರುವದಿಲ್ಲ.

೨ ಭಕ್ತ ಮಾಹೇಶ್ವರ ಶಬ್ದಗಳಿಗೆ ಸ್ಥಲವೆಂಬ ಅರ್ಥವಿರುವ ಬಗ್ಗೆ ಸಿದ್ಧೇಶ್ವರ ಪುರಾಣ ಸಂಧಿ ೨೫ ಪದ್ಯ ೧೫

ಎಲ್ಲಿ ನೋಡಿದೊಡಲ್ಲಿ ಸದ್ಭಕ್ತವಿತತಿ ಮ
ತ್ತೆಲ್ಲಿ ನೋಡಿದೊಡಲ್ಲಿ ಮಾಹೇಶ್ವರವ್ರಜ ಮ
ದೆಲ್ಲಿ ನೋಡಿದೊಡಲ್ಲಿ ಶುದ್ಧ ಸಿದ್ಧ ಪ್ರಸಾದಿಗಳ ನಿಕರಂ ॥
ಎಲ್ಲಿ ನೋಡಿದೊಡಲ್ಲಿ ಪ್ರಾಣಲಿಂಗಿಗಳು ಮ
ತ್ತೆಲ್ಲಿ ನೋಡಿದೊಡಲ್ಲಿ ಶರಣಸಂಕುಳವು ಬಳಿ
ಕೆಲ್ಲಿನೋಡಿದೊಡಲ್ಲಿ ಲಿಂಗೈಕ್ಯರುಗಳು ಜಗವೆಲ್ಲವೀಪರಿಯಾದುದು ॥೧೫॥

ಈ ಪದ್ಯದಲ್ಲಿ ಭಕ್ತ ಮತ್ತು ಮಾಹೇಶ್ವರ ಶಬ್ದಗಳಿಗೆ ಸ್ಥಲವೆಂಬ ಅರ್ಥವು ಅತ್ಯಂತ ಸ್ಫುಟವಾಗಿ ತೋರುತ್ತಿದೆ.

೩ ಭಕ್ತ ಮತ್ತು ಮಾಹೇಶ್ವರ ಶಬ್ದಗಳಿಗೆ ವರ್ಗವೆಂಬ ಅರ್ಥವು ಸಿದ್ಧೇಶ್ವರ ಪುರಾಣದಲ್ಲಿ ಅನೇಕ ಕಡೆಗೆ ಹೇಳಲ್ಪಟ್ಟಿರುತ್ತದೆ.

......................ವಾಸವಾಗಿಹ ಸಿದ್ಧಲಿಂಗಯತಿ
ಭೂತಳದೊಳಖಿಳ ಶಿವ ಭಕ್ತಮಾಹೇಶ್ವರ ಸಲಹಬೇಕೆಂದು ಕೃಪೆಯಿಂ ॥
ಸಾತಿಶಯವಹ ಮಾನವಾಕಾರವಂ ತಳೆದು
ನೂತನವೆನಿಪ್ಪಂತೆ ಬಂದು ಮಹಿಮೆಗಳಿಂದೆ
ಖ್ಯಾತಿವಡೆವುತ್ತಖಿಳ ದೇಶಂಗಳೊಳ್ ಚರಿಸುತಿರ್ದನತಿಲೀಲೆಯಿಂದೆ ॥

ಸಂಧಿ–೩ ಪದ್ಯ ೧೨

ಮರಣವೆಯ್ದಲು ಮಗಂ ಪಿತರಳುತ್ತೈತರಲ್
ಗುರುಸಿದ್ಧರಾಮನಾತಂಗೆ ಹರಣವನಿತ್ತ
ಪರಿಯಾದುದೆಂದಖಿಳ ಭಕ್ತಮಾಹೇಶ್ವರರು ಪೊಗಳ್ದರಾನಂದದಿಂದೆ

ಸಂಧಿ–೧೬ ಪದ್ಯ ೯

ಪರಮಶ್ರೀಗುರು ನಿರಂಜನಲಿಂಗನವನಿಯಂ
ಪರಿರಕ್ಷಿಸಲ್ಕೆಂದು ಬಂದಖಿಳ ಮಹಿಮೆಯಂ
ಪರುಟವಿಸಿ ತೋರಿ ಸದ್ಭಕ್ತ ಮಾಹೇಶ್ವರರ ಮನದಕಳ್ತಲೆಯನೂಂಕಿ

ಸಂಧಿ–೨೫ ಪದ್ಯ ೨೧

ಈ ಪದ್ಯಗಳಲ್ಲಿ ಭಕ್ತ ಶಬ್ದಕ್ಕೆ ಭಕ್ತವರ್ಗವೆಂಬ ಮತ್ತು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂಬ ಅರ್ಥವು ಸ್ಫುಟವಾಗಿ ತೋರುತ್ತಿದೆ. ಹೇಗೆಂದರೆ ಇವುಗಳ ಲ್ಲಿರುವ ಭಕ್ತ ಶಬ್ದಕ್ಕೆ ಭಕ್ತಸ್ಥಲದವರು, ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ಸ್ಥಲದ ವರು ಎಂದು ಅರ್ಥ ಮಾಡಿದರೆ ಎರಡೇ ಸ್ಥಲದವರ ಉದ್ಧಾರಕ್ಕಾಗಿ ಸಿದ್ಧಲಿಂಗ ಮಹಾಶಿವಯೋಗಿಯ ಅವತಾರವಾಯಿತೆಂದು ಮತ್ತು ಎರಡೇ ಸ್ಥಲದವರ ಉದ್ಧಾರ ವನ್ನು ಆತನು ಮಾಡಿದನೆಂದು ಅರ್ಥವಾಗುವದರಿಂದ ಉಳಿದ ನಾಲ್ಕು ಸ್ಥಲದವರ ಉದ್ಧಾರಕ್ಕಾಗಿ ಸಿದ್ಧಲಿಂಗ ಮಹಾಶಿವಯೋಗಿಯು ಅವತರಿಸಲಿಲ್ಲವೆಂದೂ ಹಾಗು

ಉಳಿದ ನಾಲ್ಕು ಸ್ಥಲದವರ ಉದ್ಧಾರವು ಆತನಿಂದ ಆಗಲಿಲ್ಲವೆಂದೂ ಅರ್ಥವಾಗುವುದರಿಂದ ಅವ್ಯಾಪ್ತಿ ದೋಷಬರುವವದು. ಮತ್ತು ಮೇಲೆ ಹೇಳಿದ ೩೫ ನೆಯ ಸಂಧಿಯ ೧೫ ನೆಯ ಪದ್ಯದಲ್ಲಿ ಆರೂಸ್ಥಲದವರ ಉದ್ಧಾರವಾಗಿರುವದೆಂಬ ಮಾತಿಗೆ ವಿರೋಧವಾಗುತ್ತಿದೆ. ಆದಕಾರಣ ಭಕ್ತಮಾಹೇಶ್ವರ ಎರಡೂ ಶಬ್ದಗಳಿಗೆ ಸ್ಥಲ ಎಂಬ ಅರ್ಥವು ಇಲ್ಲಿ ಮಾಡುವಂತಿಲ್ಲ. ಇದರಂತೆ ಭಕ್ತ ಶಬ್ದಗ್ಕ ಭಕ್ತಿಯುಳ್ಳವನೆಂದು ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನೆಂದೂ ಅರ್ಥ ಮಾಡಿದರೆ ಸರ್ವ ವೀರಶೈವರ ಗ್ರಹಣವಾಗುವದು. ಆದರೆ ವೀರಶೈವರ ಜ್ಯೋತೆಯಲ್ಲಿ ಅಲಿಂಗಿಗಳೂ ಸೇರುವುದರಿಂದ ಅತಿ ವ್ಯಾಪ್ತಿದೋಷ ಬರುವದು. ಅಲಿಂಗಿಗಳ ಉದ್ಧಾರವೂ ಆ ಮಹಾಶಿವಯೋಗಿಯಿಂದ ಆಗಿರುವುದರಿಂದಲೂ ಹಾಗು ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನು, ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂಬ ಅರ್ಥವನ್ನು ಇತರರಂತೆ ವೀರಶೈವರೂ ಒಪ್ಪಿಕೊಂಡಿರುವುದರಿಂದಲೂ ದೋಷವು ಹೇಗೆ ಬರುವದೆಂದರೆ ಭಕ್ತ ಮಾಹೇಶ್ವರ ಎಂಬ ಎರಡು ಶಬ್ದಗಳಲ್ಲಿ ಯಾವುದಾದರೊಂದು ಶಬ್ದವನ್ನು ಹೇಳುವುದರಿಂದಲೇ ಭಕ್ತಿಯುಳ್ಳ ಎಲ್ಲಾ ವೀರಶೈವರು ಅಥವಾ ಶಿವೋಪಾಸಕರಾದ ಎಲ್ಲಾ ವೀರಶೈವರು ಎಂದು ಅರ್ಥವಾಗುತ್ತಿರಲು ಎರಡು ಶಬ್ದಗಳನ್ನು ಜೋಡಿಸಿ ಹೇಳಿದ್ದು ಪುನರುಕ್ತಿ ಅಥವಾ ಅಧಿಕಪದ ದೋಷವಾಗುವದು. ಆದಕಾರಣ ಈ ಪದ್ಯಗಳಲ್ಲಿ ಭಕ್ತ ಶಬ್ದಕ್ಕೆ ಭಕ್ತವರ್ಗವೆಂದು ಮತ್ತು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂದು ಅರ್ಥಮಾಡಿದರೇನೆ ಈ ಎರಡು ವರ್ಗದಲ್ಲಿ ಎಲ್ಲಾ ಸ್ಥಲಗಳ ಆಚಾರವುಳ್ಳ ಸರ್ವವೀರಶೈವರೂ ಬರುವದರಿಂದ ಸಿದ್ಧಲಿಂಗ ಮಹಾಶಿವಯೋಗಿಯ ಅವತಾರವು ಸರ್ವ ವೀರಶೈವರ ಉದ್ಧಾರಕ್ಕಾಗಿ ಆಯಿತೆಂದೂ, ಆತನ ಅವತಾರದಿಂದ ಎರಡೂ ವರ್ಗದಲ್ಲಿಯ ಆರು ಸ್ಥಲದವರ ಬೆಳವಣಿಗೆಯಾಯಿತೆಂದೂ ಸರ್ವ ವೀರಶೈವರ ಉದ್ಧಾರವು ಆತನಿಂದ ಆಯಿತೆಂದೂ ಹೇಳಿದಂತಾಗುವುದರಿಂದ ಯಾವದೋಷವು ಬರುವದಿಲ್ಲ. ಆದುದರಿಂದ ಈ ಪದ್ಯಗಳಲ್ಲಿರುವ ಭಕ್ತಮಾಹೇಶ್ವರ ಶಬ್ದಗಳಿಗೆ ಭಕ್ತವರ್ಗ ಮಾಹೇಶ್ವರ ವರ್ಗ ಎಂಬ ಅರ್ಥವು ಸ್ಫುಟವಾಗಿ ತೋರುತ್ತಿದೆಂದು ಹೇಳಿರುವೆವು.

ಇದೇ ರೀತಿ ಭಕ್ತಮಾಹೇಶ್ವರ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳಿರುವ ಬಗ್ಗೆ ಈ ವೀರಶೈವ ಸದಾಚಾರ ಸಂಗ್ರಹದಲ್ಲಿ ಆಧಾರಗಳಿವೆ. ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನೆಂಬ ಅರ್ಥವಿರುವ ಬಗ್ಗೆ—

> ಗತಾಗತೇಶ ಭಕ್ತಾನಾಂ ಚರಾಣಾಮುಪಚಾರಕಂ ।
> ಕುರ್ವನ್ಯೋವಸತೇ ನಿತ್ಯಂ ಸ ಏವ ಸ್ವಯಜಂಗಮಃ ||೨೧|| ಪ್ರ–೧೫
> ತದ್ದೇಶಸ್ಥಮಹಾಭಕ್ತ ನಿವಹೈಃ ಕೃತಪೂಜನಂ ||೭೯|| ಪ್ರ–೧೫

ಈ ಶ್ಲೋಕಗಳಲ್ಲಿರುವ ಭಕ್ತ ಶಬ್ದಕ್ಕೆ ಭಕ್ತಸ್ಥಲ ಅಥವಾ ಭಕ್ತವರ್ಗ ಎಂದು ಅರ್ಥ ಮಾಡಲಿಕ್ಕೆ ಬರುವದಿಲ್ಲ ಹಾಗೆ ಮಾಡಿದರೆ ಒಂದೇ ಸ್ಥಲದವರಿಗೆ ಅಥವಾ ಒಂದೇ

ವರ್ಗದವರಿಗೆ ಮಠದಲ್ಲಿರುವ ಸ್ವಯಜಂಗಮನು ತನ್ನ ಮಠಕ್ಕೆ ಬಂದಾಗ ಉಪಚಾರ ವನ್ನು ಮಾಡಬೇಕು. ಉಳಿದ ನಾಲ್ಕು ಸ್ಥಲದವರಿಗೂ ಮತ್ತು ಮಾಹೇಶ್ವರ ವರ್ಗದರಿಗೂ ಮಾಡಬಾರದೆಂದು ಅರ್ಥವಾಗುವುದರಿಂದ ವೀರಶೈವರಲ್ಲಿಯೇ ಕೆಲವರಿಗೆ ಆದರಾತಿಥ್ಯಗಳು ನಡೆಯುವದು, ಕೆಲವರಿಗೆ ಆಗದಿರುವದು ದೋಷಕರವಾದುದು. ಆದಕಾರಣ ಶಿವನಲ್ಲಿ ಭಕ್ತಿಯುಳ್ಳ ಯಾವತ್ತು ಭಕ್ತರಿಗೂ ಮಾಹೇಶ್ವರರಿಗೂ ಹಾಗು ಜಂಗಮ ಮೂರ್ತಿಗಳಿಗೂ ಸ್ವಯಜಂಗಮನು ತನ್ನ ಮಠಕ್ಕೆ ಬಂದಕಾಲದಲ್ಲಿ ಉಪ ಚಾರ ಮಾಡಬೇಕೆಂದು ಹೇಳಿದರೆ ಯಾವ ದೋಷವೂ ಬರುವದಿಲ್ಲ. ಇದರಂತೆ ಚರಜಂಗಮನು ತನ್ನ ಶಿಷ್ಯರಾದ ಮರಿಗಳೊಡನೆ ದೇಶಸಂಚಾರ ಮಾಡುವಾಗ್ಗೆ ಆಯಾ ಭಾಗದಲ್ಲಿರುವ ಭಕ್ತಸ್ಥಲದವರೊಂದೇ ಅಥವಾ ಭಕ್ತ ವರ್ಗದವರೊಂದೇ ಆ ಚರಜಂ ಗಮನನ್ನು ಪೂಜಿಸಿದರು ಉಳಿದ ಸ್ಥಲಾಚರಣೆಯುಳ್ಳವರು ಮತ್ತು ಮಾಹೇಶ್ವರ ವರ್ಗದವರು ಆತನ ಹತ್ತಿರ ಬರಲಿಲ್ಲವೆಂದು ಅರ್ಥಮಾಡಿದರೆ ಆ ಚರಜಂಗಮನ ಘನ ತೆಗೆ ಲೋಪಮಾಡಿದಂತಾಗುವದು. ಆದಕಾರಣ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವರು ಎಂದು ಅರ್ಥಮಾಡಿದರೆ ಭಕ್ತಿಯುಳ್ಳ ಭಕ್ತ ವರ್ಗದ ಮತ್ತು ಮಾಹೇಶ್ವರ ವರ್ಗದ ಆರು ಸ್ಥಲದ ಆಚರಣೆಯುನ್ನು ಯಾವತ್ತೂ ವೀರಶೈವರು ಚರಜಂಗಮನನ್ನು ಪೂಜಿ ಸಿದರೆಂದರೆ ಆತನ ಘನತೆಯು ತುಂಬಿಬರುವದು.

ಭಕ್ತ ಮಾಹೇಶ್ವರ ಶಬ್ದಗಳಿಗೆ ವರ್ಗವೆಂಬ ಅರ್ಥವಿರುವಬಗ್ಗೆ ಸದಾಚಾರ ಸಂಗ್ರಹದಲ್ಲಿ ಅನೇಕ ಆಧಾರಗಳಿವೆ.

> ಶುದ್ಧಾಚಾರವತಾಂ ಭಕ್ತಮಾಹೇಶಾನಾಂ ಸಮಾಜ್ಞಯಾ ।
> ದೇಯಂ ತದ್ಗುರುಣಾಂ ತಸ್ಮೈ ಭಕ್ತಮಾಹೇಶ ಸಮ್ಮುಖೇ ॥೪೬॥
> ಆತ್ರೀಯಾಖಿಲ ಶಿಷ್ಯಾಣಾಂ ಭಕ್ತಮಾಹೇಶ ಸಂಸದಾಂ ॥
> ಯಃ ಸಮ್ಮತೋ ಭವೇತ್ತಸ್ಮೈ ದೇಯಂ ತದ್ಗುರುಣಾ ಶಿವೆ ॥೪೮॥
> ಗುರೌ ಲಿಂಗೈಕ್ಯತಾಂ ಯಾತ್ವೇಪ್ಯಡತ್ವಾ ಸ್ವಾಶ್ರಮಂ ತದಾ ॥
> ಭಕ್ತಮಾಹೇಶ್ವರಾಃ ಸರ್ವೇ ಮಿಲಿತಾಸ್ತದನಂತರಂ ॥೬೨॥

ಈ ಶ್ಲೋಕಗಳಲ್ಲಿ ಇದರಂತೆ ಇನ್ನೂ ಅನೇಕ ಶ್ಲೋಕಗಳಲ್ಲಿ ಇರುವ ಭಕ್ತ ಶಬ್ದಕ್ಕೆ ಭಕ್ತಸ್ಥಲ, ಮಾಹೇಶ ಶಬ್ದಕ್ಕೆ ಮಾಹೇಶ್ವರಸ್ಥಲ ಎಂದು ಅರ್ಥಮಾಡಲಿಕ್ಕೆ ಬರುವದಿಲ್ಲ. ಏಕೆಂದರೆ ಸ್ಥಲವೆಂಬ ಅರ್ಥದಲ್ಲಿ ಎರಡೇ ಸ್ಥಲದವರು ಅದರಲ್ಲಿ ಬರುವರು ಉಳಿದ ನಾಲ್ಕು ಸ್ಥಲದವರು ಇದರಲ್ಲಿ ಸಮಾವೇಶವಾಗುವದಿಲ್ಲ. ಇದರಿಂದ ಈ ಶ್ಲೋಕಗಳ ಭಾವಾರ್ಥಕ್ಕೆ ವಿರೋಧ ಬರುತ್ತಿದೆ. ಹೇಗೆಂದರೆ ವೀರಶೈವರ ವಿರಕ್ತ ಮಠಗಳಿಗೆ ಮರಿಯನ್ನು ಆರಿಸುವ ವಿಧಾನವು ಈ ಶ್ಲೋಕಗಳಲ್ಲಿ ಹೇಳಲ್ಪಟ್ಟಿದೆ. ವಿರಕ್ತಮಠದ ಅಧಿಕಾರಿಯಾದ ನಿರಂಜನ ಜಂಗನು ಗುರುವು ತನ್ನ ಹತ್ತಿರ ಅಧ್ಯಯನ ಸೇವಾದಿಗಳನ್ನು ಮಾಡಿಕೊಂಡು ಇರುವ ಮರಿಗಳಲ್ಲಿ ಯಾವ ಮರಿಯು ಭಕ್ತ

ಮಾಹೇಶ್ವರರ ಸಂಮತಿಗೆ ಪಾತ್ರನಾಗುವನೋ ಆ ಮಠಿಗೆ ಉತ್ತರಾಧಿಕಾರವನ್ನು ಕೊಡಬೇಕು. ಭಕ್ತಮಾಹೇಶ್ವರರ ಸಮ್ಮತಿಯಿಲ್ಲದೆ ತನಗೆತಿಳಿದ ಮಠಿಗೆ ಬಲಾತ್ಕಾರ ದಿಂದ ಅಧಿಕಾರ ಕೊಡಬಾರದು ಎಂದೂ, ಒಂದು ಪಕ್ಷ ಆ ಜಂಗಮ ಮೂರ್ತಿಯು ಯಾರಿಗೂ ತನ್ನ ಆಶ್ರಮವನ್ನು ಕೊಡದೆ ಲಿಂಗೈಕ್ಯನಾದರೆ ಆಗ ಭಕ್ತಮಾಹೇಶ್ವರರು ಕೂಡಿ ಮಠಿಯನ್ನು ಚುನಾಯಿಸಬೇಕು ಎಂದೂ ಆ ಶ್ಲೋಕಗಳ ಭಾವಾರ್ಥವಿದೆ. ಹೀಗಿರುವಾಗ್ಗೆ ಎರಡೇ ಸ್ಥಲದವರ ಒಪ್ಪಿಗೆಯಿಂದ ಮಠಿಯನ್ನು ಆರಿಸುವದು ಅವ್ಯಾಪ್ತಿ ದೋಷವುಳ್ಳದ್ದಾಗುವದು. ಹಾಗಾದರೆ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನು ಎಂದು ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂದು ಅರ್ಥಮಾಡಿದರೆ ಎಲ್ಲಾ ವೀರಶೈವರು ಸಮಾವೇಶರಾಗುವರಲ್ಲಾ ಎಂಬ ವಿಚಾರವು ಸಮಂಜಸವಾದುದಲ್ಲ. ಏಕೆಂದರೆ ಹಾಗೆ ಅರ್ಥ ಮಾಡಿದರೆ ಎಲ್ಲಾ ವೀರಶೈವರು ಬರುವದರ ಸಂಗಡ ವೀರಶೈವರಲ್ಲದ ಶಿವಭಕ್ತರು ಶಿವೋಪಾಸಕರೂ ಸಮಾವೇಶವಾಗುವದರಿಂದ ವೀರಶೈವರಲ್ಲದವರ ಒಪ್ಪಿಗೆಯನ್ನು ಪಡೆಯಬೇಕೆಂಬ ವಿಪರೀತಾರ್ಥವಾಗುವುದರಿಂಗ ಅತಿವ್ಯಾಪ್ತಿದೋಷ ಬರುವದು. "ಜಂಗಮೋಜಗದಾರಾಧ್ಯಃ" ಎನ್ನುವಂತೆ ಜಗತ್ಪೂಜ್ಯನಾದ ಜಂಗಮನ ಚುನಾವಣೆ ಯಲ್ಲಿ ಮಾತ್ರ ವೀರಶೈವರಲ್ಲದವರು ಸೇರಿದರೆ ಏನು ದೋಷವಾಗುವದೆಂದರೆ ಕೇಳು, ಭಕ್ತಮಾಹೇಶ್ವರ ಶಬ್ದಗಳಿಗೆ ಭಕ್ತಿಯುಳ್ಳವ ಮತ್ತು ಶಿವೋಪಾಸಕ ಎಂದು ಅರ್ಥ ಮಾಡಿ ವೀರಶೈವರೂ ವೀರಶೈವರಲ್ಲದವರೂ ಎಲ್ಲರೂ ಸೇರಿ ಆರಿಸಲೆಂದರೆ ಆಗ ಈ ಭಕ್ತ ಮತ್ತು ಮಾಹೇಶ್ವರ ಎಂಬ ಎರಡು ಶಬ್ದಗಳಲ್ಲಿ ಯಾವುದಾದರೊಂದು ಶಬ್ದವನ್ನು ಹೇಳುವುದರಿಂದಲೇ ಶಿವಭಕ್ತಿಯುಳ್ಳ ವೀರಶೈವರು ಮತ್ತು ಇತರರು ಅಥವಾ ಶಿವೋ ಪಾಸಕರಾದ ವೀರಶೈವರು ಮತ್ತು ಇತರರು ಎಲ್ಲರದೂ ಗ್ರಹಣವಾಗುತ್ತಿರಲು ಎರಡು ಶಬ್ದಗಳನ್ನು ಕೂಡಿಸಿ ಹೇಳಿರುವದು ಪುನರುಕ್ತಿ ಅಥವಾ ಅಧಿಕಪದ ದೋಷವಾಗುವದು ಆದುದರಿಂದ ಹಾಗೆ ಅರ್ಥಮಾಡಲಿಕ್ಕೆ ಬರುವದಿಲ್ಲ. ಇಲ್ಲಿ ಭಕ್ತಶಬ್ದಕ್ಕೆ ಭಕ್ತವರ್ಗ ವೆಂದು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂದೂ ಅರ್ಥಮಾಡಿದರೇನೆ ಆರು ಸ್ಥಲಗಳ ಆಚರಣೆಯುಳ್ಳ ಯಾವತ್ತು ವೀರಶೈವರು ಆ ಎರಡು ವರ್ಗದಲ್ಲಿ ಇರುವದ ರಿಂದ ಯಾವ ದೋಷವೂ ಬರುವದಿಲ್ಲ. ಆದಕಾರಣ ಆ ಎರಡು ಶಬ್ದಗಳಿಗೆ ಇಲ್ಲಿ ವರ್ಗವೆಂದೇ ಅರ್ಥಮಾಡಬೇಕು.

> ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಾ, ಸಾ ಷೋಡಶಾವಧಿ ।
> ಗೌಣಾ, ತದೂರ್ಧ್ವಮಧಮಾ ದೀಕ್ಷಾ ವೀರಾನ್ವಯಾಯಿನಾಂ ॥೨೬॥ ಪ್ರ-೭
> ವೀರಶೈವಾಭಿಧಾ ದೀಕ್ಷಾ ವೀರಮಾಹೇಶ್ವರಾಭಿಧಾ ॥
> ಏವಂ ಹಿ ಭಿದ್ಯತೇ ದೀಕ್ಷಾ ಭಕ್ತಮಾಹೇಶ್ವರೇಷು ಚ ॥೪೮॥ ಪ್ರ-೧೧

ವೀರಶೈವರಿಗೆ ಹುಟ್ಟಿದಂದಿನಿಂದ ೮ ನೆಯ ವರ್ಷದಲ್ಲಿ ಮಾಡುವ ದೀಕ್ಷೆಯು ಮುಖ್ಯವಾದುದು, ಎಂಟು ವರ್ಷಗಳನಂತರ ಹದಿನಾರು ವರ್ಷದೊಳಗಾಗಿ ಮಾಡು

ವದು ಗೌಣವಾದುದು, ಹದಿನಾರು ವರ್ಷಗಳನಂತರ ಮಾಡುವ ದೀಕ್ಷೆಯು ಕನಿಷ್ಠ ವಾದುದು. ಈ ದೀಕ್ಷೆಯು ವೀರಶೈವದೀಕ್ಷಾ ಮತ್ತು ವೀರಮಾಹೇಶ್ವರ ದೀಕ್ಷಾ ಎಂದು ಎರಡು ವಿಧವಾಗಿರುತ್ತದೆ. ಭಕ್ತರಿಗೆ ಮಾಡುವ ದೀಕ್ಷೆಗೆ ವೀರಶೈವ ದೀಕ್ಷಾ ಎಂದೂ ಮಾಹೇಶ್ವರರಿಗೆ ಮಾಡುವ ದೀಕ್ಷೆಗೆ ವೀರಮಾಹೇಶ್ವರ ದೀಕ್ಷಾ ಎಂದು ಹೇಳುವರು. ಈ ಶ್ಲೋಕದಲ್ಲಿರುವ ಭಕ್ತ ಮಾಹೇಶ್ವರ ಶಬ್ದಗಳಿಗೆ ಸ್ಥಲವೆಂದು ಅರ್ಥಮಾಡಿದರೆ ಈ ಎರಡು ಸ್ಥಲದವರಿಗೆ ಎರಡು ವಿಧ ದೀಕ್ಷೆಯನ್ನು ಹೇಳಿದಂತೆ ಉಳಿದ ನಾಲ್ಕು ಸ್ಥಲದವರಿಗೆ ನಾಲ್ಕು ವಿಧವಾದ ದೀಕ್ಷೆಯನ್ನು ಹೇಳಬೇಕಾಗುತ್ತದೆ. ಹಾಗೆ ಎಲ್ಲಿಯೂ ಹೇಳಲ್ಪಟ್ಟಿಲ್ಲ ಆದುದರಿಂದ ಸ್ಥಲವೆಂದು ಅರ್ಥಮಾಡಲು ಬರುವದಿಲ್ಲ. ಭಕ್ತಶಬ್ದಕ್ಕೆ ಭಕ್ತಿಯುಳ್ಳವನು ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂದು ಅರ್ಥ ಮಾಡಿದರೆ ಯಾವತ್ತೂ ವೀರಶೈವರಿಗೆ ದೀಕ್ಷಾಮಾಡಬೇಕೆಂಬುದು ಸಿದ್ಧವಾದರೂ ಎರಡು ದೀಕ್ಷೆಗಳಲ್ಲಿ ಯಾವುದಾದರೊಂದು ದೀಕ್ಷೆಯನ್ನು ಮತ್ತು ಭಕ್ತಮಾಹೇಶ್ವರ ಈ ಎರಡು ಶಬ್ದಗಳಲ್ಲಿ ಯಾವುದಾದರೊಂದು ಶಬ್ದವನ್ನು ಹೇಳಿದ್ದರೂ ನಡೆಯುತ್ತಿರು ವಾಗ್ಗೆ ಎರಡೆರಡನ್ನು ಹೇಳಿದ್ದು ವ್ಯರ್ಥವಾಗುವದು. ಆದುದರಿಂದ ಭಕ್ತ ಶಬ್ದಕ್ಕೆ ಭಕ್ತವರ್ಗವೆಂದೂ ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂದೂ ಅರ್ಥಮಾಡಿದ ರೇನೆ ಎರಡೆರಡು ಹೇಳಿದ್ದು ಸಾರ್ಥಕವಾಗುವದು.

ಇಲ್ಲಿಯವರೆಗೆ ಭಕ್ತವರ್ಗ ಮತ್ತು ಮಾಹೇಶ್ವರವರ್ಗ ಎಂಬ ಎರಡು ವರ್ಗಗಳು ಇರುತ್ತವೆಂಬುದನ್ನು ತರ್ಕದಿಂದ ಸಿದ್ಧಮಾಡಿದ್ದಾಯಿತು. ಇನ್ನು ಮುಂದೆ ಸ್ಪಷ್ಟ ಶಬ್ದಗಳಿಂದಲೆ ಆ ಎರಡು ವರ್ಗಗಳು ಇರುತ್ತವೆಂಬುದನ್ನು ನೋಡಿರಿ.

ಸ್ವಯಂಭುವಾಗಮದಲ್ಲಿ ಪರಮಾತ್ಮನು ಪಾರ್ವತಿಯನ್ನು ಕುರಿತು ಅಪ್ಪಣೆ ಮಾಡಿರುವನು.

## ಭಕ್ತವರ್ಗ (ವಂಶ)

ಪಂಚಾಸ್ಯ ಪಂಚಪುತ್ರಾಣಾಂ ದೀಕ್ಷಾಂಕೃತ್ವಾ ವಿಧಾನತಃ ।
ಉದ್ಧಾರ್ಯ ಭುವಿ ಮದ್ಭಕ್ತಾನ್ ಪಂಚಾರಾಧ್ಯಾ ಇತೀರಿತಾಃ ॥ ೪೫ ॥
ಆರಾಧ್ಯೈಃ ಪಂಚಭಿರ್ಯೇತು ದೀಕ್ಷಿತಾಃ ಖಲು ಪಂಚಮಾಃ ॥
ವಂಶಸ್ತು ಪಂಚಮಾನಾಂ ವೈ ಗತೋವೃದ್ಧಿಂ ವರಾನನೇ ॥೪೬॥
ತಥಾ ಸರ್ವೇಷು ವರ್ಣೇಷು ಶ್ರೇಷ್ಠಾಃ ಪಂಚಮವಂಶಜಾಃ ॥ ಸದಾಚಾರ ಪ್ರ ೫

ಎಲೈ ದೇವಿಯೆ ಪಂಚವಕ್ತ್ರನ ಐದು ಜನ ಮಕ್ಕಳಿಗೆ ವಿಧಾನೋಕ್ತವಾಗಿ ದೀಕ್ಷೆಯನ್ನು ಮಾಡಿ ಭೂಮಿಯಲ್ಲಿ ನನ್ನ ಭಕ್ತರನ್ನು ಉದ್ಧಾರ ಮಾಡಿರೆಂದು ಹೇಳಿದ ಪ್ರಕಾರ ಐದು ಜನ ಆಚಾರ್ಯರು ಐದು ಜನ ಪಂಚಮರಿಗೆ ದೀಕ್ಷೆಯನ್ನು ಮಾಡಿರುವರು.

ಐದು ಜನ ಪಂಚಮರಿಗೆ ದೀಕ್ಷಾ ಮಾಡಲು ಐದು ಜನ ಆಚಾರ್ಯರು ಏಕೆ ಬೇಕಾಗಿತ್ತು. ಒಬ್ಬ ಆಚಾರ್ಯನಿಂದಲೇ ಆ ಕಾರ್ಯವು ಆಗುತ್ತಿದ್ದಿಲ್ಲವೋ? ಎಂದು ಯಾರಿಗಾದರೂ ಸಂಶಯ ಬರಬಹುದು. ಒಬ್ಬ ಆಚಾರ್ಯನು ಐದು ಜನರಿಗೇಕೆ ಸಾವಿರಾರು ಜನರಿಗೆ ದೀಕ್ಷಾ ಮಾಡಬಹುದು. ಆದರೆ ಒಬ್ಬ ಗುರುವಿನಿಂದಲೆ ಐದು ಜನ ಪಂಚಮರಿಗೆ ದೀಕ್ಷಾದಿ ಸಂಸ್ಕಾರಗಳಾದರೆ ಎಲ್ಲರೂ ಒಬ್ಬ ಗುರುವಿನ ಮಕ್ಕಳಾಗುವುದರಿಂದ ಸಹೋದರಭಾವವುಂಟಾಗಿ ಈ ಐದು ಜನ ಪಂಚಮರಲ್ಲಿ ಪರಸ್ಪರ ವಿವಾಹಾದಿ ಕಾರ್ಯಗಳು ನಡೆಯಬಾರದಾಗಿ ಅವರ ವಂಶವು ವೃದ್ಧಿಯಾಗುತ್ತಿರಲಿಲ್ಲ. ಆದಕ್ಕಾಗಿ ಐದು ಜನ ಗುರುಗಳು ಬೇರೆ ಬೇರೆಯಾಗಿ ಐದು ಜನ ಪಂಚಮರಿಗೆ ದೀಕ್ಷಾದಿಗಳನ್ನು ಮಾಡುವದಕ್ಕೆ ಅವಶ್ಯವಾಗಿ ಬೇಕಾಗುವರು. ಆದಕಾರಣ ಐದು ಜನ ಪಂಚಮರು ಐದು ಜನ ಆಚಾರ್ಯರಿಂದ ಬೇರೆ ಬೇರೆ ದೀಕ್ಷಿತರಾಗಿರುವರು. ಇದರಿಂದ ಒಬ್ಬ ಗುರುವಿನ ಪುತ್ರನಾದ ಪಂಚಮನೊಡನೆ ಮತ್ತೊಬ್ಬ ಗುರುವಿನ ಪುತ್ರನಾದ ಇನ್ನೊಬ್ಬ ಪಂಚಮನಿಗೆ ಶರೀರ ಸಂಬಂಧಾದಿಗಳನ್ನು ಮಾಡಲು ತೊಂದರೆ ಇಲ್ಲದಂತಾಗಿ ಈ ಪಂಚಮರ ವಂಶವು ವೃದ್ಧಿಯನ್ನು ಹೊಂದಿರುವದು. ಕಾಲಕಾಲಕ್ಕೆ ವೀರಶೈವ ಧರ್ಮದಲ್ಲಿ ಸೇರುವ ಸರ್ವವರ್ಣದ ಭಕ್ತವರ್ಗದವರಲ್ಲಿ ಪಂಚಮ ವಂಶದ ಭಕ್ತರು ಶ್ರೇಷ್ಠರು. ಈ ಶ್ಲೋಕಗಳಲ್ಲಿ ಭಕ್ತವರ್ಗದ ಪಂಚಮರ ವಿಷಯವನ್ನು ಹೇಳುವಾಗ್ಗೆ ವಂಶ ಶಬ್ದವನ್ನೇ ಪ್ರಯೋಗಿಸಿರುವುದರಿಂದ ತರ್ಕ ಮಾಡುವ ಪ್ರಸಂಗವೇ ಇಲ್ಲ. ಭಕ್ತವರ್ಗ ಬೇರೆಯಾಗಿದೆಂಬುದು ಅತ್ಯಂತ ಸ್ಫುಟವಾಗಿದೆ.

## ಮಾಹೇಶ್ವರ ವರ್ಗ (ವಂಶ)

ಗುರುಸ್ಥಲ ಸಮಾಖ್ಯಾತಾ ವೀರಮಾಹೇಶ್ವರಾಭಿಧಾಃ ।
ಏತೇ ಗುರುಪದಾಧ್ಯಕ್ಷಾಃ ನಾನ್ಯೇ ಲಾಂಛನಧಾರಿಣಃ
ಅತಃಸ್ವವಂಶಜಾನ್ ಬಾಲಾನ್ ಗೃಹೀತ್ವಾ ತಾನ್‌ವರಾನನೇ ॥೧೧॥ ಪ್ರ ೧೪
ವೀರಮಾಹೇಶ್ವರೀಂ ದೀಕ್ಷಾಂ ಕೃತ್ವಾ ತೇ ಪುತ್ರವರ್ಗಿಣಃ ॥
ಅತೋ ವಿಶಿಷ್ಟವೀರೇತಿ ವೀರಮಾಹೇಶ್ವರೇತಿ ಚ ।
ಪರ್ಯಾಯೋ ವರ್ತತೇ ದೇವಿ ಜಂಗಮಸ್ಯ ಮಹಾತ್ಮನಃ ॥೪೫॥ ಪ್ರ ೧೧

ಜಂಗಮರಿಗೆ ಅಯ್ಯನವರು, ಗಣಂಗಳು. ವಿಶೇಷ ವೀರಶೈವರು, ವೀರಮಾಹೇಶ್ವರರು ಎಂಬ ಪರ್ಯಾಯ ಶಬ್ದಗಳಿರುತ್ತವೆ. ಇಂತಹ ಗುರುಸ್ಥಲ ಮಠದವರು ಎಂದು ಪ್ರಸಿದ್ಧರಾದ, ವೀರಮಾಹೇಶ್ವರ ಎಂಬ ಹೆಸರುಳ್ಳ ಜಂಗಮರು ಗುರುಸ್ಥಾನಕ್ಕೆ ಅಧಿಕಾರಿಗಳಾಗಲು ಅರ್ಹರಿರುತ್ತಾರೆ. ಸಾಮಾನ್ಯವಾಗಿ ಜಂಗಮ ವೇಷಧಾರಿಗಳು ಗುರುಪೀಠಕ್ಕೆ ಅಧಿಕಾರಿಗಳಾಗಲು ಯೋಗ್ಯರಲ್ಲ. ಆದುದರಿಂದ ಈ ಗುರುಸ್ಥಲ ಮಠದ ಮಾಹೇಶ್ವರರು ತಮ್ಮ ವಂಶದಲ್ಲಿ ಹುಟ್ಟಿದಂತಹ ಬಾಲಕರಿಗೆ ವೀರಮಾಹೇಶ್ವರ

ದೀಕ್ಷೆಯನ್ನು ಮಾಡಿ ಮುಂದೆ ಸಮಯಾನುಸಾರ ಆ ವಟುಗಳಿಗೆ ಪಟ್ಟಾಧಿಕಾರ ವನ್ನಾಗಲಿ, ಚರಾಧಿಕಾರವನ್ನಾಗಲಿ, ನಿರಂಜನ ಜಂಗಮಾಧಿಕಾರವನ್ನಾಗಲಿ ಮಾಡು ವರು ಎಂದು ಆ ಶ್ಲೋಕಗಳ ಅರ್ಥವಿದೆ. ಇಲ್ಲಿ ಮಾಹೇಶ್ವರರ ವಿಷಯವನ್ನು ಹೇಳುವಾಗ್ಗೆ ವಂಶ ಶಬ್ದವನ್ನೇ ಪ್ರಯೋಗಿಸಿರುವುದರಿಂದ ಮಾಹೇಶ್ವರ ವರ್ಗದ ಬಗ್ಗೆ ತರ್ಕ ಮಾಡುವ ಪ್ರಸಂಗವೇ ಇರುವದಿಲ್ಲ. ಭಕ್ತವರ್ಗಕ್ಕಿಂತಲೂ ಮಾಹೇಶ್ವರ ವರ್ಗವು ಬೇರೆಯಾಗಿದೆಂಬುದು ಅತ್ಯಂತ ಸ್ಫುಟವಾಗಿ ತೋರುತ್ತಿದೆ.

ಈ ರೀತಿಯಾಗಿ ಅನೇಕ ಧರ್ಮಗ್ರಂಥಗಳ ಆಧಾರಗಳಿಂದ ಭಕ್ತ ವರ್ಗವು ಮತ್ತು ಮಾಹೇಶ್ವರ ವರ್ಗವು ಬೇರೆ ಬೇರೆಯಾಗಿರುವದು. ಶಾಸ್ತ್ರ ಸಿದ್ಧವಾಗಿದ್ದು, ಸಾವಿರಾರು ವರ್ಷಗಳಿಂದ ಅವೆರಡು ಬೇರೆ ಬೇರೆಯಾಗಿ ಪರಸ್ಪರ ಸಹಕಾರ ಭಾವದಿಂದ ನಡೆದುಕೊಂಡು ಬಂದಿದ್ದರೂ ಇತ್ತೀಚೆಗೆ ವೀರಶೈವರಲ್ಲಿಯೇ ಕೆಲವರು ಭಕ್ತ ಮಾಹೇಶ್ವರ ಶಬ್ದಗಳಿಗಿರುವ ಸ್ಥಲ, ವರ್ಗ ಎಂಬ ಅರ್ಥಗಳಲ್ಲಿ ಎಲ್ಲಿ ಯಾವುದನ್ನು ಗ್ರಹಿಸಬೇಕೆಂಬ ಮರ್ಮವನ್ನರಿಯದೆ ಭಕ್ತಸ್ಥಲದ ಆಚಾರವುಳ್ಳವನು ಅಸ್ಥಲದ ಅವಾಂತರ ಆಚರಣೆಗಳು ಪೂರ್ಣವಾದ ನಂತರ ಮಾಹೇಶ್ವರ ಸ್ಥಲದ ಆಚರಣೆಗಳನ್ನು ಆಚರಿಸಲು ಅರ್ಹನಾಗಿ ಆ ಸ್ಥಲದ ಎಲ್ಲಾ ಆಚರಣೆಗಳು ಪೂರ್ಣವಾದ ನಂತರ ಪ್ರಸಾದಿ ಸ್ಥಲದಆಚಾರವನ್ನು ಅದರ ನಂತರ ಪ್ರಾಣಲಿಂಗಿ ಸ್ಥಲದಆಚಾರಗಳನ್ನು ಅದರ ನಂತರ ಶರಣ ಸ್ಥಲದ ಆಚಾರಗಳನ್ನು ಅದರ ತರುವಾಯ ಐಕ್ಯ ಸ್ಥಲದ ಆಚಾರಗಳನ್ನು ಆಚರಿಸಲು ಅರ್ಹನಾಗುವನೆಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ ಭಕ್ತನಿದ್ದವನೇ ಮಾಹೇಶ್ವರ (ಜಂಗಮ)ನಾಗುತ್ತಾನೆ. ಎಂಬ ತಪ್ಪು ಕಲ್ಪನೆಯುಳ್ಳವರಾಗಿರುವರು. ಇಂಥವರಿಗೆ ಇತರ ವಿದ್ಯೆಯಲ್ಲಿ ಪರಿಪೂರ್ಣ ಜ್ಞಾನವಿರಬಹುದು. ಆದರೆ ವೀರಶೈವ ಧರ್ಮ ಶಾಸ್ತ್ರದ ಯಥಾರ್ಥ ಜ್ಞಾನವೂ ಅಥವಾ ಪೂರ್ಣ ಮೂಢ ನಂಬಿಕೆಯೂ ಎರಡರಲ್ಲಿ ಒಂದೂ ಇಲ್ಲದೆ ವೀರಶೈವ ಧಾರ್ಮಿಕ ವಿಷಯಗಳ ಅರ್ಧಮರ್ಧ ಜ್ಞಾನದಿಂದ ಈ ವಿಧವಾದ ಭಾವನೆಯು ಹುಟ್ಟಿರುತ್ತದೆ. ಇನ್ನು ಕೆಲವರು ಭಕ್ತ ನಿದ್ದವನು ದೀಕ್ಷಾ ಮಾಡಿಸಿಕೊಂಡರೆ ಮಾಹೇಶ್ವರನಾಗುತ್ತಾನೆಂಬ ತಪ್ಪು ತಿಳಿವಳಿಕೆ ಯಿಂದ ದೀಕ್ಷಾ ಮಾಡಿಸಿಕೊಂಡು ಮಾಹೇಶ್ವರನಾದೆನೆಂಬ ಭಾವನೆಯುಳ್ಳವನಾಗಿ ಮುಂದೆ ಲಗ್ನ ಮಾಡಿಕೊಂಡು ಮಕ್ಕಳು ಮರಿಗಳನ್ನು ಹಡೆದು ಸಂಸಾರದಲ್ಲಿ ಮುಳಿಗಿದ್ದರೂ ನಾನು ಮಾಹೇಶ್ವರನಾಗಿರುವೆನೆಂಬ ಅಪಸಿದ್ಧಾಂತವನ್ನು ಪ್ರಚಾರ ಮಾಡಲಿಕ್ಕೆ ಹತ್ತಿರುವರು. ವೀರಶೈವ ಧರ್ಮ ಶಾಸ್ತ್ರಕ್ಕೆ ವಿರೋಧವಾಗಿ ಮನಬಂದಂತೆ ನಡೆಯಲಿಕ್ಕೆ ಹತ್ತಿದವರಿಗೆ ಈ ಇಪ್ಪತ್ತನೆಯ ಶತಮಾನದ ಸ್ವಾತಂತ್ರ್ಯ ಯುಗದಲ್ಲಿ ಯಾರಿಂದ ಏನೂ ಮಾಡಲು ಸಾಧ್ಯವಿಲ್ಲದಿದ್ದರೂ ಧರ್ಮ ಶಾಸ್ತ್ರ ವಿರುದ್ಧವಾಗಿ ಮನಬಂದಂತೆ ನಡೆಯುವವರಿಗೆ ಒಂದೇ ಜನ್ಮದಲ್ಲಿ ಪ್ರಾಪ್ತವಾಗುವ ಲಿಂಗಾಂಗ ಸಾಮರಸ್ಯ ರೂಪ ಮುಕ್ತಿಯು ದೊರೆಯುದೆ ಭವಸಾಗರದಲ್ಲಿ ಮುಳುಮುಳುಗಿ ತೇಲುತ್ತ ಸಂಸಾರ

ದಲ್ಲಿಯೇ ಕೊಳೆಯುತ್ತ ಬೀಳುವದು ಮಾತ್ರ ತಪ್ಪಿದ್ದಲ್ಲ. "ಬುದ್ಧಿಃ ಕರ್ಮಾನು ಸಾರಿಣೀ" ಎಂಬ ಪ್ರಮಾಣದಂತೆ ಹಿಂದಿನ ಕರ್ಮಾನುಸಾರವಾಗಿ ಅವರಿಗೆ ಆ ತರಹದ ಬುದ್ಧಿಯು ಹುಟ್ಟುವದೆಂದು ತಿಳಿದುಕೊಂಡು ಸಮಾಧಾನ ದಿಂದಿರುವದೇ ಸುಜನ ಮಾರ್ಗವು. ಬೂದಿಯಲ್ಲಿ ಮುಚ್ಚಿದ ಬೆಂಕಿಯನ್ನು ಇಲ್ಲಿ ಬೆಂಕಿ ಇದೆಯೆಂಬ ಜ್ಞಾನವಿಲ್ಲದೆ ತುಳಿದರೆ ಆಗ ಬೆಂಕಿಯು ಪಾಪ, ಇವನು ತಿಳುವಳಿಕೆ ಇಲ್ಲದೆ ತುಳಿದಿರುವನೆಂದು ಅವನ ಮೇಲೆ ಕರುಣೆಯನ್ನು ತೋರಿಸದೇ ತಿಳಿದೇ ತುಳಿಯಲಿ ತಿಳಿಯದೇ ತುಳಿಯಲಿ ತುಳಿದವನನ್ನು ಸುಡುವ ಕಾರ್ಯವನ್ನು ಮಾಡು ವಂತೆ ಧರ್ಮಜ್ಞಾನವಿಲ್ಲದಲೇ ಆಗಲಿ ಜ್ಞಾನವಿದ್ದೇ ಆಗಲಿ ವೀರಶೈವ ಧರ್ಮ ಶಾಸ್ತ್ರಕ್ಕೆ ವಿರೋಧವಾಗಿ ವರ್ತಿಸಿದವನಿಗೆ ತಕ್ಕ ಪ್ರಾಯಶ್ಚಿತವು ಆಗೇ ತೀರುವದು. "ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ" ಎಷ್ಟೋ ಕೋಟಿ ವರ್ಷಗಳು ಗತಿಸಿ ಹೋದರೂ ಮಾಡಿದ ಕರ್ಮದ ಫಲವನ್ನು ಅನುಭವಿಸಿಯೇ ತೀರಬೇಕಾಗುವದು. ಆದ್ದರಿಂದ ಭಕ್ತವರ್ಗವಾದರೇನು ಕಡಿಮೆಯಲ್ಲ. ಮಾಹೇಶ್ವರ ವರ್ಗವಾದರೇನು ಹೆಚ್ಚಿನದಲ್ಲ. ಪರಂಪರಾಗತವಾಗಿ ಬಂದುದನ್ನು ಅಲ್ಲಗಳೆಯದೆ ಅವರವರು ತಮ್ಮ ತಮ್ಮ ಸ್ಥಾನ ಮಾನಗಳಿಗೂ ಸ್ಥಲ ಕಟ್ಟಿನ ಆಚರಣೆಗೂ ಅನುಗುಣವಾಗಿ ವೀರಶೈವ ಧರ್ಮ ಶಾಸ್ತ್ರಕ್ಕೆ ವಿರೋಧವಾಗದಂತೆ ನಡೆದು "ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ" ಎಂಬ ಪ್ರಮಾಣದಂತೆ ಒಂದೇ ಜನ್ಮದಲ್ಲಿ ಲಿಂಗಾಂಗ ಸಾಮರಸ್ಯರೂಪ ಪರಮಾನಂದದಲ್ಲಿ ಮಗ್ನರಾಗಬೇಕೆಂದು ಹಾರೈಸುತ್ತೇವೆ.

ಈ ಸಂಗ್ರಹಕಾರನು ಬೇರೆ ಬೇರೆ ಪ್ರಮಾಣ ಗ್ರಂಥಗಳಿಂದ ತಾನು ಸಂಗ್ರಹಿಸಿದ ಶ್ಲೋಕ ಮತ್ತು ವಾಕ್ಯಗಳನ್ನು ಸಂಯೋಜನೆ ಮಾಡುವಾಗ್ಗೆ ಕೆಲವು ಕಡೆ ಪ್ರಕರಣ ಹಾಗೂ ಪೂರ್ವಾಪರ ಸಂಬಂಧ ಇತ್ಯಾದಿಗಳಿಗೆ ವಿರೋಧವಾಗಿಯೂ ಅಯುದ್ಧ ವಾಕ್ಯ ಗಳನ್ನು ಜೋಡಿಸಿರುವನೆಂದು ಹಿಂದೆ ಹೇಳಿದುದನ್ನು ಇಲ್ಲಿ ತೋರಿಸುವೆವು. ಬೇರೆ ಗ್ರಂಥಗಳಲ್ಲಿ ವೀರಶೈವರೊಳಗೆ ಸಾಮಾನ್ಯ ವೀರಶೈವ, ವಿಶೇಷ ವೀರಶೈವ. ನಿರಾಭಾರಿ ವೀರಶೈವ ಎಂದು ಮೂರು ಭಾಗಗಳನ್ನು ಮಾಡಿ ಸಾಮಾನ್ಯ ವೀರಶೈವನೆಂದರೆ ಭಕ್ತ ವರ್ಗದ ಯಾವತ್ತು ವೀರಶೈವರು, ವಿಶೇಷ ವೀರಶೈವರೆಂದರೆ ಮಠಸ್ಥಲದ ಮಾಹೇಶ್ವರ ರಿಂದ ಪಟ್ಟಚರಾಧಿಕಾರಿಗಳು ಹಾಗು ಸಿಂಹಾಸನಾಧಿಪತಿಗಳ ವರೆಗಿನವರು. ನಿರಾಭಾರಿ ವೀರಶೈವರೆಂದರೆ ನಿರಂಜನ ಜಂಗಮರು (ವಿರಕ್ತರು) ಎಂದು ಹೇಳಿರುವರು. ಈ ಸದಾಚಾರ ಸಂಗ್ರಹದಲ್ಲಿ ವೀರಶೈವರೊಳಗೆ ಸಾಮಾನ್ಯ ವೀರಶೈವ, (ಶುದ್ಧ) ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ನಾಲ್ಕು ಭಾಗ ಮಾಡಿ, ಸಾಮಾನ್ಯ ವೀರಶೈವರೆಂದರೆ ಪ್ರಪ್ರಥಮದಲ್ಲಿ ಅನ್ಯ ಧರ್ಮದಲ್ಲಿ ಜನಿಸಿದ್ದು ಅದೇ ಜನ್ಮವನ್ನು ಕಡೆಯದಾಗಿ ಮಾಡಿಕೊಳ್ಳಬೇಕೆಂಬ ಸದುದ್ದೇಶದಿಂದ ವೀರಶೈವ ಧರ್ಮದಲ್ಲಿ ಯಾವುದೋ ಒಂದು ಕಾಲದಲ್ಲಿ ಸಮಾವೇಶ ಹೊಂದಿದ ಆಗಂತುಕರು.

ಶುದ್ಧ ವೀರಶೈವರೆಂದರೆ, ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನಿಗೆ ಸೃಷ್ಟಿ ಮಾಡುವದೇ ತಿಳಿಯದಂತಾದಾಗ್ಗೆ ಸೃಷ್ಟಿಮಾಡುವ ಪದ್ಧತಿಯನ್ನು ಬ್ರಹ್ಮನಿಗೆ ತಿಳಿಸಿಕೊಡುವುದಕ್ಕಾಗಿ ಸಾಕ್ಷಾತ್ ಪರಶಿವನು ಯಾವ ಪ್ರಮಥರನ್ನು ಸೃಷ್ಟಿ ಮಾಡಿದನೊ ಆ ಪ್ರಮಥ ವಂಶೀಯರಾದ ಸ್ವತಂತ್ರವಾಗಿ ಗೋತ್ರಸೂತ್ರಾದಿಗಳುಳ್ಳ ಆನುವಂಶಿಕರು, ವಿಶೇಷ ವೀರಶೈವರೆಂದರೆ ಪಟ್ಟ ಚರಾಧಿಕಾರಿಗಳೂ ಸಿಂಹಾಸನಾಧಿಪತಿಗಳು, ನಿರಾಭಾರಿಗಳೆಂದರೆ ನಿರಂಜನ ಜಂಗಮರು, ಎಂದು ಹೇಳಲ್ಪಟ್ಟಿರುತ್ತದೆ. ಈ ಎರಡು ರೀತಿಯಿಂದಲೂ ಪಟ್ಟಾಧಿಕಾರಿಗಳು, ಚರಮೂರ್ತಿಗಳು, ಸಿಂಹಾಸನಾಧಿಪತಿಗಳು ಇವರೆಲ್ಲರು ವಿಶೇಷ ವೀರಶೈವರಲ್ಲಿ ಸೇರುವರು. ಪಟ್ಟಚರಾಧಿಕಾರಿಗಳೂ ಸಿಂಹಾಸನಾಧಿಪತಿಗಳು ಸಾಮಾನ್ಯ, ವಿಶೇಷ ನಿರಾಭಾರಿ ಎಂಬ ಮೂವರಲ್ಲಾಗಲಿ ಈ ಗ್ರಂಥದ ನಾಲ್ಕು ಭೇದಗಳಲ್ಲಾಗಲಿ ಸೇರುವದಿಲ್ಲವೆಂದು ಯಾರಾದರು ಹೇಳಿದರೆ, ವೀರಶೈವ ಪ್ರಭೇದಗಳಲ್ಲಿ ಸೇರದಿದ್ದರೆ ಅವರೆಲ್ಲರೂ ವೀರಶೈವರೇ ಆಗುವದಿಲ್ಲ, ಆಗ ವೀರಶೈವರಲ್ಲದ ಇವರು ವೀರಶೈವರಿಗೆ ಗುರುಗಳಾಗಲಿಕ್ಕೂ ಬರುವದಿಲ್ಲ. ಕಾರಣ ಒಂದು ಭಾಗದಲ್ಲಿ ಸೇರಲೇ ಬೇಕು. ಈ ಸದಾಚಾರ ಸಂಗ್ರಹದ ಎಂಟನೆಯ ಪ್ರಕರಣದಲ್ಲಿ ವಿಶೇಷ ವೀರಶೈವನ ಲಕ್ಷಣವನ್ನು ಹೇಳುವಾಗ್ಗೆ "ದಂಡಖಂಡನ ಶಿಕ್ಷಾಸು ದೂರೀಕರಣಮಾಚರೇತ್॥ ಅಹಿಂಸಾ ಪರಮೋಧರ್ಮಃ ಇತ್ಯಂಗೀಕೃತಮಾನಸಃ" ಎಂಬ ಶ್ಲೋಕವು ನಡುವೆ ಸೇರಿದೆ. ಅಹಿಂಸೆಯೇ ಶ್ರೇಷ್ಠ ಧರ್ಮವೆಂದು ತಿಳಿದ ವಿಶೇಷ ವೀರಶೈವನು ದಂಡ, ಶಿಕ್ಷಾ, ಖಂಡನ ಮೊದಲಾದವನ್ನು ಮಾಡಬಾರದೆಂದು ಅದರ ಅರ್ಥವು. ವೀರಶೈವರಲ್ಲಿ ಯಾರಾದರೂ ಅಪೇಯಪಾನ, ಅಭಕ್ಷ್ಯಭಕ್ಷಣ, ಭವಿಸಂಪರ್ಕ, ಭವಿಪಾಕಸೇವನ, ಗುರುಲಿಂಗ ಜಂಗಮ ದೂಷಣ ಮೊದಲಾದ ಅಧರ್ಮಾಚರಣಗಳನ್ನು ಆಚರಿಸಿದರೆ ಅಂಥವರಿಗೆ ದಂಡ ಕಟ್ಟುವದು, ಬಹಿಷ್ಕಾರ ಹಾಕುವದು ಮುಂತಾದ ಶಿಕ್ಷೆಗಳನ್ನು ಮಾಡದಿದ್ದರೆ ಇವರಿಂದ ಸಮಾಜಕ್ಕೆ ಪ್ರಯೋಜನವೇನು? ಧರ್ಮ ರಕ್ಷಣೆ ಆಗುವ ಬಗೆ ಹೇಗೆ? ಆಚಾರ್ಯರೂ ಮಹಾಚಾರ್ಯರು ಇವುಗಳನ್ನು ಮಾಡಲೇಬೇಕು. ಆದಕಾರಣ ಶೈವಸನ್ಯಾಸಿಗಳ ಬಗ್ಗೆ ಹೇಳಿದ ಈ ಶ್ಲೋಕವನ್ನು ಬೇರೆ ಗ್ರಂಥದಿಂದ ತಿಯ್ದುಕೊಂಡು ವಿಶೇಷ ವೀರಶೈವನ ಲಕ್ಷಣದಲ್ಲಿ ಸೇರಿಸಿದ್ದು ತಪ್ಪು ಇದನ್ನು ಸಂಗ್ರಹಕಾರನೇ ಮಾಡಿರುವನೋ ಅಥವಾ ಬರೆಹಗಾರರು ಪ್ರತಿ ಬರೆಯುವಾಗ್ಗೆ ತಿಳುವಳಿಕೆ ಇಲ್ಲದೆ ಸೇರಿಸಿ ಬರೆದುಕೊಂಡಿರುವರೊ ತಿಳಿಯದಾಗಿದೆ. ಇದರಂತೆ ಇದೇ ವಿಶೇಷ ವೀರಶೈವನ ಲಕ್ಷಣದಲ್ಲಿ "ಪತ್ತನೇ ಪಂಚರಾತ್ರಂ ವಾ ತ್ರಿರಾತ್ರಂ ಪುಟಭೇದನೇ॥ ಅಯಾಚನ ಪರೋಭೂತ್ವಾ ದೈವಾದಾಗತ ಜೀವನಃ॥ ಇತ್ಯಾದಿ. ಜ್ಞಾನೋಪದೇಶಂಕೃತ್ವಾತುಸಂಚರೇ ದ್ಭಗವತ್ಪರಃ" ಎಂಬ ಶ್ಲೋಕಗಳು ಸೇರಿರುತ್ತವೆ. ವಿಶೇಷ ವೀರಶೈವನು ಪಟ್ಟಣಕ್ಕೆ ಪಂಚರಾತ್ರಿ ದೊಡ್ಡ ಗ್ರಾಮಕ್ಕೆ ಮೂರು ರಾತ್ರಿ ಹಳ್ಳಿಗೆ ಏಕರಾತ್ರಿಯಂತೆ ವಾಸ ಮಾಡುತ್ತ ಜ್ಞಾನೋಪದೇಶವನ್ನು ಮಾಡುತ್ತ ಅನ್ಯರನ್ನು ಏನೂ ಬೇಡದೆ ದೈವಯೋಗದಿಂದ ಬಂದುದರಿಂದಲೇ ಜೀವಿಸುವವನಾಗಿ

ಸಂಚರಿಸಬೇಕು ಎಂಬುದು ಅವುಗಳ ಅರ್ಥ. ಈ ಶ್ಲೋಕಗಳ ಅರ್ಥವನ್ನು ಅನುಸರಿಸಿ ಹೋದರೆ ಯುಗಯುಗಾಂತರದಿಂದಲೂ ಒಂದೊಂದೇ ಸ್ಥಾನದಲ್ಲಿ ಮಹಾಚಾರ್ಯರು ಸಿಂಹಾಸನ ಮಠಗಳನ್ನು, ಆಚಾರ್ಯರು (ಪಟ್ಟಚರಾಧಿಕಾರಿಗಳು) ಮಠಗಳನ್ನು ಕಟ್ಟಿಕೊಂಡು ಇರಬಾರದಾಗುವದು. ಧರ್ಮಸ್ಥಾಪಕರಿಗೇ ಸ್ಥಾನವಿರಬಾರದೆಂಬುದನ್ನು ಒಪ್ಪಲಿಕ್ಕಾದೀತೇ? ಎಂದೂ ಸಾಧ್ಯವಿಲ್ಲ. ಹಾಗಾದರೆ ಈ ಶ್ಲೋಕಗಳ ಗತಿ ಏನು? ಶೈವ ಸನ್ಯಾಸಿಗಳ ಬಗ್ಗೆ ಇರುವ ಇವುಗಳನ್ನು ಬೇರೆ ಗ್ರಂಥಗಳಿಂದ ಆಯ್ದುಕೊಂಡು ವಿಶೇಷ ವೀರಶೈವನ ಲಕ್ಷಣದಲ್ಲಿ ಸೇರಿಸಿದ್ದು ಸಂಗ್ರಹಕಾರನ ತಪ್ಪು. ಈ ತಪ್ಪನ್ನು ಬರಹಗಾರರು ಮಾಡಿದರೋ ಸಂಗ್ರಹಕಾರನೇ ಮಾಡಿರುವನೋ ಅಥವಾ ಯಾರಾದರೂ ಬುದ್ಧಿಪೂರ್ವಕ ಸೇರಿಸಿರುವರೋ ತಿಳಿಯದು. ಅಂತು ಇವು ಸಾಮಾಜಿಕ ಪರಿಸ್ಥಿತಿಗೆ ವಿರೋಧ ಬರುವದರಿಂದ ಪ್ರಕ್ಷಿಪ್ತ ಶ್ಲೋಕಗಳೆಂಬುದು ನಿಜ.

ಇದೇ ರೀತಿಯಾಗಿ ನಿರಾಭಾರಿ ವೀರಶೈವನ ಲಕ್ಷಣವನ್ನು ಹೇಳುವಾಗ್ಗೆ ಸದಾಚಾರ ಸಂಗ್ರಹದ ಎಂಟನೆಯ ಪ್ರಕರಣದಲ್ಲಿ "ತ್ಯಕ್ತ್ವಾ ಗೃಹಮಠಾದೀನಿ ಮನುಷ್ಯಾದಿ ಗೃಹಾಣಿಚ। ಪ್ರವಾಸಸ್ತೇನ ಕರ್ತವ್ಯೋ ವನೇ ಗಿರಿಗುಹಾದಿಷು: ॥೧೨॥ ಕೂಷ್ಮಾಂಡ ಕರ್ಪರಂಧೃತ್ವಾ ಭವೇಚ್ಚೈವ ದಿಗಂಬರಃ। ಯದೃಚ್ಛಯಾ ಲಬ್ಧಶೈವ ಪ್ರಸಾದಾಸ್ವಾದನೇರತಃ ॥೧೩॥ ಕೇಶಗ್ರಂಥಿ ಜಟಾವಾಂಶ್ಚ ಶಿರೋಮುಂಡೀತಥೈವಚ। ಮೃಗಾಜಿನೀ ಚ ಸಂಭೂಯ ಭೂತ್ವಾಚೈವ ದಿಗಂಬರಃ। ಏವಂವಿಧಾನ್ ಶೈವ ವೇಷಾನಂಗೀಕೃತ್ಯ ಸದಾಚರೇತ್ ॥೧೪॥ ನಾಂದೋಲಿಕಾಂ ಸಮಾರೋಹೇದಶ್ವಾ ರೋಹಣ ವರ್ಜಿತಃ। ಪಾದಚಾರೀಚ ಸಂಭೂಯ ಚರೇದ್ಭೂವಲಯೇಸದಾ ॥೧೫॥ ಇತ್ಯಾದಿ ಶ್ಲೋಕಗಳು ಸೇರಿರುವವು. ನಿರಾಭಾರಿಯಾದ ವಿರಕ್ತನು ಕುಂಬಳ ಸೊಟ್ಟೆಯ ಭಿಕ್ಷಾಪಾತ್ರವನ್ನು ಹಿಡಿದುಕೊಂಡು ಚಿಗರಿಯ ಚರ್ಮವನ್ನು ಸುತ್ತಿಕೊಂಡಾಗಲಿ, ದಿಗಂಬರನಾಗಿಯಾಗಲಿ ಆಗಿ ತಲೆಯಲ್ಲಿ ಜಟಾಧಾರಿಯಾಗಿ ಅಥವಾ ಸಂಪೂರ್ಣ ಬೋಳಿಸಿಕೊಂಡು ಮನೆ, ಮಠ, ಮನುಷ್ಯರ ವಾಸಸ್ಥಾನ ಇತ್ಯಾದಿಗಳನ್ನು ಬಿಟ್ಟು ಅಡವಿಯಲ್ಲಿ, ಗುಡ್ಡ ಗವಿಗಳಲ್ಲಿ ತಿರುಗುತ್ತ ಕರತಲಭಿಕ್ಷಾ, (ಅಂಗೈಯಲ್ಲಿ ಆಹಾರ ವನ್ನು ಸೇವಿಸುತ್ತ) ತರುತಲವಾಸ (ಮರದ ಬುಡದಲ್ಲಿ ವಾಸ ಮಾಡುತ್ತ) ತನ್ನಿಂದ ತಾನೇ ಪ್ರಾಪ್ತವಾದ ಶೈವ ಪ್ರಸಾದದಲ್ಲಿ ಆಸಕ್ತನಾಗಿ ಶೈವ ವೇಷವನ್ನು ಧರಿಸಿಕೊಂಡು ಪಲ್ಲಕ್ಕಿ ಕುದುರೆ ಮುಂತಾದವನ್ನು ಹತ್ತದೆ ಪಾದಚಾರಿಯಾಗಿ ಸದಾ ಭೂಮಿಯ ಮೇಲೆ ತಿರುಗುತ್ತಿರಬೇಕು ಎಂಬುದು ಈ ಶ್ಲೋಕಗಳ ಅರ್ಥವು. ಈ ವಿಷಯವೆಲ್ಲವು ಶೈವಸಂನ್ಯಾಸಿಗಳಿಗಾಗಿ ಆಗಮದಲ್ಲಿ ಹೇಳಲ್ಪಟ್ಟಿರುತ್ತದೆ. ವೀರಶೈವವು ಶೈವದ ಒಂದು ಭೇದವಾದುದರಿಂದ ಶಿವಾಗಮಗಳಲ್ಲಿ ಶೈವ, ವೀರಶೈವ ಎರಡಕ್ಕೂ ಸಂಬಂಧಪಟ್ಟ ವಿಷಯಗಳು ಹೇಳಲ್ಪಡುವದು ಸಹಜವಾದುದು. ವೀರಶೈವರು ತಮಗೆ ಸಂಬಂಧಪಟ್ಟ ವಿಷಯಗಳನ್ನಷ್ಟೇ ಗ್ರಹಿಸಬೇಕು. ಹಾಗೆ ಮಾಡದೆ ವೀರಶೈವರೊಳಗೆ ಶೈವರಿಗಾಗಿ

ಹೇಳಿದ ವಿಷಯುಗಳನ್ನು ಸೇರಿಸಿ ನೆಲ್ಲು ಮೊಸರು ಕಲಸಿದಂತೆ ಹೊಲಸು ಮಾಡುವದು ಅಜ್ಞಾನ ವಿಜೃಂಭಿತವಾಡುದು. ಸದಾಚಾರ ಸಂಗ್ರಹಕಾರನು ಈ ಎಂಟನೆಯು ಪ್ರಕರಣದಲ್ಲಿ ಶೈವ ವೀರಶೈವವನ್ನು ಮಿಶ್ರ ಮಾಡಿ ಹೇಳಿರುವನು. ಈ ಮಾತು ಇದೇ ಗ್ರಂಥದ ಹದಿನೈದನೆಯ ಪ್ರಕರಣದಲ್ಲಿ ಹೇಳಿದ ನಿರಾಭಾರಿ ಜಂಗಮದ ಲಕ್ಷಣವನ್ನು ಚೆನ್ನಾಗಿ ಮನನ ಮಾಡಿಕೊಂಡಾಗ ಸ್ಫುಟವಾಗಿ ತಿಳಿಯುವದು. ನಿರಂಜನ ಜಂಗಮ ಒಂದರ ಲಕ್ಷಣವನ್ನೇ ಎಂಟನೆಯ ಪ್ರಕರಣದಲ್ಲಿ ಒಂದು ವಿಧವಾಗಿಯೂ ಹದಿನೈದನೆಯ ಪ್ರಕರಣದಲ್ಲಿ ಮತ್ತೊಂದು ವಿಧವಾಗಿಯೂ ಪರಸ್ಪರ ವಿರುದ್ಧವಾಗಿ ಒಬ್ಬ ಗ್ರಂಥಕಾರನೇ ಹೇಳುವದು ಸಾಧ್ಯವೂ ಅಲ್ಲ, ಯುಕ್ತವಾದುದೂ ಅಲ್ಲ. ಷಟ್‌ಸ್ಥಲಾಚಾರ ಸಂಪನ್ನರೂ, ಪಾದೋದಕ ಪ್ರಸಾದ ಗ್ರಾಹಿಗಳೂ ಆದ ನಿರಂಜನ ಜಂಗಮರು ಶೈವಸಂನ್ಯಾಸಿಗಳಂತೆ ಅಂಗೈಯಲ್ಲಿ ಪದಾರ್ಥವನ್ನು ಉಂಡು, ಉಂಡ ಕೈಯನ್ನು ಕುಂಡಿಗೆ ಒರೆಸಿಕೊಂಡು ದಿಗಂಬರರಾಗಿ ಮರದ ಬುಡದಲ್ಲಿ ವಾಸಿಸುವದು ಸಾಧ್ಯವೇ ? ಅರಣ್ಯ, ಗುಡ್ಡ, ಗಹ್ವರಗಳಲ್ಲಿ ವಾಸಿಸುವ ಇಂತಹ ಜಂಗಮನಿಂದ ಸಮಾಜಕ್ಕೆ ಪ್ರಯೋಜನವೇನು? ದೈನಂದಿನ ವ್ಯವಹಾರದಲ್ಲಿ ಗುರುವಿನಿಂದ ಉಪದೇಶ ಮಾಡಲ್ಪಟ್ಟ ಮಂತ್ರ, ಪಲ್ಲವಾದಿಗಳನ್ನು ಆಚಾರ ವಿಚಾರಗಳನ್ನು ವೀರಶೈವರು ಸರಿಯಾಗಿ ನಡೆಸುವರೊ ಇಲ್ಲವೊ ಎಂದು ಪರೀಕ್ಷಿಸುವ ಜಂಗಮನ ಕರ್ತವ್ಯವನ್ನು ನೆರವೇರಿಸುವವರಾರು? ಗುಡ್ಡಗಾಡಿನಲ್ಲಿ ವಾಸಿಸುವ ಜಂಗಮನಿಂದ ಗ್ರಾಮನಿವಾಸಿಗಳಾದ ವೀರಶೈವರು ಪಾದೋದಕ ಪ್ರಸಾದಗಳನ್ನು ಗ್ರಹಿಸುವದಾದರೂ ಹೇಗೆ ಸಾಧ್ಯವಾದೀತು. ಆದುದರಿಂದ ಶೈವ ಸನ್ಯಾಸಿಗಳಿಗೆ ಹೇಳಿದ ಮೇಲಿನ ವಿಷಯಗಳೆಲ್ಲವೂ ನಿರಾಭಾರಿ ವೀರಶೈವನ ಲಕ್ಷಣದಲ್ಲಿ ಯಾವ ಪುಣ್ಯಪುರುಷನಿಂದಲೊ ಸೇರಿಸಲ್ಪಟ್ಟಿವೆ ಎಂಬುದು ಅತ್ಯಂತ ಸ್ಫುಟವಾಗಿ ತೋರುತ್ತಿದೆ. ಈ ದೋಷವು ಸಂಗ್ರಹಕಾರನದೋ ಬರಹಗಾರರದೋ ತಿಳಿಯದಾಗಿದೆ. ಹೀಗೆ ಸೇರಿಸಲಿಕ್ಕೆ ಶಿವಾಗಮಗಳಲ್ಲಿಯ ನಿರಾಭಾರಿ ಮತ್ತು ವಿರಕ್ತ ಎಂಬ ಶಬ್ದಗಳೂ ಸ್ವಲ್ಪ ಕಾರಣಗಳಾಗಿವೆ. ನಿರಾಭಾರಿ– ಸಾಂಸಾರಿಕವಾದ ಯಾವ ಭಾರವೂ ಇಲ್ಲದವ, ವಿರಕ್ತ– ಸ್ರಕ್‌ಚಂದನ ವನಿತಾದಿ ಯಾವತ್ತು ವಿಷಯ ಸುಖದಲ್ಲಿ ವೈರಾಗ್ಯವುಳ್ಳವ ಎಂಬ ಅರ್ಥವುಳ್ಳ ಈ ಶಬ್ದಗಳು ಎಲ್ಲಾ ಧರ್ಮದವರಿಂದಲೂ ಉಪಯೋಗಿಸಲ್ಪಡುತ್ತವೆ. ಇವು ವೀರಶೈವರ ಸಾಂಕೇತಿಕ ಶಬ್ದಗಳಲ್ಲ, ಜಂಗಮ ಶಬ್ದವೇ ವೀರಶೈವರ ಸಾಂಕೇತಿಕ ಶಬ್ದವು. ಚರಾಚರ ಶಬ್ದಗಳ ಪರ್ಯಾಯಗಳಾಗಿ ಸ್ಥಾವರ ಜಂಗಮ ಎಂದು ಸಂಚರಿಸುವ ಸಕಲ ಜೀವರಾಶಿಯಲ್ಲಿ ಜಂಗಮ ಶಬ್ದವು ಸರ್ವರಿಂದ ಪ್ರಯೋಗಿಸಲ್ಪಡುತ್ತಿದೆ. ಮಾನವರಲ್ಲಿ ವಿಶಿಷ್ಟ ವ್ಯಕ್ತಿಯನ್ನು ತೋರಿಸುವ ಅರ್ಥದಲ್ಲಿ ಜಂಗಮ ಶಬ್ದವನ್ನು ಪ್ರಯೋಗಿಸುವವರು ವೀರಶೈವರೊಬ್ಬರೇ ಇತರರು ಯಾರೂ ಹಾಗೆ ಹೇಳುವದಿಲ್ಲ. ಹೀಗೆ ಜಂಗಮ ಶಬ್ದವು ಶಾಸ್ತ್ರದಲ್ಲಿ ಹಾಗು ಅಷ್ಟಾವರಣದಲ್ಲಿ ವಿಶಿಷ್ಟಾರ್ಥವನ್ನು ಹೇಳುವದಿದ್ದರೂ ರೂಢಿಯಲ್ಲಿ ಮತ್ತು ಒಂದೆರಡು ಕಡೆ ಗ್ರಂಥದಲ್ಲಿ ಜಂಗಮ ಶಬ್ದವು

ಮಾಹೇಶ್ವರ ವರ್ಗದಲ್ಲಿ ಪ್ರಯೋಗಿಸಲ್ಪಡುತ್ತಿದೆ: ಉದಾ:-

"ಅತೋ ವಿಶಿಷ್ಟವೀರೇತಿ ವೀರಮಾಹೇಶ್ವರೇತಿ ಚ ।
ಪರ್ಯಾಯೋ ವರ್ತತೇ ದೇವಿ ಜಂಗಮಸ್ಯ ಮಹಾತ್ಮನಃ ॥೪೫॥
ವೀರಮಾಹೇಶ್ವರೀಂ ದೀಕ್ಷಾಂ ಕಾರಯೇ ದೃತ್ವಿಜೈಃ ಸಹ ॥
ಏವಂ ಗುರುಪದೋದ್ಭೂತಾ ಜಂಗಮಾಃ ಪರಿಕೀರ್ತಿತಾಃ ॥೫೫॥
ಯೋಗಿನೀಸಹಿತಾಃ ಕೇ ಚಿತ್ಕೇಚಿದ್ದೇಶಿಕ ಸಂಜ್ಞಕಾಃ ॥
ಸ್ವೇಚ್ಛಾಶ್ರಮವಿಹಾರಾಸ್ತೇ ಲಿಂಗಭೋಗೋಪಭೋಗಿನಃ ॥೫೬॥

ಮಾಹೇಶ್ವರರು ತಮ್ಮ ವಂಶದ ಬಾಲಕರಿಗೆ ವೀರಮಾಹೇಶ್ವರ ದೀಕ್ಷೆಯನ್ನು ಋತ್ವಿಜರೊಡನೆ ಗುರುವಿನಿಂದ ಮಾಡಿಸಿದ ಬಳಿಕ ಆ ವಟುಗಳು ಜಂಗಮರೆಂದು ಹೇಳಲ್ಪಡುವರು. ಈ ಜಂಗಮರಿಗೆ ವಿಶೇಷ ವೀರಶೈವ ಎಂದು ವೀರಮಾಹೇಶ್ವರ ಎಂದು ಪರ್ಯಾಯನಾಮಗಳಿರುತ್ತವೆ. ಈ ಜಂಗಮರಲ್ಲಿ ಕೆಲವರು ಪತ್ನೀಸಹಿತರಾಗಿರುತ್ತಾರೆ. ಕೆಲವರು ದೇಶಿಕರಾಗಿರುತ್ತಾರೆ. ಅರ್ಥಾತ್ ಲಗ್ನವಾದ ಗೃಹಸ್ಥರಾದಿಯಾಗಿ ಎಲ್ಲ ಮಾಹೇಶ್ವರರಿಗೂ ಜಂಗಮರೆನ್ನುವರು ಎಂದು ಹೇಳಿದೆ. "ಯೋಗಾದ್ರೂಢಿರ್ಬಲೀಯಸೀ" ಎನ್ನುವಂತೆ ಜಂಗಮ ಶಬ್ದವು ಬಹಳವಾಗಿ ಮಾಹೇಶ್ವರರೆಲ್ಲರಿಗೂ ಬೋಧಕವಾಗಿರುವದರಿಂದ ಈ ಜಂಗಮ ಶಬ್ದದಿಂದ ನಿಜವಾಗಿ ಬೋಧ್ಯರಾದ ನಿರಂಜನ ಜಂಗಮರು ತಮ್ಮ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳುವದಕ್ಕಾಗಿ ತಮ್ಮನ್ನು ಸಾರ್ವಜನಿಕವಾದ ನಿರಾಭಾರಿ ಹಾಗು ವಿರಕ್ತ ಶಬ್ದದಿಂದ ಕರೆದುಕೊಳ್ಳಲಿಕ್ಕೆ ಹತ್ತಿದುವರು. ಇವರಿರುವ ಸ್ಥಾನಕ್ಕೆ ಜಂಗಮ ಮಠವೆಂದು ಹೇಳುವದಕ್ಕೆ ಬದಲಾಗಿ ವಿರಕ್ತಮಠವೆಂಬ ಹೆಸರೇ ಪ್ರಚಾರದಲ್ಲಿ ಬಂದಿದೆ. ಪ್ರಚಾರವು ಹೀಗಿದ್ದರೂ ಶಿವಾಗಮಗಳಲ್ಲಿ ನಿರಾಭಾರಿ, ವಿರಕ್ತ ಈ ಶಬ್ದಗಳು ಸಾರ್ವಜನಿಕವಾಗಿಯೇ ಇವೆ. ಇದರಿಂದ ಶೈವರಾದ ನಿರಾಭಾರಿ ಮತ್ತು ವಿರಕ್ತ ಇವರಿಗೆ ಹೇಳಿದವು ಯಾವು ಯಾವು ವೀರಶೈವರಾದ ನಿರಾಭಾರಿ ಮತ್ತು ವಿರಕ್ತ ಇವರಿಗೆ ಹೇಳಿದ ಲಕ್ಷಣಗಳಾವು ಎಂಬುದನ್ನು ಬಹು ಸೂಕ್ಷ್ಮ ದೃಷ್ಟಿಯಿಂದ ವಿವೇಚಿಸಬೇಕಾಗುತ್ತದೆ. ಹೀಗೆ ದೂರದೃಷ್ಟಿಯಿಲ್ಲದಿದ್ದರೆ ಮೇಲೆ ಹೇಳಿದಂತೆ ಎಲ್ಲವೂ ಮಿಶ್ರವಾಗಿ ವ್ಯತ್ಯಾಸವಾಗುವದು. ಹೀಗೆಯೇ ಈ ೮ನೇ ಪ್ರಕರಣದಲ್ಲಿ ಆಗಿರುವದು. ದೂರದೃಷ್ಟಿಯಿಲ್ಲದಿದ್ದರೆ ವ್ಯತ್ಯಾಸವಾಗುವದೆಂಬ ಮಾತಿಗೆ ಇದೇ ಸದಾಚಾರ ಸಂಗ್ರಹದಲ್ಲಿ ಮತ್ತೊಂದು ಉದಾಹರಣೆಯಿದೆ ನೋಡಿರಿ. ಹನ್ನೊಂದನೆಯ ಪ್ರಕರಣದಲ್ಲಿ ಎಂಟನೆಯ ವರ್ಷದಲ್ಲಿ ಬಾಲಕರಿಗೆ ಮಾಡುವ ವೀರಶೈವ ದೀಕ್ಷಾ ಮತ್ತು ವೀರಮಾಹೇಶ್ವರ ದೀಕ್ಷಾ ಭೇದಗಳನ್ನು ವಿವರಿಸುತ್ತ ಮಾಹೇಶ್ವರ ವರ್ಗದವರಿಗೆ ವೀರಮಾಹೇಶ್ವರ ದೀಕ್ಷೆಯನ್ನು ಮಾಡಬೇಕೆಂದು ಹೇಳುವ ಸಂದರ್ಭದಲ್ಲಿ

"ಅತೋ ವಿಶಿಷ್ಟವೀರೇತಿ ವೀರಮಾಹೇಶ್ವರೇತಿ ಚ ।
ಪರ್ಯಾಯೋ ವರ್ತತೇ ದೇವಿ ಜಂಗಮಸ್ಯ ಮಹಾತ್ಮನಃ ॥೪೫॥

ಎಂಬ ಶ್ಲೋಕದ ಮುಂದೆ–

> ನಿರಾಭಾರಿ ಸ್ಥಲಪ್ರೋಕ್ತ ಲಕ್ಷಣೈರ್ಯುಕ್ತ ಶಿಷ್ಯಕಂ ॥
> ಗುರುರಾದೌ ಪರೀಕ್ಷೇತ ನಖ ನೇತ್ರಾದಿ ಲಕ್ಷಣೈಃ ॥೪೬॥

ಎಂಬುದನ್ನು ಹೇಳಿರುವನು. ಇಲ್ಲಿ ನಿರಾಭಾರಿ ಸ್ಥಲಪ್ರೋಕ್ತ ಲಕ್ಷಣೈರ್ಯುಕ್ತ ಶಿಷ್ಯಕಂ ॥ ಎಂಬುದು ಅಪ್ರಾಸಂಗಿಕವಾದುದು. ಏಕೆಂದರೆ ಎಂಟನೆಯ ವರ್ಷದಲ್ಲಿ ಬಾಲಕರಿಗೆ ಮಾಡುವ ಮಾಹೇಶ್ವರ ದೀಕ್ಷಾ ಎಲ್ಲಿ? ನಿರಾಭಾರಿ ಸ್ಥಲದ ಲಕ್ಷಣಗಳೆಲ್ಲಿ? ಮೊದಲಿಗೆ ಮಾಹೇಶ್ವರ ದೀಕ್ಷಾ ಸಂಸ್ಕಾರ ಹೊಂದಿ ಆ ದೀಕ್ಷೆಯಲ್ಲಿ ಗುರುವು ಹೇಳಿದಂತೆ ಲಿಂಗಪೂಜಾದಲ್ಲಿ, ನ್ಯಾಸ, ಮಂತ್ರ, ಜಪ ಮೊದಲಾದವುಗಳನ್ನು ಮಾಡುತ್ತ ಶಿವಾನುಭಾವಿಗಳಾದ ನಿರಂಜನ ಜಂಗಮರ ಸೇವಾದಿಗಳಲ್ಲಿ ಸೇರಿ ಶಿವಾನು ಭವ ಶಾಸ್ತ್ರಾಧ್ಯಯನವನ್ನು ಮಾಡುತ್ತ ತನ್ನ ಆಚಾರ ವಿಚಾರಗಳನ್ನು ನಡೆ ನುಡಿ ಗಳನ್ನು ತಿದ್ದಿಕೊಂಡು ಗುರುಲಿಂಗಜಂಗಮ ಭಕ್ತಿಯುಕ್ತನಾಗಿ, ಮಾಹೇಶ್ವರ ದೀಕ್ಷಾ ಆದ ಬಳಿಕ ನಖನೇತ್ರಾದಿ ಅವಯುವಗಳಲ್ಲಿ ಅಕಸ್ಮಾತ್ ನ್ಯೂನತೆಯಾಗದೇ ಇದ್ದು, ಲಿಂಗನಿಷ್ಠಾ, ವಿರತಿ ಮೊದಲಾದ ಸದ್ಗುಣಗಳನ್ನು ಸಂಪಾದಿಸಿಕೊಂಡಾಗ ನಿರಾಭಾರಿ ಜಂಗಮನಾಗಲಿಕ್ಕೆ ಯೋಗ್ಯನಿರುವನೋ ಇಲ್ಲವೊ ಎಂದು ಪರೀಕ್ಷಿಸಬೇಕಾಗುತ್ತದೆ. ಇನ್ನೂ ದೀಕ್ಷಾ ಸಂಸ್ಕಾರವನ್ನೇ ಹೊಂದದಿದ್ದ ಬಾಲಕನಲ್ಲಿ ನಿರಾಭಾರಿ ಲಕ್ಷಣಗಳಿರು ವದು ಹೇಗೆ ಸಾಧ್ಯ. ಈ ಮಾತು ಕುದುರೆಯ ಲಕ್ಷಣವನ್ನು ಕೇಳಿದಾಗ "ಶೃಂಗಿತ್ವ ಮಶ್ವಸ್ಯ ಲಕ್ಷಣಂ" ಕೋಡುಳ್ಳದ್ದು ಕುದುರೆ ಎಂದು ಹೇಳಿದ ಮಾತಿನಂತೆ ಅಸಂಭವ ರೂಪದೋಷವುಳ್ಳದ್ದಾಗುವದು. ಆದುದರಿಂದ ಇಲ್ಲಿ ಅದನ್ನು ಹೇಳಿದ್ದು ತಪ್ಪು. ಇಲ್ಲಿ ಸಂಗ್ರಹಕಾರನಿಗೆ ಭ್ರಾಂತಿ ಹುಟ್ಟಿಸಿದ್ದು ಹಿಂದಿನ ಶ್ಲೋಕದೊಳಗಿರುವ "ಜಂಗಮಸ್ಯ ಮಹಾತ್ಮನಃ" ಎಂಬ ವಾಕ್ಯವು. ಜಂಗಮ ಶಬ್ದ ಶ್ರವಣವಾದ ಕೂಡಲೆ ಶಾಸ್ತ್ರೀಯವಾದ ನಿರಂಜನ ಜಂಗಮವೇ ಈ ಜಂಗಮ ಶಬ್ದಕ್ಕೆ ಅರ್ಥವಿದೆಂಬ ಭ್ರಾಂತಿಯುಂಟಾಗಿ ಸೂಕ್ಷ್ಮ ದೃಷ್ಟಿಯನ್ನು ಉಪಯೋಗಿಸದೆ ಶಿವಾಗಮಗಳಿಂದ ಆಯ್ದುಕೊಂಡ ನಿರಾಭಾರಿ ಸ್ಥಲಪ್ರೋಕ್ತ ಎಂಬ ಶ್ಲೋಕಾರ್ಧವನ್ನು ಅಲ್ಲಿ ಸೇರಿಸಿರುವನು. ಆದರೆ ಇಲ್ಲಿರುವ ಜಂಗಮ ಶಬ್ದಕ್ಕೆ ಲೋಕದಲ್ಲಿ ರೂಢವಾದ ಮಾಹೇಶ್ವರ ಎಂಬ ಅರ್ಥವಿರುತ್ತದೆ. ಆದುದರಿಂದ ಇಲ್ಲಿ ಮಾಹೇಶ್ವರ ಸ್ಥಲಪ್ರೋಕ್ತ ಲಕ್ಷಣ. ಗೋತ್ರ, ಸೂತ್ರ, ಪ್ರವರ, ಶಾಖಾದಿಗಳಿಂದ ಯುಕ್ತನಾಗಿದ್ದರೂ ಯಾವ ಅವಯುವಗಳಲ್ಲಿಯೂ ನ್ಯೂನತೆ ಇರಬಾರದೆಂಬುದನ್ನು ಗುರುವು ಪರೀಕ್ಷಿಸಬೇಕು ಎಂಬುದು ಆ ಸಂದರ್ಭದ ಅರ್ಥ ವಿರುತ್ತದೆ. ಒಟ್ಟಿನಲ್ಲಿ ಹೇಳುವದೆಂದರೆ ಈ ಸದಾಚಾರ ಸಂಗ್ರಹದ ಎಂಟನೆಯ ಪ್ರಕರಣದಲ್ಲಿ ವಿಶೇಷ ವೀರಶೈವನ ಮತ್ತು ನಿರಾಭಾರಿ ವೀರಶೈವನ ಲಕ್ಷಣಗಳನ್ನು ಹೇಳುವಾಗ್ಗೆ ಶಿವಾಗಮಗಳಲ್ಲಿ ಶೈವಸಂನ್ಯಾಸಿಗಳ ಬಗ್ಗೆ ಹೇಳಿದ ಎಷ್ಟೋ ಮಾತುಗಳು ಇಬ್ಬರಲ್ಲಿಯೂ ಸೇರಿರುತ್ತವೆಂಬುದು ಆಬಾಲವೃದ್ಧರಿಗೂ ತಿಳಿಯುವಷ್ಟು ಸ್ಫುಟ

ವಾಗಿರುತ್ತವೆ. ಆ ಪ್ರಕ್ಷಿಪ್ತ ಮಾತುಗಳ ಕಡೆಗೆ ಯಾರೂ ಗಮನ ಕೊಡಬಾರದು. ಹದಿನೈದನೆಯ ಪ್ರಕರಣದಲ್ಲಿ ಹೇಳಿದ ನಿರಾಭಾರಿ ಜಂಗಮ ಸ್ಥಲದ ಸ್ವಯ, ಚರ, ಪರ ಎಂಬ ಭೇದಗಳ ಯಥಾರ್ಥ ಲಕ್ಷಣಗಳಂತೆ ಲನೆಯ ಪ್ರಕರಣದಲ್ಲಿಯೂ ನಿರಾಭಾರಿ ವೀರಶೈವನ ಲಕ್ಷಣವಿರುತ್ತದೆಂದು ದೃಢವಾಗಿ ನಂಬಬೇಕು. ಈ ನಿರಾಭಾರಿ ಜಂಗಮದ ಸ್ವಯ, ಚರ, ಪರ ಎಂಬ ಪ್ರಭೇದಗಳಾದರೂ ಆತ್ಯಂತಿಕ ಭೇದಗಳಲ್ಲ. ಒಬ್ಬನೇ ಆಚರಿಸುವ ಮೂರು ಮೆಟ್ಟಲುಗಳು. ಭಕ್ತಿಯು ವಿಕಾಸವಾದ ಹಾಗೆ ಆತ್ಮನಲ್ಲಿ ಶಿವಪ್ರಕಾಶವು ವೃದ್ಧಿ ಹೊಂದುತ್ತ ಹೋಗುವದು. ಈ ಮೂರು ಮೆಟ್ಟಲುಗಳಲ್ಲಿ ಯಾವುದರಲ್ಲಿದ್ದರೂ ಆತನು ನಿರಾಭಾರಿ ನಿರಂಜನ ಜಂಗಮನೇ ಆದುದರಿಂದ ನಿರಂಜನ ಜಂಗಮನ ಲಕ್ಷಣವು ಒಂದೇ ರೀತಿಯಾಗಿರಬೇಕಲ್ಲದೆ ಹಿಂದೊಂದು ರೀತಿ ಮುಂದೊಂದು ರೀತಿಯಾಗಿರುವದು ಯುಕ್ತವಾದುದಲ್ಲ.

ಈ ಎಂಟನೆಯ ಪ್ರಕರಣದಲ್ಲಿ ವಿಶೇಷ ವೀರಶೈವನ ಮತ್ತು ನಿರಾಭಾರಿ ವೀರ ಶೈವನ ಲಕ್ಷಣದಲ್ಲಿ ಶೈವ ಸನ್ಯಾಸಿಗಳ ಬಗ್ಗೆ ಹೇಳಿದ ಎಷ್ಟೋ ವಿಷಯಗಳು ಪ್ರಕ್ಷಿಪ್ತ ಗಳಾಗಿ ಸೇರಿದ್ದರೂ ಕೆಲವರು ವಿಶೇಷ ವೀರಶೈವನ ಲಕ್ಷಣದಲ್ಲಿ ಪ್ರಕ್ಷಿಪ್ತವಾದ ಪಟ್ಟಣಕ್ಕೆ ಪಂಚರಾತ್ರಿ ಪುಟಭೇದನ (ದೊಡ್ಡ ಗ್ರಾಮ)ಕ್ಕೆ ಮೂರು ರಾತ್ರಿ ಹಳ್ಳಿಗೆ ಏಕರಾತ್ರಿಯಂತೆ ವಾಸ ಮಾಡುತ್ತ ಯಾರನ್ನೂ ಏನನ್ನೂ ಬೇಡದೆ ತಾನಾಗಿ ಬಂದುದರಿಂದ ತೃಪ್ತಿ ಹೊಂದುತ್ತ ದಂಡ ಶಿಕ್ಷಾದಿಗಳನ್ನು ಮಾಡದೆ ಸದಾ ಸಂಚರಿ ಸುತ್ತಿರಬೇಕೆಂದು ಹೇಳಿದ ಮಾತನ್ನು ಮುಚ್ಚಿಟ್ಟು, ನಿರಾಭಾರಿ ವೀರಶೈವನ ಬಗ್ಗೆ ಹೇಳಿದ ಪ್ರಕ್ಷಿಪ್ತ ವಾಕ್ಯಗಳನ್ನು ಎತ್ತಿ ತೋರಿಸುತ್ತ ಮನೆ, ಮಠ, ಮನುಷ್ಯಾದಿಗಳ ವಾಸಸ್ಥಾನ ಇತ್ಯಾದಿಗಳಲ್ಲಿರದೆ ಅಡವಿಯಲ್ಲಿ ಗುಡ್ಡ ಗಹ್ವರ ಇವುಗಳಲ್ಲಿರಬೇಕು ಮಠದಲ್ಲಿರಬಾರದು. ಇತ್ಯಾದಿ ಪ್ರಕ್ಷಿಪ್ತ ಮಾತುಗಳನ್ನು ಉಲ್ಲೇಖಿಸುವದು ಕೇವಲ ಪಕ್ಷಾಂಧತೆಯಲ್ಲದೆ ಯಥಾರ್ಥ ಜ್ಞಾನವಲ್ಲ. ಬೇಕಾದುದರ ಬಗ್ಗೆ ಹೇಳಿದ ದೋಷ ಗಳನ್ನು ಮುಚ್ಚಿಡುವದು ಬೇಡಾದುದರ ಬಗ್ಗೆ ಹೇಳಿದ ದೋಷವು ಸಣ್ಣದಾಗಿದ್ದರೂ ಗುಡ್ಡದಷ್ಟು ದೊಡ್ಡದನ್ನಾಗಿ ತೋರಿಸುವದು ಸುಜನ ಮಾರ್ಗವಲ್ಲ. ಆದುದರಿಂದ ಇಬ್ಬರ ಲಕ್ಷಣದಲ್ಲಿಯೂ ಶೈವಸನ್ಯಾಸಿಗಳ ಬಗ್ಗೆ ಹೇಳಿದ ವಿಷಯಗಳು ಸೇರಿರುತ್ತವೆ. ಅವು ನಿಜವಾದ ಲಕ್ಷಣಗಳಲ್ಲವೆಂದು ಸರ್ವರೂ ಭಾವಿಸಬೇಕು. ಆದುದರಿಂದಲೇ ಸಾವಿರಾರು ವರ್ಷಗಳಿಂದ ನಿರಾಭಾರಿ ನಿರಂಜನ ಜಂಗಮರಾದ ವಿರಕ್ತರ ಮಠಗಳು ಅಸ್ತಿತ್ವದಲ್ಲಿ ಉಳಿದಿರುತ್ತವೆ.

ಶೈವರಲ್ಲಿಯ ನಿರಾಭಾರಿಗಳು ಮತ್ತು ವಿರಕ್ತರು, ವೀರಶೈವರಲ್ಲಿಯ ನಿರಾಭಾರಿ ಗಳು ಮತ್ತು ವಿರಕ್ತರು ಇವರಲ್ಲಿರುವ ತರತಮ ಭಾವವನ್ನು ವಿಚಾರಿಸುವಾ. ಶೈವರಲ್ಲಿ ಮೊದಲಿಗೆ ಉಪನಯನದಿಂದ ಬ್ರಹ್ಮಚಾರಿಯಾಗಿ ಅಧ್ಯಯನಾದಿಗಳನ್ನು ಮಾಡಿ, ಗೃಹಸ್ಥನಾಗಿ ಭೂಮಿ ಸೀಮೆಗಳನ್ನು ಸಂಪಾದಿಸಿ ಮಕ್ಕಳು ಮರಿಗಳನ್ನು ಪಡೆದು,

ಸುಖ ಭೋಗಿಯಾಗಿದ್ದು ಇಂದ್ರಿಯಗಳಲ್ಲಿ ಸಾಮರ್ಥ್ಯವು ಕಡಿಮೆಯಾದ ಮೇಲೆ ಈ ಎಲ್ಲಾ ಹೆಂಡಿರು, ಮಕ್ಕಳು, ಹೊಲಮನೆ, ಧನಕನಕಾದಿಗಳನ್ನು ತ್ಯಾಗ ಮಾಡಿ ಎಲ್ಲಿಯೋ ಹೇಗಿ ನಿಂತಾಗ ಅವನು ನಿರಾಭಾರಿಯಾಗುವನು. ಹೆಂಡಿರು ಮಕ್ಕಳಿಗೆ ದುಡಿದು ಹಾಕುವ ಸಾಮರ್ಥ್ಯವಿಲ್ಲದ ಮೂಲಕ ಉಂಟಾದ ಅಭಾವ ವೈರಾಗ್ಯದಿಂದಲೊ ಅಥವಾ ನಿಜವಾದ ವೈರಾಗ್ಯದಿಂದಲೊ "ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್" ಎಂಬ ಉಪನಿಷತ್ ಪ್ರಮಾಣದಿಂದ ಸ್ರಕ್‌ಚಂದನ ವನಿತಾದಿ ವಿಷಯಗಳಲ್ಲಿ ವೈರಾಗ್ಯವುಳ್ಳವನಾಗಿ ಸನ್ಯಾಸಿಯಾದರೆ ಆಗ ಅವನು ವಿರಕ್ತನೆನಿಸಿಕೊಳ್ಳುವನು. ವೀರಶೈವರಲ್ಲಿ ಈ ರೀತಿಯಾಗಿ ನಿರಾಭಾರಿಯಾಗಲಿಕ್ಕೂ ವಿರಕ್ತನಾಗಲಿಕ್ಕೂ ಧರ್ಮಶಾಸ್ತ್ರವು ಒಪ್ಪುವದಿಲ್ಲ. "ನವೇ ವಯಸಿ ಯಃ ಶಾಂತಃ ಸ ಶಾಂತ ಇತಿ ಗೀಯತೇ । ಧಾತುಷು ಕ್ಷೀಯಮಾಣೇಷು ಕಸ್ಯ ಶಾಂತಿರ್ನಜಾಯತೇ ॥" ಯಾವನು ಭರಭರಾಟೆಯ ನೂತನವಾದ ತಾರುಣ್ಯದಲ್ಲಿ ಇಂದ್ರಿಯಗಳ ಬಲವನ್ನು ಬಗ್ಗು ಬಡಿದು ಶಾಂತಿಯಿಂದ ವರ್ತಿಸುವನೋ ಅವನೇ ಶಾಂತನು ದಾಂತನು (ಅಂತರಿಂದ್ರಿಯ ಬಹಿರಿಂದ್ರಿಯ ನಿಗ್ರಹವುಳ್ಳವನು) ಶರೀರದೊಳಗಿನ ಧಾತುಗಳು (ಇಂದ್ರಿಯಗಳು) ಕ್ಷೀಣವಾಗಲು ಶರೀರವು ಬಾಗಿ ನಡುಗುತ್ತ ತಲೆ ಬೆಳ್ಳಗಾಗಿ, ಬಾಯಿಯೊಳಗಿನ ಹಲ್ಲುಗಳು ಬಿದ್ದು ಕೈಯಲ್ಲಿ ಕೋಲು ಬಂದಾಗ ಯಾರು ತಾನೆ ಶಾಂತರಾಗುವದಿಲ್ಲ? ವೈರಾಗ್ಯವು ಬಂದೇ ಬರುತ್ತದೆ. ಸಂಸಾರದ ಭಾರವು ಕಡಿಮೆಯಾಗಿಯೇ ಆಗುತ್ತದೆ. ಆದುದರಿಂದ ವೀರಶೈವನು ನಿರಾಭಾರಿಯಾಗಲಿ, ವಿರಕ್ತನಾಗಲಿ ಆಗಬೇಕಾದರೆ ಅವನು

"ಬ್ರಹ್ಮವೇದಸ್ತದಧ್ಯೇತಾ ಬ್ರಹ್ಮಚಾರೀತಿ ಗೀಯತೇ ।
ಉಕ್ತಲಕ್ಷಣಸಂಪನ್ನೋ ಬ್ರಹ್ಮಚಾರೀ ಪುನಸ್ತ್ರಿಧಾ ॥
ಪಟ್ಟಾಭಿಷೇಕವಾನಾದ್ಯಃ ಪ್ರೋಕ್ತಶ್ಚರಪತಿಸ್ತಥಾ ॥
ನಿರಾಭಾರಸ್ತೃತೀಯಃ ಸ್ಯಾತ್ಸರ್ವಲೋಕೇಷು ವಿಶ್ರುತಃ ॥"

ಸದಾಚಾರ ಸಂಗ್ರಹ ಪ್ರ- ೧೪

ವೀರಶೈವರಲ್ಲಿ ಪಟ್ಟ, ಚರ, ನಿರಂಜನ ಜಂಗಮ ಈ ಸ್ಥಾನಗಳನ್ನು ಪಡೆಯಲು ಅರ್ಹನಾದವನು ಸಹ ಬ್ರಹ್ಮಚರ್ಯದಿಂದಲೇ ಆಯಾಯ ಸ್ಥಾನಗಳನ್ನು ಪಡೆಯಬೇಕಲ್ಲದೆ, ವಿವಾಹಿತನಾಗಿ ಮಕ್ಕಳು ಮರಿಗಳನ್ನು ಪಡೆದೇ ಆಗಲಿ, ಹಾಗೆಯೇ ಇರಲಿ ಸಾಕಾದಾಗ, ವೈರಾಗ್ಯ ಹುಟ್ಟಿದಾಗ ಆ ಸ್ಥಾನಗಳನ್ನು ಪಡೆದುಕೊಳ್ಳುವೆನೆಂದರೆ ಎಂದೂ ಸಾಧ್ಯವಿಲ್ಲವೆಂದು ಪರಮಾತ್ಮನು ಪಾರ್ವತಿಯ ಮುಂದೆ ಹೇಳಿರುವನು. ಈ ಸಂಗತಿ ಜಗತ್ತಿನಲ್ಲೆಲ್ಲಾ ಪ್ರಸಿದ್ಧವಿರುತ್ತದೆ. ವೀರಶೈವರಲ್ಲಿ ವಿವಾಹಿತರಾದವರಿಗೆ ವೈರಾಗ್ಯವು ಹುಟ್ಟಬಾರದೆಂದಾಗಲಿ, ಹುಟ್ಟುವದಿಲ್ಲವೆಂದಾಗಲಿ ಹೇಳುವದಿಲ್ಲ. ಯಾರಿಗಾದರೂ ವಿರತಿಯು ಹುಟ್ಟಬಹುದು. ನಿಜವಾದ ವೈರಾಗ್ಯದಿಂದ ಸಂಸಾರ ಭಾರವನ್ನು ಯಥಾರ್ಥವಾಗಿ ತ್ಯಾಗ ಮಾಡಿಕೊಂಡು ಘನಮಠದಾರ್ಯರಂತೆ ಹಾಗು

ಸೊಲ್ಲಾಪುರದ ಸಿದ್ಧರಾಮೇಶ್ವರ ಶರಣರಂತೆ ಗುರುಲಿಂಗ ಜಂಗಮ ಸೇವಾತತ್ಪರರಾಗಿ ಶರಣ ಸ್ಥಲದ ಆಚರಣೆಯುಳ್ಳವರಾಗಿ ಇರಬಹುದು. ಮೋಳಿಗೆಯ ಮಾರಯ್ಯ ಮೊದಲಾದವರು ರಾಜ್ಯಾದಿಗಳನ್ನು ತ್ಯಾಗ ಮಾಡಿ ಶರಣ ಸ್ಥಲಾಚರಣೆಯುಳ್ಳವರಾಗಿ ವರ್ತಿಸಿರುವರು ಇಂಥವರಲ್ಲಿ ಎಷ್ಟೋ ಪ್ರಬಲವಾದ ವೈರಾಗ್ಯವಿರಬಹುದು, ಆ ವೈರಾಗ್ಯ ಬಲದಿಂದ ಅತ್ಯಧಿಕವಾದ ಶಿವತೇಜಸ್ಸನ್ನು ಸಂಪಾದಿಸಿಕೊಂಡು ಜಗತ್ಪೂಜ್ಯರಾಗಬಹುದು ಆದರೆ ಅಷ್ಟಾವರಣಾಂತರ್ಗತಗಳಾದ ಗುರು ಜಂಗಮ ಸ್ಥಾನಗಳನ್ನು ಪಡೆಯಲು ಇವರು ಅರ್ಹರಲ್ಲ. ಆ ಸ್ಥಾನಗಳನ್ನು ಪಡೆಯುವ ಮಾರ್ಗವೇ ಬೇರೆ. ವೈರಾಗ್ಯದ ಮಾರ್ಗವೇ ಬೇರೆ ಇರುತ್ತದೆ. ಈ ಮರ್ಮವನ್ನರಿಯದೆ ಇತ್ತೀಚೆಗೆ ವೀರಶೈವರಲ್ಲಿ ಕೆಲವರು ಮೊದಲಿಗೆ ವಿವಾಹಿತರಾಗಿ ಮಕ್ಕಳನ್ನು ಪಡೆದು ಮುಂದೆ ಅವರನ್ನು ಸಂರಕ್ಷಣ ಮಾಡುವ ಸಾಮರ್ಥ್ಯ ವಿಲ್ಲದುದರಿಂದಲೊ ಮತ್ತಾವ ಕಾರಣದಿಂದಲೊ ಮಧ್ಯದಲ್ಲಿ ಅವರೆಲ್ಲರನ್ನು ಕೈ ಬಿಟ್ಟು ಕಾವಿ ಬಟ್ಟೆಗಳನ್ನು ಹಾಕಿಕೊಂಡು ದೂರ ಪ್ರದೇಶಕ್ಕೆ ಹೋಗಿ ತಮ್ಮ ಮೊದಲಿನ ಹೆಸರು ಗಳನ್ನು ಬದಲಿಸಿಕೊಂಡು ಬೇರೆ ದೊಡ್ಡ, ದೊಡ್ಡ ಹೆಸರುಗಳನ್ನು ಇಟ್ಟುಕೊಂಡು ಸಮಾಜದ ಜನತೆಯನ್ನು ವಂಚಿಸುತ್ತಿರುವದು ಧರ್ಮ ದ್ರೋಹವೂ, ವಿಶ್ವಾಸಘಾತವೂ ಆಗುವದು. ಇವರಲ್ಲಿ ನಿಜವಾದ ವೈರಾಗ್ಯ ಉತ್ಪನ್ನವಾಗಿದ್ದರೆ ವೇಷವನ್ನು, ಹೆಸರನ್ನು ಬದಲಾಯಿಸಿಕೊಳ್ಳುವ ಕಾರಣ ವೇನಿದೆ. ಆರಂಭದಲ್ಲ ವಿರಕ್ತರಂತೆ ನಟಿಸಿ ಕೊನೆಗೆ ದುಡ್ಡನ್ನು ಸಂಗ್ರಹಿಸುವದು ನಿಜವಾದ ವಿರಕ್ತಿಯ ಲಕ್ಷಣವಾಗ ಬಹುದೇ ? ಎಂದೂ ಸಾಧ್ಯವಿಲ್ಲ ಎಂದಿಲ್ಲೊಂದು ದಿನ ಇಂತಹ ಕಳ್ಳ ವೈರಾಗ್ಯವು ಹೊರ ಬಿದ್ದೇ ಬೀಳುವದು. ಕಾರಣ ಇಂಥವರನ್ನು ಧರ್ಮಾಭಿಮಾನಿಗಳು ಎಂದೂ ನಂಬಬಾರದು.

ಈ ಸದಾಚಾರ ಸಂಗ್ರಹದ ಹದಿನಾಲ್ಕನೆಯ ಪ್ರಕರಣದಲ್ಲಿ ಗುರುಸ್ಥಲದ ಪಟ್ಟಾಧಿಕಾರಿಯ ಹಾಗು ಚರಮೂರ್ತಿಯ ಲಕ್ಷಣವನ್ನು ಅಧಿಕಾರ ವಿಧಿಯನ್ನು ಹೇಳಿದ ಬಳಿಕ ಅಂತಿಮವಾದ ಹದಿನೈದನೆಯ ಪ್ರಕರಣವು ಕೇವಲ ನಿರಾಭಾರಿ ನಿರಂಜನ ಜಂಗಮನ ಲಕ್ಷಣವನ್ನು ಹೇಳುವದಕ್ಕಾಗಿಯೇ ಇದೆ. ಸಂಪೂರ್ಣ ಪ್ರಕರಣದಲ್ಲಿ ನಿರಂಜನ ಜಂಗಮದ ಸ್ವಯ, ಚರ, ಪರ, ಎಂಬ ಭೇದಗಳ ಸ್ವರೂಪವನ್ನೇ ವಿವರಿಸಿರುವನು ಹೀಗಿದ್ದರೂ ಈ ಪ್ರಕರಣದಲ್ಲಿ ಬರುವ ಗುರು, ಶಿಷ್ಯ ಚರಪಟ್ಟ, ಪಟ್ಟಾಧಿಕಾರಿ ಮುಂತಾದ ಶಬ್ದಗಳಲ್ಲಿ ಗುರು ಶಬ್ದಕ್ಕೆ ವಿದ್ಯಾಗುರು, ಕಲಾಗುರು, ಸಾಮಾಜಿಕ ಗುರು, ಔಪದೇಶಿಕ ಗುರು ಎಂದೂ, ಶಿಷ್ಯ ಶಬ್ದಕ್ಕೆ ಗೋತ್ರ ಸೂತ್ರಾನು ಯಾಯೀ, ಅಂತೇ ವಾಸಿ, ಸೇವಾನಿರತ ಎಂದೂ, ಚರಪಟ್ಟ:— ಗುರುಸ್ಥಲದ ಚರಾಧಿಕಾರ, ನಿರಂಜನ ಚರಪಟ್ಟ ಎಂದೂ, ಪಟ್ಟಾಧಿಕಾರ:— ಗುರುಸ್ಥಲದ ಪಟ್ಟಾಧಿಕಾರ ನಿರಂಜನ ಚರ ಪಟ್ಟಾಧಿಕಾರ ಎಂದೂ ಅನೇಕಾರ್ಥಗಳಿದ್ದರೂ,

> ಸಂಯೋಗೋ ವಿಪ್ರಯೋಗಶ್ಚ, ಸಾಹಚರ್ಯಂ ವಿರೋಧಿತಾ |
> ಅರ್ಥ: ಪ್ರಕರಣಂ ಲಿಂಗಂ ಶಬ್ದಸ್ಯಾನ್ಯಸ್ಯ ಸನ್ನಿಧಿಃ ||

ಸಾಮರ್ಥ್ಯ ಮೌಚಿತೀ ದೇಶಃ ಕಾಲೋ ವ್ಯಕ್ತಿಃ ಸ್ವರಾದಯಃ |
ಶಬ್ದಾರ್ಥಸ್ಯಾನವಚ್ಛೇದೇ ವಿಶೇಷ ಸ್ಮೃತಿ ಹೇತವ: ||

ಎಂಬ ಪ್ರಮಾಣಾನುಸಾರವಾಗಿ ಒಂದು ಶಬ್ದಕ್ಕೆ ಅನೇಕಾರ್ಥಗಳಿದ್ದಲ್ಲಿ ಯಾವ ಅರ್ಥವನ್ನು ಗ್ರಹಿಸಬೇಕೆಂಬ ಸಂದೇಹ ಉಂಟಾದಾಗ ಸಂಯೋಗ, ವಿಪ್ರಯೋಗ, ಪ್ರಕರಣ, ಸಂದರ್ಭ, ಸನ್ನಿವೇಶ, ದೇಶ, ಕಾಲ, ಔಚಿತ್ಯಾದಿಗಳಿಗನುಗುಣವಾಗಿ ಅರ್ಥ ಮಾಡಬೇಕೆಂದು ಶಾಸ್ತ್ರಾಧಾರವಿದ್ದುದರಿಂದ ಪ್ರಕರಣ, ಸಂದರ್ಭ, ಸನ್ನಿವೇಶಗಳಿಗನು ಗುಣವಾಗಿ ಅರ್ಥಮಾಡುವದನ್ನು ಬಿಟ್ಟು ಕೆಲವರು

ಮಠಮೇಕಂ ಸಮಾಶ್ರಿತ್ಯ ಕೃತ್ವಾಸಲ್ಲಿಂಗ ಪೂಜನಂ |
ಕುರ್ವನ್ ಯೋ ವಸತೇ ನಿತ್ಯಂ ಸ ಏವ ಸ್ವಯಜಂಗಮಃ

೧೫ ಪ್ರ ೨೦ ಶ್ಲೋಕ

ಶೈವಾನುಭಾವಕಂ ಶಾಸ್ತ್ರಮಂಗೀಕೃತ ಪುರಾಶ್ರಯಂ |
ತದೇವಾಖಿಲ ಶಿಷ್ಯಾಣಾ ಮುಪದಿಶ್ಯ ದಿನೇ ದಿನೇ ||೨೭||
ಏವಂ ರೀತ್ಯಾ ಭಕ್ತಿ ಭಿಕ್ಷಾಂ ಸ್ವೀಕುರ್ವನ್ ಸಂಚರನ್ಸದಾ ||
ಚರಪಟ್ಟಾಧಿಕಾರೀಯಃ ಸ ಏವ ಚರಜಂಗಮಃ ||೩-||
ಭಕ್ತಮಾಹೇಶಸಂಮುಖೇ |
ದೇಯಾತ್ತಂ ಚರಪಟ್ಟಂ ಹಿ ಗುರುಃ ಶಿಷ್ಯಾಯ ಧೀಮತೇ ||೫೧||
ತದಂತೇವಾಸಿನಿಚಯೇ ದೃಷ್ಟ್ವಾ ತಂ ಜ್ಞಾನಿನಂ ಶುಚಿಂ ||
ದಾಪಿತವ್ಯಂ ತದಾ ತಸ್ಮೈ ಚಾನ್ಯ ಪಟ್ಟಾಧಿಕಾರಿಣಾ ||೫೩||

ಈ ಶ್ಲೋಕಗಳಲ್ಲಿರುವ ಗುರು ಶಬ್ದಕ್ಕೆ ಸಾಮಾಜಿಕ ಗುರು ಎಂದು, ಶಿಷ್ಯ ಶಬ್ದಕ್ಕೆ ಗೋತ್ರ ಸೂತ್ರಾನುಯಾಯಿ ಎಂದು, ಚರಪಟ್ಟಾಧಿಕಾರಿ ಎಂದರೆ ಗುರುಸ್ಥಲದ ಚರಮೂರ್ತಿ ಎಂದು, ಪಟ್ಟಾಧಿಕಾರಿ ಎಂದರೆ ಗುರುಸ್ಥಲದ ಪಟದ್ದೇವರೆಂದು ಪ್ರಕರಣಾದಿಗಳಿಗೆ ವಿರುದ್ಧವಾಗಿ ಅರ್ಥ ಮಾಡಿ ಮತ್ತು

ಭಗವಂಸ್ತ್ವನ್ಮುಖಾದೇವ ಗುರೋರ್ಲಿಂಗಸ್ಯ ಲಕ್ಷಣಂ |
ಶ್ರುತ್ವಾ ತದ್ದ್ವಯಮಾಹಾತ್ಮ್ಯಂ ಮಹಂ ಧನ್ಯಾಽ ಭವ: ವಿಭೋ ||೨||
ಇದಾನೀಂ ಚರಮಾಹಾತ್ಮ್ಯಂ ತಚ್ಚಿನ್ಹಂ ತಸ್ಯ ಗೌರವಂ |
ತದಾಚಾರವಿಧಿಂ ಶ್ರೋತುಂ ಮಮೇಚ್ಛಾ ವರ್ತತೇ ವಿಭೋ ||೩||
ಕೃಪಯಾ ಕೇವಲಂ ನಾಥ ವದ ಕಾರುಣ್ಯಸಾಗರ ||

ಪಾರ್ವತಿಯು- ಎಲೈ ಭಗವಂತನೆ ನಿನ್ನ ಮುಖದಿಂದಲೇ ಲಿಂಗದ ಮತ್ತು ಗುರುವಿನ ಲಕ್ಷಣವನ್ನು ಮಹತ್ವವನ್ನು ಕೇಳಿ ನಾನು ಧನ್ಯಳಾಗಿರುವೆನು. ಈಗ

ಜಂಗಮನ ಲಕ್ಷಣವನ್ನು ಮಹತ್ವವನ್ನು ಆತನ ಆಚಾರ ಪದ್ಧತಿಯನ್ನು ಕೇಳಬೇಕೆಂಬ ಕುತೂಹಲವುಳ್ಳವಳಾಗಿರುವೆನು. ಪ್ರಭುವೆ ದಯಮಾಡಿ ಹೇಳಬೇಕೆಂದು ಪ್ರಾರ್ಥಿಸಿದ ಬಳಿಕ ಪರಮಾತ್ಮನು—

ಯಸ್ಯನಾಸ್ತಿ ಪುನರ್ಜನ್ಮ ಗತಿರ್ನಾಸ್ತಿ ಕದಾಚನ ।
ಬಾಧತೇ ಯಂ ನ ಮರಣಂ ಶೃಣು ನಾಥೇ ಸ ಜಂಗಮಃ ॥೭॥

ನಿರಾಭಾರೀ ನಿಷ್ಪ್ರಪಂಚಃ ಸಚ್ಚಿದಾನಂದ ಲಕ್ಷಣಃ ।
ಕರ್ಮಾಕರ್ಮವಿನಿರ್ಮುಕ್ತಶ್ಚರಃ ಸಾಕ್ಷಾನ್ನಿರಂಜನಃ ॥೧೩॥

ಸ್ವಯಂ ಚರಃ ಪರ ಇತಿ ಜಂಗಮೋಸ್ಮಿನ್ನಿರಂಜನೇ ।
ಅಸ್ತಿಭೇದತ್ರಯಂ ಸಮ್ಯಗ್‌ಜ್ಞಾತವ್ಯಂ ವಲ್ಲಭೇ ತ್ವಯಾ ॥೧೪॥

ಎಲೈ ಪ್ರಿಯಳೆ? ಯಾವಾತನಿಗೆ ಗಮ್ಯಸ್ಥಾನವು, ಪುನರ್ಜನ್ಮವು ಇರುವ ದಿಲ್ಲವೊ ಯಾವಾತನನ್ನು ಮರಣವು ಬಾಧಿಸುವದಿಲ್ಲವೊ ಆತನೇ ಜಂಗಮನು. ಈ ಜಂಗಮನು ಸಾಂಸಾರಿಕವಾದ ಭಾರವಿಲ್ಲದವನೂ, ಪ್ರಪಂಚವಿದೂರನೂ (ವಿರತಿ ಯುಳ್ಳವನೂ), ಸತ್ ಚಿತ್ ಆನಂದಸ್ವರೂಪನೂ, ಕರ್ಮ ಹಾಗು ಅಕರ್ಮ ಇವು ಗಳಿಂದ ದೂರಾದವನೂ ಮಾಯಾರಂಜನೆಯಿಲ್ಲದವನೂ ಆದ ಸಾಕ್ಷಾತ್ ಪರಶಿವನು. ಇಂತಹ ನಿರಂಜನ ಜಂಗಮನಲ್ಲಿ ಸ್ವಯ, ಚರ, ಪರ ಎಂಬ ಮೂರು ಭೇದಗಳಿರುತ್ತವೆ ಅವನ್ನು ಸಮಾಧಾನದಿಂದ ಚನ್ನಾಗಿ ತಿಳಿದುಕೊ. ಎಂದು ಪರಮಾತ್ಮನು ಹೇಳಿರು ವನು. ಇಲ್ಲಿ ಪಾರ್ವತಿಯ ಪ್ರಶ್ನೆ– ಪರಮಾತ್ಮನ ಉತ್ತರ ಇವುಗಳನ್ನು ತಿಳಿದು ಕೊಂಡರೆ ಗುರುವಿನ ಮತ್ತು ಲಿಂಗದ ಲಕ್ಷಣಾದಿಗಳು ಪರಮಾತ್ಮನಿಂದ ಪೂರ್ವದಲ್ಲಿ ಹೇಳಲ್ಪಟ್ಟಿರುವವೆಂದೂ ಅವನ್ನು ಪಾರ್ವತಿ ತಿಳಿದುಕೊಂಡಿರುವಳೆಂದೂ, ಈಗ ಪಾರ್ವತಿಯು ಕೇವಲ ಜಂಗಮನ ವಿಚಾರವನ್ನೇ ಪ್ರಶ್ನೆ ಮಾಡಿರುವಳು ಅದಕ್ಕೆ ಪರಮಾತ್ಮನು ಆ ನಿರಂಜನ ಜಂಗಮದ ವಿಷಯವನ್ನೇ ವಿಸ್ತಾರವಾಗಿ ಹೇಳುವನೆಂದೂ ಸಣ್ಣ ಬಾಲಕರಿಗೂ ಸಹ ತಿಳಿಯುವ ಹಾಗೆ ಸ್ಪಷ್ಟವಾಗಿದ್ದರೂ "ಮಠದಲ್ಲಿ ವಾಸ ವಾಗಿರುವ ಈ ಸ್ವಯನೆಂಬ ನಿರಾಭಾರಿಯು ವಿರಕ್ತನಲ್ಲ, ಗುರುಗಳಿಂದ ಅಧಿಕಾರ ಹೊಂದಿದ ಈ ನಿರಾಭಾರಿ ಚರನು ವಿರಕ್ತನಲ್ಲ" ಎಂದು ಹೇಳುವದು ವದತೋ ವ್ಯಾಘಾತ ದೋಷವುಳ್ಳದ್ದೂ ಪರಮಾವಧಿ ಅಜ್ಞಾನದ್ಯೋತಕವಾದುದೂ ಆಗಿದೆ.

ಅಷ್ಟಾವರಣಾಂತರ್ಗತ ಸಾಮಾಜಿಕ ಗುರುತ್ವವು ಆಚಾರ್ಯರಲ್ಲಿರುವಂತೆ ನಿರಂಜನ ಜಂಗಮನಿಂದ ಅನುಗ್ರಹ, ಅಧಿಕಾರಾದಿಗಳನ್ನು ಪಡೆದುಕೊಂಡಂಥವರು ಮತ್ತು ಆತನಲ್ಲಿ ಶಿವಾನುಭವ ಶಾಸ್ತ್ರಾದಿಗಳನ್ನು ಅಭ್ಯಾಸ ಮಾಡುವ ಅಂತೇವಾಸಿ ಗಳು ಇದ್ದೇ ಇರುವರು. ತನ್ನಿರೂಪಿತ ವೈಯಕ್ತಿಕವಾದ ಔಪದೇಶಿಕ ಗುರುತ್ವವು ನಿರಂಜನ ಜಂಗಮನಲ್ಲಿಯೂ ಇರುತ್ತದೆ. ಆದ ಕಾರಣ ಈ ಪ್ರಕರಣದಲ್ಲಿ ಬರುವ

ಗುರುಶಬ್ದಕ್ಕೆ ನಿರಂಜನ ಜಂಗಮ ಗುರುವೆಂದೂ ಚರಪಟ್ಟಕ್ಕೆ ನಿರಂಜನ ಚರಪಟ್ಟ ವೆಂದೂ, ಪಟ್ಟಾಧಿಕಾರಿಯೆಂದರೆ ನಿರಂಜನ ಜಂಗಮ ಚರಪಟ್ಟಾಧಿಕಾರ ಪಡೆದವ ನೆಂದೂ ಅರ್ಥ ಮಾಡಬೇಕು. ಪ್ರಕರಣ ಸಂದರ್ಭ ಸನ್ನಿವೇಶ ಇವುಗಳಿಗೆ ವಿರುದ್ಧ ವಾಗಿ ಮನಬಂದಂತೆ ಅರ್ಥ ಮಾಡುವದು ಪಾಂಡಿತ್ಯದ ಲಕ್ಷಣವಲ್ಲವೆಂಬುದು ಸುಪ್ರಸಿದ್ಧ ಮಾತಾಗಿರುವದು.

## ಸಂಗ್ರಹಕಾರನ ಕಾಲ

ಈ ವೀರಶೈವಸದಾಚಾರಸಂಗ್ರಹದಲ್ಲಿ ಪರಮಾತ್ಮನ ಮುಖದಿಂದಲೇ ಹೊರ ಬಿದ್ದಂಥ ಶಿವಾಗಮಗಳಿಂದಲೂ, ಅತ್ಯಂತ ಪ್ರಾಚೀನವಾದ ಸಿದ್ಧಾಂತ ಶಿಖಾಮಣಿ ಯಿಂದಲೂ ಪ್ರಮಾಣ ವಾಕ್ಯಗಳನ್ನು ಸಂಗ್ರಹಿಸಿರುವಂತೆ, ಪ್ರಕಾಂಡ ಪಂಡಿತರಾದ ಶ್ರೀ ಮರಿತೋಂಟದಾರ್ಯರ ವೀರಶೈವಾನಂದ ಚಂದ್ರಿಕೆಯಿಂದಲೂ ಕೆಳದಿ ರಾಜರ ಕಾಲದಲ್ಲಿ ತಯಾರಾದ ವೀರಶೈವಾಚಾರ ಕೌಸ್ತುಭ ಗ್ರಂಥದಿಂದಲೂ ಅನೇಕ ಆಧಾರ ವಾಕ್ಯಗಳನ್ನು ಸಂಗ್ರಹಿಸಿರುವುದರಿಂದ ಸಂಗ್ರಹಕಾರನ ಕಾಲವು ೧೬ ನೆಯ ಶತಮಾನ ದಿಂದಈಚಿನದೆಂದು ಸ್ಫುಟವಾಗಿತಿಳಿಯುತ್ತದೆ.

**ಪಂಡಿತ ಬಸವರಾಜ ಶಾಸ್ತ್ರಿ ಬೃಹನ್ಮಠ ಪಗಡದಿನ್ನಿ**
ವ್ಯಾಕರಣತೀರ್ಥ (ಕಲಕತ್ತಾ) ವ್ಯಾಕರಣರತ್ನ (ಡಾಕಾ)
ವ್ಯಾಕರಣಶಾಸ್ತ್ರಿ (ಬನಾರಸ) ಸಾಹಿತ್ಯ ಶಿರೋಮಣಿ (ಮದ್ರಾಸ)
ಪ್ರಿನ್ಸಿಪಾಲ ಶ್ರೀ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜ
ಮೂರುಸಾವಿರ ಮಠ, ಹುಬ್ಬಳ್ಳಿ.

# ವಿಷಯಾನುಕ್ರಮಣಿಕೆ

### ೨ ಪ್ರಕರಣ

ಐದು ಜನ ಆಚಾರ್ಯರ ಐದು ಮುಖ್ಯ ಸೂತ್ರಗಳಿಗೆ ಒಂದೊದಕ್ಕೆ ಹನ್ನೆರಡು ಹನ್ನೆರಡು ಉಪಸೂತ್ರಗಳಿರುವುದರ ವಿವರಣವು ಈ ಉಪಸೂತ್ರದವರು ಗೌಣ ಗುರುಗಳಾಗಿ ವೀರಶೈವರ ಮನೆಗಳಲ್ಲಿ ಲಿಂಗಧಾರಣ ಮೊದಲಾದ ಕಾರ್ಯಗಳನ್ನು ಮಾಡುವರೆಂದು ಪರಮಾತ್ಮನು ಹೇಳಿರುವನು. ೧೫

### ೩ ಪ್ರಕರಣ

ಗೃಹಸ್ಥರಾದ ಮಾಹೇಶ್ವರರ ಮನೆ ಮನೆಗಳಲ್ಲಿ ಗುರುಗಳು ಬಹಳ ಜನರಿರುತ್ತಾರೆ. ಇವರಲ್ಲಿ ಮುಖ್ಯರಾರು ಅಮುಖ್ಯರಾರು ಎಂದು ಪಾರ್ವತಿಯು ಪ್ರಶ್ನೆ ಮಾಡಿದುದಕ್ಕೆ ಪರಮಾತ್ಮನು ಲೋಕದಲ್ಲಿ ಗುರುತ್ವವು ಮುಖ್ಯ ಗೌಣ ಎಂದು ಎರಡು ವಿಧವಾಗಿರುವದು ಎಂದು ಅಪ್ಪಣೆ ಮಾಡುವನು. ೧೯

### ೪ ಪ್ರಕರಣ

ಐದು ಜನ ಉಪಾಚಾರ್ಯರು, ಅವರ ಲಕ್ಷಣ, ಪ್ರತಿಯೊಬ್ಬ ವೀರಶೈವನ ಮನೆಯಲ್ಲಿ ನಡೆಯುವ ಲಿಂಗಧಾರಣ ವಿವಾಹಾದಿ ಕಾರ್ಯಗಳಲ್ಲಿ ಅವರ ಕರ್ತವ್ಯ ಮೊದಲಾದುದರ ವಿವರಣವು. ೨೧

### ೫ ಪ್ರಕರಣ

ಪಂಚಮ (ಭಕ್ತ)ರ ಉತ್ಪತ್ತಿ ಮತ್ತು ಉಪಪಂಚಮರ ಉತ್ಪತ್ತಿ ಅವರವರ ಗುರು, ಶಾಖಾ, ಪ್ರವರಾದಿಗಳ ವಿವರವು. ೨೬

### ೬ ಪ್ರಕರಣ

ಪುಟ

ಅಪ್ರಾಕೃತ ಸೃಷ್ಟಿಯ ಕಾಲಾದಿ ನಿರೂಪಣವು. "ಪರಶಿವ" ಎಂಬ ಹೆಸರುಳ್ಳ ಬ್ರಹ್ಮವು ಜಗತ್ತನ್ನು ನಿರ್ಮಾಣ ಮಾಡಬೇಕೆಂಬ ಇಚ್ಛೆಯಿಂದ ಕಿಂಚಿದಾನಂದ ಸ್ಫೂರ್ತಿಯನ್ನು ಪ್ರಕಾಶ ಪಡಿಸುವಂತಹ ಬೇರೊಂದು ಸ್ವರೂಪವನ್ನು ಹೊಂದಿತು. ಆಗ ಆತನಲ್ಲಿ ಅವಿನಾಭಾವ ಸಂಬಂಧದಿಂದಿರುವ ಶಕ್ತಿಯೂ ತತ್ಸ್ವರೂಪವನ್ನು ಅನುಸರಿಸಿತು ಸರ್ವ ಶಕ್ತಿ ಯುಕ್ತನಾದ ಶಿವನು ಮೊದಲಿಗೆ ಬ್ರಹ್ಮನನ್ನು ಹುಟ್ಟಿಸಿ ಅವನಿಗೆ ಸೃಷ್ಟಿ ಮಾಡುವ ವಿದ್ಯೆಯನ್ನು ಬೋಧೆ ಮಾಡಿದನು ಆದರೂ ಬ್ರಹ್ಮನಿಗೆ ಅದು ಸಾಧ್ಯವಾಗಲಿಲ್ಲ, ಬ್ರಹ್ಮನ ಪ್ರಾರ್ಥನೆಯಮೇರೆಗೆ ಸೃಷ್ಟಿಸುವ ಉಪಾಯಗಳನ್ನೆಲ್ಲಾ ಹೇಳಿದನು ಅಷ್ಟಾದರೂ ಬ್ರಹ್ಮನಿಗೆ ಸೃಷ್ಟಿ ಮಾಡುವದು ಸಾಧ್ಯವಾಗಲಿಲ್ಲ ಆಗ ಪರಶಿವನು ಬ್ರಹ್ಮನ ಪ್ರಾರ್ಥನೆಯಂತೆ ತನಗೆ ಸಮಾನವಾದ ಶಕ್ತಿ ಸಾಮರ್ಥ್ಯ ವುಳ್ಳ ಪ್ರಮಥರನ್ನು ಸೃಷ್ಟಿಮಾಡಿ ತೋರಿಸಿದನು. ಆವಾಗ ಅಪ್ರಾಕೃತಗಳಾದ ಆಚಾರಾದಿಗಳನ್ನು ೩೮

ಬೋಧಮಾಡಿದನು. ಆ ಪ್ರಮಥರ ಗೋತ್ರಗಳಲ್ಲಿ ಹುಟ್ಟಿದ ಮಾಹೇಶ್ವರರೆಲ್ಲರೂ ಅಪ್ರಾಕೃತರು ತರುವಾಯ ಬ್ರಹ್ಮನಿಂದ ಸೃಷ್ಟಿ ಮಾಡಲ್ಪಟ್ಟವರು ಪ್ರಾಕೃತರು.

ಸ್ಥಾಪನ, ಯಾವಮಹಾಚಾರ್ಯರ ಗೋತ್ರಸುತ್ರಾನುಯಾಯಿಗಳ ವೀರ ಮಾಹೇಶ್ವರ ದೀಕ್ಷಾಮಾಡುವದಿದೆಯೋ ಆ ಆಚಾರ್ಯರ ಪ್ರಣವ ಕಲಶ ಮಧ್ಯದಲ್ಲಿ ಬರುವಂತೆ ಸ್ಥಾಪಿಸುವದು ಈ ಕಲಶಗಳಿಗೆ ಮಹಾಚಾರ್ಯರಿಗೆ ಸಂಬಂಧಿಸಿದ ಐದು ಪರಡಿಗಳನ್ನು ಪೂರ್ಣವಾಗಿಯೂ ಪಂಚಉಪಾಚಾರ್ಯರಿಗೆ ಐದು ಅರ್ಧ ಪ್ರಮಾಣ ಪರಡಿಗಳನ್ನು ಇಡಬೇಕು.

# शुद्धाशुद्ध पत्रिका

| अशुद्ध | शुद्ध | पुट | पंक्ति | अशुद्ध | शुद्ध | पुट | पंक्ति |
|---|---|---|---|---|---|---|---|
| मनुण्यान् | मनुष्यान् | ३, | ८ | ह्रदे | ह्रदा | १३१. | १२ |
| जगत्स्रष्ठ | जगत्स्रष्टं | ६, | ४ | लिङ्ग | लिङ्गं | १३२, | ५ |
| दिवाकरच्चैव | दिवाकरश्चैव | ७, | ९ | स्वयंभुवागमे | स्वायंभुवागमे | १३५, | १३ |
| तन्नाम | तन्नाम | १०, | ११ | रभ्मर्च्य | रभ्यर्च्य | १३७, | १२ |
| दडो | दंडो | ११, | ६ | हिमान्येव | हिमानीव | १३९, | १ |
| मुंखोत्पन्न | मुखोत्पन्न | ११, | १० | मम्मत्कुमार | मस्मत्कुमार | १४३, | ५ |
| पुराणं | पुराणं | १५, | ३ | दीक्ष येदुप | दीक्षयेदुप | १४५, | ४ |
| चन्द्रगुडो | चन्द्रगुंडो | १६, | ३ | त्रघेण | त्रयेण | १४८, | ४ |
| पुसां | पुंसां | ३६, | ७ | अमिषिंच्य | अभिषिच्य | १५२, | ३ |
| सर्वक्षं | सर्वज्ञं | ४४, | ६ | प्रतिषाद्यते | प्रतिपाद्यते | १५२, | १० |
| व्रह्य | व्रह्म | ४४, | ११ | गुरुर्लिंग | गुरुर्लिङ्गं | १५३, | ११ |
| सच्चिदान्द | सच्चिदानन्द | ४५, | ८ | सुकृतं | स्वकृतं | १५५, | ३ |
| सर्वज्ञान् | सर्वज्ञान् | ४८, | ४ | दीक्षा | दीक्षां | १५८, | ३ |
| तामाकृप्य | तामाकृष्य | ६१, | ८ | भासके | भागके | १५९, | ८ |
| संज्ञकं | संज्ञकं | ६२, | १० | एकाश | एकादश | १६१, | ८ |
| वीरशैवोऽसो | वीरशैवोऽसौ | ७४, | ६ | मृन्मय | मृण्मय | १६२, | ४ |
| जितेंद्रियषरो | जितेंद्रियपरो | ८४, | ७ | मघ्मे | मध्ये | १६२, | ९ |
| लुप्तव्रत | लुप्तव्रत | ८४, | ८ | प्रतिगृह्म | प्रतिगृह्य | १६५, | ५ |
| षड्विर्णे | षड्वर्णे | ८८, | २ | मांगांदि | मांगादि | १६५, | ६ |
| तृपिं | तृप्तिं | १०८, | १० | मिन्न | भिन्न | १६६, | ७ |
| मत्रेण | मंत्रेण | १०९, | १४ | मस्त्त्रक्ष | मस्त्रक्ष | १९२, | १ |
| षांचरात्र | पांचरात्र | ११४, | ९ | स्पृहाऽपर्श | स्पृहास्पर्श | २०२, | २ |
| संत्कारं | संस्कारं | १२०, | ३ | | | | |

# ಶುದ್ಧಾಶುದ್ಧ ಪತ್ರಿಕೆ

| ತಪ್ಪು | ಒಪ್ಪು | ಪುಟ | ಪಂಕ್ತಿ |
|---|---|---|---|
| ಪ್ರಸಿದ್ಧಳಾಗಿ | ಪ್ರಸಿದ್ಧಗಳಾಗಿ | ೯ | ೪ |
| ರುತ್ತವೆ | ರುತ್ತವೆ | | |
| ಊದ್ಧೂಳನ | ಉದ್ಧೂಳನ | ೪೦ | ೧೨ |
| ಅಗದಿರುವ | ಆಗದಿರುವ | ೫೪ | ೧೫ |
| ಕೇಲವ | ಕೇವಲ | ೫೪ | ೧೮ |
| ಕರಚಾತ | ಕರಜಾತ | ೫೫ | ೫ |
| ಪೂಜಾನಿ | ಪೂಜಾದಿ | ೫೫ | ೯ |
| ಆ ಕೂಡಲೇ | ಆ ಕೂಡಲೇ | ೫೬ | ೧ |
| ಎಕ | ಏಕ | ೫೬ | ೨ |
| ಸಮಾರಾಧಣ | ಸಮಾರಾಧನ | ೫೬ | ೧೦ |
| ಅಂಕುರಾರ್ಪನ | ಅಂಕುರಾರ್ಪಣ | ೫೬ | ೧೦ |
| ಮತ್ತೊಂದು | ಮತ್ತೊಂದು | ೭೨ | ೧ |
| ನಿಷದ್ದವಾದ | ನಿಷಿದ್ಧವಾದ | ೮೨ | ೧೩ |
| ಅನ್ನ | ಅನ್ಯ | ೮೨ | ೧೪ |
| ನಿರ್ಧರಿಲ್ಪಟ್ಟೆ | ನಿರ್ಧರಿಸಲ್ಪಟ್ಟೆ | ೮೬ | ೧೩ |
| ಸ್ವಯಂಭೂ | ಸ್ವಾಯಂಭು | | |
| ಆಗಮು | ವಾಗಮು | ೧೩೫ | ೨೫ |
| ಶಿಲಾಗಮು | ಶಿವಾಗಮು | ೧೩೬ | ೧೫ |
| ಮುಗಿಪುಮು | ಮುಗಿದುದು | ೧೪೪ | ೧೫ |
| ಯೋಗ್ಯ | ದೊರೆತಷ್ಟು | | |
| ರೀತಿಯಿಂದ | ಸಾಮಾನಗಳನ್ನು | | |
| | ಸಂಗ್ರಹಿಸಿ | ೧೫೧ | ೨೦ |
| ಅವರಿಗೆ ಕ್ಷಿಣೆ | ಅವರಿಗೆ ದಕ್ಷಿಣೆ | ೧೫೭ | ೨೬ |
| ಹೀಳಬೇಕು | ಹೇಳಬೇಕು | ೧೮೪ | ೨೪ |
| ಯುಳ್ಳವರಾಗಿ | ಯುಳ್ಳವಳಾಗಿ | ೧೯೩ | ೨೬ |
| ಪತಿಗ್ರಹ | ಪ್ರತಿಗ್ರಹ | ೧೯೫ | ೨೦ |
| ಭಸ್ಪನು | ಭ್ರಷ್ಟನು | ೧೯೮ | ೨೫ |
| | ಮುನ್ನುಡಿಯುಲ್ಲಿಯು | | |
| ಪರಿಶುದ | ಪರಿಶುದ್ಧ | ೬ | ೨೮ |
| ಪರ್ಗ | ವರ್ಗ | ೮ | ೧೫ |
| ವನ್ನೂ | ವನ್ನು | ೯ | ೭ |
| ಮಂತೋಂಟದಾ | ಮರಿತೋಂಟದಾ | ೧೧ | ೧೯ |
| ಮತೋಜಿತಾ | ಮತೊಚೀತಾ | ೧೧ | ೨೩ |
| ಮರಮು | ಪರಮು | ೧೩ | ೨೧ |
| ಮಾಹೇಶ್ವರ | ಮಾಹೇಶ್ವರರ | ೧೪ | ೧೨ |
| ಶಬ್ದಗ್ಗ | ಶಬ್ದಕ್ಕೆ | ೧೫ | ೫ |
| ದೋಸವು | ದೋಷವೂ | ೧೫ | ೨೧ |
| ತದ್ಗುರುಣಾಂ | ತಪ್ಗುರುಣಾ | ೧೬ | ೧೯ |

ಸೊಲ್ಲಾಪುರದಲ್ಲಿ ಮುಪ್ರಣವಾದ ಪುಸ್ತಕದೊಳಗಿನ ಪ್ರಕ್ಷಿಪ್ತವಾಕ್ಯಗಳು

लिङ्गिनः पञ्चमा ज्ञेया इतरे लिङ्गधारिणः
अतः पञ्चम संजातान् गृहीत्वा शिष्यपुत्रकान् ।
त एववन्द्याः पूज्याश्च नेतरे लिङ्गधारिणः ।
अतो गुरुपदप्राप्तिः श्रेष्ठान्पञ्चमसंज्ञकान् ।
विहाय नास्ति नास्त्येवमन्येषां लिङ्गधारिणाम् ।

ಇಲ್ಲಿ ಪಂಚಕ ಎಂದು ಹೇಳಬೇಕಾಗಿದ್ದ ಕ ಕಾರಸ್ಥಾನದಲ್ಲಿ ಮಕಾರವು ಮುನ್ನುಡಿಯಲ್ಲಿ ಹೇಳಿದಂತೆ ಪ್ರಕ್ಷಿಪ್ತವಾಗಿದೆ.

ॐ

## ।। अथ श्रीमद्वीरशैवसदाचारसंग्रहः प्रारभ्यते ।।

तं प्रणम्य महादेवं सांबं त्रैलोक्यरक्षकम् ।
वक्ष्ये श्रीवीरशैवानां सदाचारस्य संग्रहम् ।। १ ।।

पाशुपत्यादितंत्रेषु श्रीमदाचारकौस्तुभे ।
तदादिकेषु ग्रंथेषु विविच्य कथितोऽत्र वै ।। २ ।।

वीरशैवप्रकाशिकायाम्

पाशुपत्यादितंत्रेषु प्रतिपाद्यं सदाशिवम् ।
संप्रणम्य प्रवक्ष्यामि वीरशैवप्रकाशिकाम् ।। ३ ।।

---

ಓಂ ಸಿದ್ಧಲಿಂಗ ಪರಬ್ರಹ್ಮಣೇ ನಮಃ

## ಅಥ ಶ್ರೀಮದ್ವೀರಶೈವ ಸದಾಚಾರ ಸಂಗ್ರಹಃ

ಸ್ವರ್ಗ, ಮರ್ತ್ಯ, ಪಾತಾಳವೆಂಬ ಮೂರು ಲೋಕಗಳ ರಕ್ಷಕನಾದಂಥ ಉಮಾ-ರೂಪಶಕ್ತಿಯಿಂದ ಯಾವಾಗಲೂ ಕೂಡಿಕೊಂಡಿರುವಂಥ ಆ ಪ್ರಸಿದ್ಧನಾದ ಮಹಾ-ದೇವನನ್ನು ನಮಸ್ಕರಿಸಿ ವೀರಶೈವರ ಸದಾಚಾರಗಳ ಸಂಗ್ರಹವನ್ನು (ಸದಾಚಾರ ಸಂಗ್ರಹವೆಂಬ ಪುಸ್ತಕವನ್ನು) ಹೇಳುವೆನು. ॥೧॥

ಪಾಶುಪತ್ಯ ಮೊದಲಾದ ತಂತ್ರ (ಆಗಮ)ಗಳಲ್ಲಿ "ವೀರಶೈವಾಚಾರಕೌಸ್ತುಭ" ಎಂಬ ಪುಸ್ತಕದಲ್ಲಿ ಮತ್ತು ಬೇರೆ ಬೇರೆ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟ ಸದಾಚಾರವು ಈ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟಿದೆ. ॥ ೨ ॥

ವೀರಶೈವ ಪ್ರಕಾಶಿಕೆಯಲ್ಲಿ

ಪಾಶುಪತ್ಯಾಗಮವೇ ಮೊದಲಾದವುಗಳಲ್ಲಿ ಪ್ರತಿಪಾದನಮಾಡಲ್ಪಟ್ಟ ಸದಾಶಿವನನ್ನು ನಮಸ್ಕರಿಸಿ "ವೀರಶೈವ ಪ್ರಕಾಶಿಕಾ" ಎಂಬ ಗ್ರಂಥವನ್ನು ಹೇಳುವೆನು ॥೩॥

इह खलु परम कारुणिको विराड्रूपः परंज्योतिर्निर्विकारो निराकारः परशिवः स्वांशभूतान् ब्रम्हविष्णुमहेश्वरादीन् सम्यगुत्पाद्य तत्र परमाप्ततमं सदाशिवमाकार्य तं प्रतीत्थमुपादिशत् ॥ किमिति ॥ पदार्थो द्विविधः । स्वतंत्रोऽस्वतंत्रश्चेति तत्र स्वतंत्रो ह्यहमेव अस्वतंत्रश्चेतनोऽचेतनश्चेति द्विविधः,, तत्रापि चेतनो नित्यमुक्त नित्यसंसारि भेदात् द्विविधः ॥ तत्र वीरनंद्यादयस्तथैकाक्षरादयः प्रमथगणांताश्चेतना नित्यमुक्ताः, नित्यसंसारिणस्तु सृष्टिस्थित्यन्तकर्तारोब्रम्हविष्णु महेश्वरादयो मनुष्यान्ताः ।

---

ಈ ವಿಶ್ವದಲ್ಲಿ ಅತ್ಯಂತ ಕರುಣಾಶಾಲಿಯೂ. ವಿರಾಡ್ರೂಪನೂ. ಪರಂಜ್ಯೋತಿ ಸ್ವರೂಪನೂ. ವಿಕಾರರಹಿತನೂ. ಆಕಾರರಹಿತನೂ. ಆದ ಪರಶಿವನು ತನ್ನ ಅಂಶರಾದ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವ ಇವರನ್ನು ಹುಟ್ಟಿಸಿ ಅವರಲ್ಲಿ ಅತ್ಯಂತ ಆಪ್ತನಾದ ಸದಾಶಿವನನ್ನು ಕರೆದು ಆ ಸದಾಶಿವನಿಗೆ ಈ ರೀತಿಯಾಗಿ ಉಪದೇಶ ಮಾಡಿದನು. ಏನೆಂದರೆ:- ಪದಾರ್ಥವು ಸ್ವತಂತ್ರ, ಅಸ್ವತಂತ್ರ ಎಂದು ಎರಡು ವಿಧವಾಗಿ ರುವದು. ಇವುಗಳಲ್ಲಿ ಸ್ವತಂತ್ರನೆಂದರೆ ನಾನೊಬ್ಬನೇ. ಅಸ್ವತಂತ್ರವು ಚೇತನ. ಅಚೇತನ ಎಂದು ಎರಡು ವಿಧ. ಇದರಲ್ಲಿಯೂ ಚೇತನವು ನಿತ್ಯಮುಕ್ತ ಮತ್ತು ನಿತ್ಯ ಸಂಸಾರಿ ಎಂದು ಎರಡು ವಿಧ. ಇದರಲ್ಲಿ ವೀರ, ನಂದಿ, ಭೃಂಗಿ, ವೃಷ, ಸ್ಕಂದ ಎಂಬ ಗೋತ್ರಾಧಿಕಾರಿಗಳು ಮತ್ತು ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂಬ ಮಹಾಚಾರ್ಯರು ಆದಿಯಾಗಿ ಪ್ರಮಥಗಣಂಗಳ ವರೆಗಿನ ಚೇತನರು ನಿತ್ಯ ಮುಕ್ತರು. ನಿತ್ಯಸಂಸಾರಿಗಳೆಂದರೆ ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹ ಇವುಗಳನ್ನು ಮಾಡುವಂಥ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವ ಮೊದಲಾಗಿ ಮನುಷ್ಯರ ವರೆಗಿನವರು.

---

ವಿ:— ಜನನ ಮರಣರೂಪ ಸಂಸಾರಚಕ್ರದಲ್ಲಿ ಯಾರು ಸಿಕ್ಕಿಲ್ಲವೋ ಅವರು ನಿತ್ಯಮುಕ್ತರು. ಯಾರು ಸಿಕ್ಕಿರುವರೊ ಅವರು ನಿತ್ಯಸಂಸಾರಿಗಳು. ಹಾಗಾದರೆ ಬ್ರಹ್ಮಾದಿಗಳು ನಿತ್ಯಸಂಸಾರಿಗಳು ಹೇಗೆಂದರೆ ಬ್ರಹ್ಮನಿಗೆ ಸೃಷ್ಟಿ ಮಾಡುವ ಕೆಲಸವು. ವಿಷ್ಣುವಿಗೆ ಸಂರಕ್ಷಣ ಮಾಡುವ ಭಾರವು. ರುದ್ರನಿಗೆ ಲಯ (ಸಂಹಾರ) ಮಾಡುವ ಕಾರ್ಯವು ಪ್ರತಿದಿವಸಇದ್ದೇ ಇರುವದರಿಂದ ಇವರು ನಿತ್ಯ ಸಂಸಾರಿಗಳೆನಿಸಿಕೊಳ್ಳು-ವರು. ಮನುಷ್ಯರು ದೇವದಾನವಾದಿಗಳು ಸಹ ಜನನ ಮರಣ ರೂಪ. ಸಂಸಾರ ಚಕ್ರದಲ್ಲಿ ಸಿಕ್ಕಿರುವದರಿಂದ ನಿತ್ಯ ಸಂಸಾರಿಗಳೆನಿಸಿಕೊಳ್ಳುವರು.

तान् सर्वान् मन्मुखोद्भूताष्टाविंशत्यागमेषु असुरमोहकवेदविरुद्धान्दशोपागमान् विहाय सकलवेदार्थनिर्णायकाष्टादशसदागमोक्त प्रकारेण मम सद्योजातादिपंचमुखोद्भूतैः कृतयुगे एकाक्षर द्व्यक्षर त्र्यक्षर चतुरक्षर पंचाक्षर इति नामसमेतैः पंचाचार्यैः ब्रम्हादि सर्व देवतागणान् नीलमयलिंगं धारयित्वा पंचाक्षरीमंत्रमुपदिश्य मोक्ष मार्गं प्रदर्शय ॥ त्रेतायां एकवक्त्र द्विवक्त्र त्रिवक्त्र चतुर्वक्त्रपंच-वक्त्र इति नामसमेतैस्तैरेव पंचाचार्यैः कौशिककश्यपवसिष्ठादीन् ऋषिगणान् सर्वान् मनुष्यान्यक्षगंधर्व किन्नरानपि सर्वान् रत्नमयलिंगं धारयित्वा पंचाक्षरीमंत्रमुपदिश्य मोक्षमार्गं प्रदर्शय ॥ द्वापरे रेणुकदारुक शंखुकर्ण धेनुकर्णविश्वकर्णेति नामसमेतैस्तै रेव पंचाचार्यैः

---

ನನ್ನ ಮುಖದಿಂದ ಹೊರಬಿದ್ದ ಇಪ್ಪತ್ತೆಂಟು ಆಗಮಗಳಲ್ಲಿ ಅಸುರ ಮೋಹಕಗಳೂ ವೇದವಿರುದ್ಧಗಳೂ ಆದ ಹತ್ತು ಉಪಾಗಮಗಳನ್ನು ಬಿಟ್ಟು ಉಳಿದ ಹದಿನೆಂಟು ಶಿವಾಗಮಗಳು ಸಕಲ ವೇದಾರ್ಥ ನಿರ್ಣಾಯಕಗಳಾಗಿರುವವು. ಈ ಶಿವಾಗಮಗಳಲ್ಲಿ ಹೇಳಿದ ಪ್ರಕಾರವಾಗಿ ನನ್ನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪಂಚಮುಖೋದ್ಭೂತರಾದ ಕೃತಯುಗದಲ್ಲಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ ಎಂಬ ನಾಮವುಳ್ಳ ಪಂಚಾಚಾರ್ಯರಿಂದ ಬ್ರಹ್ಮನೇ ಮೊದಲಾದ ಸಕಲ ದೇವತೆಗಳಿಗೆ ನೀಲಮಯ ಲಿಂಗವನ್ನು ಧಾರಣ ಮಾಡಿಸಿ ಪಂಚಾಕ್ಷರ ಮಂತ್ರವನ್ನು ಉಪದೇಶ ಮಾಡಿ ಮೋಕ್ಷ ಮಾರ್ಗವನ್ನು ತೋರಿಸು.

ತ್ರೇತಾಯುಗದಲ್ಲಿ ಏಕವಕ್ತ್ರ, ದ್ವಿವಕ್ತ್ರ, ತ್ರಿವಕ್ತ್ರ, ಚತುರ್ವಕ್ತ್ರ, ಪಂಚವಕ್ತ್ರ ಎಂಬ ಹೆಸರುಳ್ಳ ಅದೇ ಪಂಚಾಚಾರ್ಯರಿಂದ ಕೌಶಿಕ, ಕಶ್ಯಪ, ವಸಿಷ್ಠಾದಿ ಮುನಿಗಳ ಗುಂಪಿಗೂ, ಸರ್ವಮನುಷ್ಯರಿಗೂ ಯಕ್ಷ, ಗಂಧರ್ವ, ಕಿನ್ನರ ಮೊದಲಾದ ಎಲ್ಲರಿಗೂ ರತ್ನಮಯವಾದ ಲಿಂಗವನ್ನು ಧಾರಣ ಮಾಡಿಸಿ ಪಂಚಾಕ್ಷರೀ ಮಂತ್ರವನ್ನು ಉಪದೇಶ ಮಾಡಿ ಮೋಕ್ಷ ಮಾರ್ಗವನ್ನು ತೋರಿಸು.

ದ್ವಾಪರಯುಗದಲ್ಲಿ ರೇಣುಕ, ದಾರುಕ, ಶಂಖುಕರ್ಣ, ಧೇನುಕರ್ಣ, ವಿಶ್ವಕರ್ಣ ಎಂಬ ಹೆಸರುಗಳುಳ್ಳ ಅದೇ ಪಂಚಾಚಾರ್ಯರಿಂದ ಹದಿನಾರು ಜನ ಮಹಾರಾಜರಾದ ಹರಿಶ್ಚಂದ್ರ, ನಲ, ಪುರೂ, ಕುಕುತ್ಸ, ಪುರೂರವ ಮೊದಲಾದವರಿಗೂ ಮತ್ತು ಎಲ್ಲಾ ರಾಕ್ಷಸ ಗುಂಪಿಗೂ ವಜ್ರಮಯವಾದ ಲಿಂಗವನ್ನು ಧಾರಣ ಮಾಡಿಸಿ ಪಂಚಾಕ್ಷರ ಮಂತ್ರವನ್ನು ಉಪದೇಶ ಮಾಡಿ ಮೋಕ್ಷ ಮಾರ್ಗವನ್ನು ತೋರಿಸು.

षोडश महाराजान् हरिश्चंद्र नल पुरु कुकुत्स पुरूरवादीन् तथैव राक्षस गणान् सर्वानपि वज्रमयलिंगं धारयित्वा पंचाक्षरमुपदिश्य मोक्षमार्गं प्रदर्शय ॥ कलियुगे, रेवणाराध्य, मरुळाराध्य, एकोरामाराध्य, पंडिताराध्य, विश्वाराध्य इति नामसमेतैः तैरेव पंचाचार्यैः

ब्रह्म क्षत्रिय वैश्य शूद्रप्रमुखानष्टादशजातीनेकशतकुलजान्मनुष्यान् शिलामयलिंगं धारयित्वा पंचाक्षरमुपदिश्य मोक्षमार्गं प्रदर्शय इति साक्षात्परंज्योतिः परशिवः कार्यरुद्रमुपादिशत्,, तदुक्तक्रमेणैव प्रवर्तनशीलो महादेवः पार्वतीं प्रतीत्थमभापत.

श्रीमत्कैलासशिखरे भासमानं निरामयम् ।
रत्नसिंहासने सम्यगारूढं च सदाशिवम् ॥ ४ ॥
त्रिलोचनं चतुर्बाहुं तडित्कोटिसमप्रभम् ।
अमितादित्यसंकाशं शुद्धस्फटिकसन्निभम् ॥ ५ ॥

---

ಕಲಿಯುಗದಲ್ಲಿ ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ, ಎಂಬ ಹೆಸರುಗಳಿಂದ ಪ್ರಸಿದ್ಧರಾದ ಅದೇ ಪಂಚಾಚಾರ್ಯರಿಂದ ಬ್ರಹ್ಮ ಕ್ಷತ್ರಿಯ. ವೈಶ್ಯ. ಶೂದ್ರ ಮೊದಲಾದ ಹದಿನೆಂಟು ಜಾತಿಯ ನೂರೊಂದು ಕುಲದ ಮಾನವರಿಗೆ ಶಿಲಾಮಯವಾದ ಲಿಂಗವನ್ನು ಧಾರಣ ಮಾಡಿಸಿ ಪಂಚಾಕ್ಷರಮಂತ್ರವನ್ನು ಉಪದೇಶ ಮಾಡಿ ಮೋಕ್ಷಮಾರ್ಗವನ್ನು ತೋರಿಸು.

ಎಂದು ಸಾಕ್ಷಾತ್ ಪರಂಜ್ಯೋತಿ ಸ್ವರೂಪನಾದ ಪರಶಿವನು ಕಾರ್ಯರುದ್ರನನ್ನು ಕುರಿತು ಉಪದೇಶ ಮಾಡಿದನು. ಆ ಪರಶಿವನು ಹೇಳಿದ ಕ್ರಮದಿಂದಲೇ ಪ್ರವೃತ್ತಿ ಮಾರ್ಗದಲ್ಲಿ ನಿರತನಾದ ಮಹಾದೇವನು ಪಾರ್ವತಿಯನ್ನು ಕುರಿತು ಹೀಗೆ ಹೇಳಿದನು.

ಸಂಪತ್‌ಶಾಲಿಯಾದ ಕೈಲಾಸದ ಶಿಖರದಲ್ಲಿ ರತ್ನ ಖಚಿತ ಸಿಂಹಾಸನದ ಮೇಲೆ ಉತ್ತಮ ರೀತಿಯಿಂದ ಕೂತಿರುವಂಥ ರೋಗ ರಹಿತನಾದ ಯಾವಾಗಲೂ ಕಲ್ಯಾಣ ವನ್ನುಂಟು ಮಾಡುತ್ತಿರುವಂಥ ॥४॥ ಮೂರು ಕಣ್ಣುಳ್ಳ, ನಾಲ್ಕು ಬಾಹುವುಳ್ಳ, ಮಿಂಚಿನ ಗುಂಪಿಗೆ ಸಮಾನವಾದ ಪ್ರಭೆಯುಳ್ಳ, ಅನೇಕ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಸ್ವಚ್ಛವಾದ ಸ್ಫಟಿಕಕ್ಕೆ ಸಮಾನನಾದ ॥೫॥ ಕಪ್ಪು ಕಂಠವುಳ್ಳ,

नीलग्रीवं शशांकांकं खड्गखट्वांगधारिणम् ।
नागयज्ञोपवीतं च व्याघ्रचर्मोत्तरीयकम् ॥ ६ ॥

कमंडलुधरं देवमक्षमालाविभूषितम् ।
वरदाभयहस्तं च नमज्जनफलप्रदम् ॥ ७ ॥

वृषोपरिसमारूढमुमादेहार्धधारिणम् ।
दुर्दान्तं कपिलजटं शिखामध्ये तु धारिणम् ॥ ८ ॥

अमृतेनार्पितं हृष्टं दिव्यभोगसमन्वितम् ।
दिग्देवतासमायुक्तम् सुरासुरनमस्कृतम् ॥ ९ ॥

नित्यं च शाश्वतं शुद्धं ध्रुवमक्षरमव्ययम् ।
सर्वव्यापिनमीशानं रुद्रं वै विश्वरूपिणम् ॥ १० ॥

एतादृशं महादेवं गिरिजा समभाषत ।
भगवन् प्रष्टुमिच्छामि ममागः क्षंतुमर्हसि ॥ ११ ॥

---

ಚಂದ್ರಧರನಾದ ಖಡ್ಗ ಮತ್ತು ಖಟ್ವಾಂಗವೆಂಬ ಆಯುಧಗಳನ್ನು ಕೈಯ್ಯಲ್ಲಿ ಹಿಡಿದಂಥ, ಹಾವನ್ನೇ ಯಜ್ಞೋಪವೀತದಂತೆ ಹಾಕಿಕೊಂಡಿರುವಂಥ, ಹುಲಿಯ ಚರ್ಮವನ್ನು ಹೊದ್ದಿರುವಂಥ ॥೬॥ ಕಮಂಡಲವನ್ನು ಹಿಡಿದಿರುವ, ರುದ್ರಾಕ್ಷಿ ಮಾಲೆಗಳಿಂದ ಶೋಭಿಸುವಂಥ, ಪ್ರಕಾಶಮಾನನಾದ, ವರವನ್ನು ಅಭಯವನ್ನು ಕೊಡುವ ಹಸ್ತವುಳ್ಳ, ಶರಣಾಗತರಾದ ಜನರಿಗೆ ಅನೇಕ ಫಲಗಳನ್ನು ಕೊಡುವಂಥ ॥೭॥ ನಂದೀಶ್ವರನ ಮೇಲೆ ಕೂತಿರುವಂಥ ತನ್ನ ಅರ್ಧ ದೇಹದಲ್ಲಿ ಪಾರ್ವತಿಯನ್ನು ಧಾರಣ ಮಾಡಿಕೊಂಡಿರುವಂಥ, ಮಹಾಜಿತೇಂದ್ರಿಯನಾದ, ಮಸ್ತಕದಲ್ಲಿ ಕಪಿಲವರ್ಣದ ಜಡೆಗಳನ್ನು ಧರಿಸಿರುವಂಥ ॥೮॥

ಅಮೃತ ಸೇವನದಿಂದ ಸದಾಸಂತುಷ್ಟನಾದ ಸರ್ವಶ್ರೇಷ್ಠವಾದ ಭೋಗವುಳ್ಳಂಥ ದಿಕ್ಪಾಲಕರೊಡನೆ ಕೂಡಿಕೊಂಡಿರುವಂಥ ದೇವತೆಗಳಿಂದಲೂ. ದಾನವರಿಂದಲೂ ನಮಸ್ಕರಿಸಲ್ಪಡುವ ॥೯॥ ನಿತ್ಯನೂ, ಶಾಶ್ವತನೂ, ಶುದ್ಧನೂ. ಸ್ಥಿರವಾದವನೂ, ನಾಶರಹಿತನೂ, ಕ್ಷೀಣವಾಗದಿರುವವನೂ, ಎಲ್ಲಾ ಕಡೆಯಲ್ಲಿ ವ್ಯಾಪಿಸಿಕೊಂಡಿರುವಂಥ ವಿಶ್ವಕ್ಕೆ ಒಡೆಯನೂ, ರೌದ್ರನೂ ವಿರಾಡ್ರೂಪನೂ, ಆದ ॥೧೦॥ ಈ ವಿಧವಾದ ಮಹಾದೇವನನ್ನು ಕುರಿತು ಪಾರ್ವತಿಯು, ಭಗವಂತನೆ? ನಾನು ಕೆಲವು ವಿಷಯಗಳನ್ನು ಕೇಳಬೇಕೆಂದು ಇಚ್ಛಿಸುತ್ತೇನೆ. ಅದರಲ್ಲಿ ನನ್ನದು ಏನಾದರೂ ತಪ್ಪು ಆದರೆ ಅದನ್ನು ತಾವು ಕ್ಷಮಿಸಬೇಕು. ಎಂದು ಕೇಳಿಕೊಂಡಳು. ॥೧೧॥

ब्रम्हविष्णुमहेशानां मध्ये कः प्रवरो भवेत् ।
कः सर्वज्ञः स्वतंत्रः को जगत्स्रष्टा च को भवेत् ॥ १२ ॥

जगत्पालनशीलः को जगतामंतकश्च कः ।
किमर्थं च जगत्सृष्टं कः कः कं कमसीसृजत् ॥ १३ ॥

एवं गिरिजया पृष्टः किंचिद्धास्यमुखः शिवः ।
समाचष्टे पुरावृत्तं पाशुपत्यागमोदितं ॥ १४ ॥

ईश्वर उवाच

अहमेव परं ब्रम्ह निर्गुणश्च निराकृतिः ।
अप्रमेयोऽप्यमेयात्मा निरालंबो निराकुलः ॥ १५ ॥

निष्किंचनश्च निर्वैरोऽप्यवाङ्मानसगोचरः ।
विराड्रूपः स्वरमणः स्वतंत्रः सर्ववित्स्वयम् ॥ १६ ॥

---

ಬ್ರಹ್ಮ, ವಿಷ್ಣು, ಮಹೇಶ ಈ ಮೂವರಲ್ಲಿ ಯಾರು ಶ್ರೇಷ್ಠರು. ಇವರಲ್ಲಿ ಸರ್ವಜ್ಞನು ಯಾರು? ಸ್ವತಂತ್ರನು ಯಾರು ಮತ್ತು ಈ ಜಗತ್ತನ್ನು ಸೃಷ್ಟಿ ಮಾಡಿದವರು ಯಾರು ||೧೨|| ಈ ಜಗತ್ತನ್ನು ರಕ್ಷಣ ಮಾಡುವವರು ಯಾರು? ಜಗತ್ತನ್ನು ನಾಶ ಮಾಡುವವರು ಯಾರು? ಈ ಜಗತ್ತು ಏತಕ್ಕಾಗಿ ಸೃಷ್ಟಿ ಮಾಡ ಲ್ಪಟ್ಟಿತು. ಯಾರು ಯಾರು ಯಾವು ಯಾವುದನ್ನು ಸೃಷ್ಟಿಸಿದರು ||೧೩||

ಈ ರೀತಿಯಾಗಿ ಪಾರ್ವತಿಯಿಂದ ಕೇಳಲ್ಪಟ್ಟ ಶಿವನು ಸ್ವಲ್ಪ ನಗೆಮುಖವುಳ್ಳವ ನಾಗಿ ಪಾಶುಪತ್ಯಾಗಮದಲ್ಲಿ ಹೇಳಲ್ಪಟ್ಟ ಹಿಂದಿನ ಸಮಾಚಾರವನ್ನು ಹೇಳಿದನು ||೧೪|| ಶಂಕರನು ಹೇಳಿದನು:— ನಾನೇ ಪರಬ್ರಹ್ಮ ನಾನು ಗುಣರಹಿತನೂ, ಆಕಾರವಿಲ್ಲ ದವನು ಊಹೆಗೆ ಮೀರಿದವನು, ಅಳತೆಗೆ ಮೀರಿದವನು, ಅನ್ಯರ ಆಶ್ರಯವನ್ನು ಅಪೇಕ್ಷಿಸದವನು, ಆಕುಲರಹಿತನು ||೧೫|| ದಾರಿದ್ರ್ಯವಿರಹಿತನು, ವೈರವಿಲ್ಲದವನು, ಮಾತಿಗೂ ಮನಕ್ಕೂ ಗೋಚರವಾಗದವನು, ವಿರಾಟ್ ಸ್ವರೂಪನು, ತನ್ನ ಸ್ವರೂಪ ದಲ್ಲಿ ಆನಂದಪಡುವಂಥವನು, ಸ್ವತಂತ್ರನು, ಸ್ವಯಂಸರ್ವಜ್ಞನು ||೧೬||

परंज्योतिःस्वरूपस्य मम भेदो न विद्यते ।
तेनैव संयुतः सोऽहमसृजम् सुरयूथपान् ॥ १७ ॥
अन्यान्मनून्वसूंश्चैव सृष्टवान् गणदेवताः ।
विद्याधराप्सरो यक्षरक्षो गंधर्व किन्नरान् ॥ १८ ॥
पिशाचान् गुह्यकान् सिद्धान् दनुजेंद्रानसीसृजम् ।
मूलरूपेण संसृष्टा मुखतो ब्राम्हणा इमे ॥ १९ ॥
बाहुभ्यामथ राजन्या ऊरुभ्यां वैश्यसत्तमाः ।
पद्भ्यां शूद्राश्च संसृष्टा मनसा मृगलांछनः ॥ २० ॥
अक्ष्णा दिवाकरश्चैव इन्द्राग्नी मुखतश्च मे ।
प्राणाद्वायुः समुत्पन्नो नाभ्यां चैवांतरिक्षकम् ॥ २१ ॥
शीर्षेणैव द्युलोकश्च पादाभ्यां भूमिरेव च ।
श्रोत्राद्दिशः समुत्पन्नास्तथा लोकानसीसृजम् ॥ २२ ॥
सत्वतः सुरमुख्यांश्च ऋषींश्चापि तपोधनान् ।
रजोगुणाच्च राजन्यान् तमसोऽप्यसुरानपि ॥ २३ ॥

---

ಪರಂಜ್ಯೋತಿ ಸ್ವರೂಪನಾದ ನನ್ನಲ್ಲಿ ಭೇದವಿರುವದಿಲ್ಲ ಆ ಪರಂಜ್ಯೋತಿ ಸ್ವರೂಪದಿಂದಲೇ ಕೂಡಿಕೊಂಡಂಥ ನಾನು ದೊಡ್ಡ ದೊಡ್ಡ ದೇವತೆಗಳನ್ನು ಸೃಷ್ಟಿ ಮಾಡಿದೆನು. ॥೧೭॥ ಇತರ ಮನುಗಳನ್ನು ವಸುಗಳನ್ನು ಗಣದೇವತೆಗಳನ್ನು ಹುಟ್ಟಿಸಿದೆನು. ವಿದ್ಯಾಧರ, ಅಪ್ಸರ, ಯಕ್ಷ, ರಾಕ್ಷಸ, ಗಂಧರ್ವ, ಕಿನ್ನರ ॥೧೮॥ ಪಿಶಾಚ, ಗುಹ್ಯಕ, ಸಿದ್ಧ, ದಾನವ ಮುಂತಾದವರನ್ನೆಲ್ಲಾ ಹುಟ್ಟಿಸಿದೆನು ನನ್ನ ಮೂಲ ಸ್ವರೂಪದ ಮುಖದಿಂದ ಬ್ರಾಹ್ಮಣರು ಹುಟ್ಟಿದರು ॥೧೯॥ ಬಾಹುಗಳಿಂದ ಕ್ಷತ್ರಿಯರು ತೊಡೆಗಳಿಂದ ವೈಶ್ಯರು, ಪಾದಗಳಿಂದ ಶೂದ್ರರರು, ಮನಸ್ಸಿನಿಂದ ಚಂದ್ರನು ಇವರೆಲ್ಲ ಹುಟ್ಟಿದರು. ॥೨೦॥ ಕಣ್ಣುಗಳಿಂದ ಸೂರ್ಯನೂ ಮುಖದಿಂದ ಇಂದ್ರ ಮತ್ತು ಅಗ್ನಿಯು, ಪ್ರಾಣದಿಂದ ವಾಯುವು ನಾಭಿಯಿಂದ ಆಕಾಶವು ॥೨೧॥ ಮಸ್ತಕದಿಂದ ಸ್ವರ್ಗಲೋಕವು, ಪಾದಗಳಿಂದ ಭೂಮಿಯು, ಕಿವಿಗಳಿಂದ ದಿಕ್ಕುಗಳು ಹುಟ್ಟಿದವು. ಈ ರೀತಿಯಾಗಿ ಎಲ್ಲ ಲೋಕಗಳನ್ನು ನಾನು ಹುಟ್ಟಿಸಿದೆನು. ॥೨೨॥

समाहारान्मानवांश्च मदंगेभ्यस्तथा परे ।
अष्टादशकुलान्येकशतसंख्याकुलान्यपि ॥ २४ ॥
तत्र संसारिणः केचिन्नित्यमुक्ताश्च केचन ।
मम पञ्चमुखानीति संजानीहि वरानने ॥ २५ ॥
सद्योजातं च प्रथमम् वामदेवं द्वितीयकम् ।
अघोरं च तृतीयम् तु तत्पुरुषं चतुर्थकम् ॥ २६ ॥
ईशानं पंचमम् प्रोक्तं मुखानि मम सर्वशः ।
तान्याननानि गोत्राणि वेदोक्तानि न संशयः ॥ २७ ॥
* वीरो नंदी वृषश्चैव भृंगी स्कंदस्तथैव च ।
मत्स्वरुपाः समुत्पन्नाः पंचगोत्राधिकारिणः ॥ २८ ॥
रेणुको दारुकश्चैव शंखुकर्णश्च धेनुकः ।
विश्वकर्णश्च पञ्चैते पञ्चगोत्रसमुद्भवाः ॥ २९ ॥

---

ಸತ್ವಗುಣದಿಂದ ದೊಡ್ಡ ದೊಡ್ಡ ದೇವತೆಗಳನ್ನು ಮತ್ತು ತಪಸ್ವಿಗಳಾದ ಋಷಿಗಳನ್ನು ರಜೋಗುಣದಿಂದ ಕ್ಷತ್ರಿಯರನ್ನು, ಮತ್ತು ತಮೋಗುಣದಿಂದ ಅಸುರರನ್ನು ಹುಟ್ಟಿಸಿದೆನು. ॥೨೩॥

ಸತ್ವರಜಸ್ತಮೊ ಗುಣಗಳ ಸಮ್ಮಿಶ್ರಣದಿಂದ ಮಾನವರನ್ನು ಹುಟ್ಟಿಸಿದೆನು ಇದರಂತೆ ನನ್ನ ಅವಯವಗಳಿಂದ ಬೇರೆ ಬೇರೆ ಹದಿನೆಂಟು ಜಾತಿಯ ಮತ್ತು ನೂರಾ ಒಂದು ಕುಲದ ಮಾನವರು ಹುಟ್ಟಿರುವರು. ॥೨೪॥ ಇವರಲ್ಲಿ ಕೆಲವರು ಸಂಸಾರಿಗಳು. ಕೆಲವರು ನಿತ್ಯಮುಕ್ತರೂ ಇರುತ್ತಾರೆ. ಎಲೈ ಪಾರ್ವತಿಯೇ ? ನನಗೆ ಐದು ಮುಖಗಳಿರುತ್ತವೆಂದು ತಿಳಿದುಕೊ ॥೨೫॥ ಇವುಗಳಲ್ಲಿ ಮೊದಲನೆಯದು ಸದ್ಯೋಜಾತ, ಎರಡನೆಯದು ವಾಮದೇವ, ಮೂರನೆಯದು ಅಘೋರ, ನಾಲ್ಕನೆಯದು ತತ್ಪುರುಷವು ॥೨೬॥ ಐದನೆಯದು ಈಶಾನ. ಹೀಗೆ ನನ್ನ ಮುಖಗಳು ಎಲ್ಲಾ ಕಡೆಯಲ್ಲಿ ಪ್ರಸಿದ್ಧಗಳಾಗಿವೆ ಈ ಮುಖಗಳು ವೇದದಲ್ಲಿ ಹೇಳಲ್ಪಟ್ಟ ಗೋತ್ರಗಳಿರುತ್ತವೆ. ಇದರಲ್ಲಿ ಸಂದೇಹವಿಲ್ಲ ॥೨೭॥ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದ ಎಂಬ ಐವರು ನನ್ನ ಸ್ವರೂಪರಾದ ಗೋತ್ರಾಧಿಕಾರಿಗಳು ಹುಟ್ಟಿದರು. ॥೨೮॥ ರೇಣುಕ, ದಾರುಕ, ಶಂಖುಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣ ಎಂಬ ಐವರು ಕ್ರಮವಾಗಿ ಐದು ಗೋತ್ರಗಳಲ್ಲಿ (ಮುಖಗಳಲ್ಲಿ) ಹುಟ್ಟಿದರು. ॥೨೯॥ ಈ ಐದು

* वीरो नन्दी तथा भृंगी वृषः स्कन्द स्तथैव च ।

एतेषां प्रतिनामानि युगभेदेन च शृणु।
एकाक्षरो द्व्यक्षरश्च त्र्यक्षरश्चतुरक्षरः ॥ ३० ॥
पंचाक्षरः कृतयुगे पंच नामानि सर्वशः।
एकवक्त्रो द्विवक्त्रश्च त्रिवक्त्रश्चतुराननः ॥ ३१ ॥
पंचवक्त्र इति ख्यातस्त्रेतायां तु महेश्वरि।
द्वापरे रेणुकश्चाद्यो दारुकश्च द्वितीयकः ॥ ३२ ॥
*तृतीयः शंखुकर्णश्च चतुर्थो धेनुकर्णकः।
पञ्चमो विश्वकर्णाख्यः पंच नामानि वै शृणु ॥ ३३ ॥
रेवणो मरुळश्चैकोरामः पंडित एव च।
विश्वाराध्य इति प्रोक्तः कलावपि मम प्रिये ॥ ३४ ॥
वीरशैवमतोद्धारहेतवे पंचकानपि।
मन्मुखेभ्यः समुत्पाद्य तैरेवाकार्षमंजसा ॥ ३५ ॥

---

ಜನರಿಗೆ ಆಯಾಯ ಯುಗದಲ್ಲಿ ಬೇರೆ ಬೇರೆ ಹೆಸರುಗಳು ಉಂಟಾಗಿರುತ್ತವೆ. ಅವನ್ನು ಕೇಳು. ಕೃತಯುಗದಲ್ಲಿ ಈ ಐವರಿಗೆ ಕ್ರಮವಾಗಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ. ॥೩೦॥ ಮತ್ತು ಪಂಚಾಕ್ಷರ ಎಂಬ ಐದು ಹೆಸರುಗಳು ಎಲ್ಲಾ ಕಡೆಯಲ್ಲಿ ಪ್ರಸಿದ್ಧಳಾಗಿರುತ್ತವೆ. ಎಲೈ ಪಾರ್ವತಿಯೇ. ತ್ರೇತಾಯುಗದಲ್ಲಿ ಏಕವಕ್ತ್ರ, ದ್ವಿವಕ್ತ್ರ, ತ್ರಿವಕ್ತ್ರ, ಚತುರ್ವಕ್ತ್ರ, ಮತ್ತು ಪಂಚವಕ್ತ್ರ, ಎಂದು ಪ್ರಸಿದ್ಧರಾಗಿರುವರು. ॥ ೩೧ ॥

ದ್ವಾಪರಯುಗದಲ್ಲಿ ರೇಣುಕನು ಪ್ರಥಮನು ದಾರುಕನು ದ್ವಿತೀಯನು. ಶಂಖು (ಘಂಟಾ)ಕರ್ಣನು ತೃತೀಯನು. ಧೇನುಕರ್ಣನು. ಚತುರ್ಥನು ವಿಶ್ವಕರ್ಣನು ಪಂಚಮ (ಐದನೆಯವ) ನು.॥ ಹೀಗೆ ಐದು ಹೆಸರುಗಳಿರುತ್ತವೆ. ॥ ೩೩ ॥ ನನ್ನ ಪ್ರಿಯಳಾದ ಎಲೈ ಪಾರ್ವತಿಯೇ ಕೇಳು. ಕಲಿಯುಗದಲ್ಲಿ ರೇವಣಾರಾಧ್ಯ. ಮರುಳಾರಾಧ್ಯ ಏಕೋರಾಮಾರಾಧ್ಯ. ಪಂಡಿತಾರಾಧ್ಯ. ವಿಶ್ವಾರಾಧ್ಯ ಎಂಬ ಹೆಸರುಗಳಿಂದ ಪ್ರಸಿದ್ಧ-ರಾಗಿರುವರು. ॥ ೩೪ ॥ ವೀರಶೈವ ಮತದ ಉದ್ಧಾರದ ಸಲುವಾಗಿ ಈ ಐವರನ್ನು ನನ್ನ ಐದು ಮುಖಗಳಿಂದ ಹುಟ್ಟಿಸಿ ಅವರಿಂದಲೇ ಆ ಕಾರ್ಯವನ್ನು ಸುಗಮವಾಗಿ ಮಾಡಿರುವೆನು. ॥ ೩೫ ॥ ಈ ಐವರ ನಾಮ ಗೋತ್ರ, ಸೂತ್ರ, ದಂಡ, ಕಮಂಡಲು

*घण्टाकर्णस्तृतीयः स्याच्चतुर्थो धेनुकर्णकः

तेषां नामानि गोत्राणि सूत्रदंडकमंडलून् ।
मंत्रबीजं च प्रवरं शाखां कंथां च वर्णकम् ॥ ३६॥
प्रत्येकं च प्रवक्ष्यामि प्रतिनामानि च शृणु ।
सद्योजातमुखोत्पन्नो रेणुकः परिकीर्तितः ॥ ३७ ॥
तन्नाम रेवणाराध्यः सूत्रं पडिविडीत्यपि ।
अतिवर्णश्च वर्णः स्यात्प्रवरैकाक्षरो मतः ॥ ३८ ॥
दंडोऽश्वत्थ इति प्रोक्तो हरिद्वर्णः कमंडलुः ।
नकारो मंत्रबीजश्च शाखा रेणुक ईरिता ॥ ३९ ॥
तस्य कंथा हरिद्वर्णा लक्षणं वीरगोत्रिणाम् ।
वामदेवमुखोत्पन्नो दारुकः परिकीर्तितः ॥ ४० ॥
तन्नाम मरुळाराध्यस्तस्य सूत्रं च वृष्टिकम् ।
अतिवर्णश्च वर्णः स्यात्प्रवरो द्व्यक्षरो मतः ॥ ४१ ॥
पालाशस्तस्य दंडोऽभूत्ताम्रस्य तु कमंडलुः ।
मकारो मंत्रबीजश्च शाखा दारुक ईरिता ॥ ४२ ॥

---

ಮಂತ್ರಬೀಜ, ಪ್ರವರ, ಶಾಖಾ, ಕಂಥಾ, ಮತ್ತು ವರ್ಣ. ॥ ೩೬ ॥ ಇವುಗಳನ್ನು ಒಬ್ಬೊಬ್ಬರಿಗೆ ಬೇರೆ ಬೇರೆಯಾಗಿ ಹೇಳುವೆನು ಕೇಳು. ಸದ್ಯೋಜಾತ ಮುಖದಿಂದ ಹುಟ್ಟಿದಾತನು ರೇಣುಕ. ಎಂದು ಪ್ರಸಿದ್ಧನಾಗಿರುವನು. ॥ ೩೭ ॥ ಈತನ ಹೆಸರು ಕಲಿಯುಗದಲ್ಲಿ ರೇವಣಾರಾಧ್ಯ ವೀರಗೋತ್ರ ಸೂತ್ರಪಡಿವಿಡಿ ವರ್ಣ ಅತಿವರ್ಣ ಪ್ರವರ ಏಕಾಕ್ಷರ. ॥ ೩೮ ॥ ದಂಡ ಅಶ್ವಥ (ಅರಳಿ) ತಿಳಿಹಸರು ಬಣ್ಣದ ಕಮಂಡಲು, ಮಂತ್ರಬೀಜ, ನ. ರೇಣುಕಶಾಖಾ ॥ ೩೯ ॥ ಹರಿದ್ವರ್ಣದ ಕಂಥಾ ಇದೆಲ್ಲ ವೀರಗೋತ್ರದವರ ಲಕ್ಷಣವು.

ವಾಮದೇವ ಮುಖದಿಂದ ಹುಟ್ಟಿದಾತನು ದಾರುಕನೆಂದು ಪ್ರಸಿದ್ಧನಾಗಿರುವನು. ॥ ೪೦ ॥ ಈತನ ಹೆಸರು ಕಲಿಯುಗದಲ್ಲಿ ಮರುಳಾರಾಧ್ಯ. ಗೋತ್ರ ನಂದಿ. ಸೂತ್ರ ವೃಷ್ಟಿ, ವರ್ಣ, ಅತಿವರ್ಣ ಪ್ರವರ ದ್ವ್ಯಕ್ಷರ ॥ ೪೧ ॥ ದಂಡ ಪಾಲಾಶ (ಮುತ್ತುಲ) ಕಮಂಡಲು ತಾಮ್ರದ್ದು, ಮಂತ್ರದ ಬೀಜಾಕ್ಷರವು ಮ. ದಾರುಕ-

कलशस्तस्य ताम्रस्य वामदेवमुखं तथा ।
तस्य कन्था तु मंजिष्टा लक्षणं नंदिगोत्रिणाम् ॥ ४३ ॥
अघोराख्यमुखोत्पन्नः शंखुकर्ण इतीरितः । (घण्टाकर्ण)
एकोरामेति तन्नाम तस्य सूत्रन्तु लम्बकम् । ॥ ४४ ॥
प्रवरस्त्र्यक्षरस्तस्य वर्णः स्यादतिवर्णकः ।
न्यग्रोधस्तस्य दडोऽभूल्लोहस्तस्य कमंडलुः ॥ ४५ ॥
शिकारो मंत्रबीजश्च शाखा तु शंखुकर्णका ।
कलशस्तस्य लोहःस्यादघोरमुखमीरितम् ॥ ४६ ॥
तस्य कंथा च कापोती लक्षणं भृंगिगोत्रिणाम् ।
तत्पुरुषाख्यमुखोत्पन्नो धेनुकर्णेति विश्रुतः ॥ ४७ ॥
तन्नाम पंडिताराध्यस्तत्सूत्रं मुक्तगुच्छकम्
अतिवर्णश्च वर्णः स्यात्प्रवरश्चतुरक्षरः ॥ ४८ ॥
दंडस्तस्य तु वेणुः स्यात्कांशस्य च कमंडलुः ।
वाकारो मंत्रबीजश्च शाखा तु धेनुकर्णका ॥ ४९ ॥

---

ಶಾಖಾ ||೪೨|| ತಾಮ್ರದ ಕಲಶ. ವಾಮದೇವ ಮುಖ. ಕಂಥಾ ಮಂಜಿಷ್ಠ ಬಣ್ಣದ್ದು (ತಾಮ್ರ), ಇದೆಲ್ಲ ನಂದಿಗೋತ್ರದವರ ಲಕ್ಷಣವು ||೪೩||

ಅಘೋರಮುಖದಿಂದ ಹುಟ್ಟಿದಾತನು. ಶಂಖು (ಘಂಟಾ) ಕರ್ಣ ಎಂದು ಪ್ರಸಿದ್ಧನಾಗಿರುವನು. ಈತನ ಹೆಸರು ಕಲಿಯುಗದಲ್ಲಿ ಏಕೋರಾಮಾರಾಧ್ಯನೆಂದು, ಇದೆ. ಈತನ ಗೋತ್ರ ಭೃಂಗಿ ಸೂತ್ರ ಲಂಬನ ||೪೪|| ಪ್ರವರ ತ್ರ್ಯಕ್ಷರ. ವರ್ಣ ಅತಿವರ್ಣ. ಡಂಡ. ಆಲದ್ದು ಕಮಂಡಲು ಲೋಹದ್ದು ||೪೫|| ಶಿಕಾರವು ಮಂತ್ರದ ಬೀಜಾಕ್ಷರ ಶಂಖುಕರ್ಣ ಶಾಖಾ, ಲೋಹದ ಕಲಶ, ಅಘೋರಮುಖ ||೪೬|| ಕಂಥಾ ಪಾರಿವಾಳದ (ಬೂದ) ಬಣ್ಣದ್ದು ಇದೆಲ್ಲ ಭೃಂಗಿಗೋತ್ರದವರ ಲಕ್ಷಣವು, ತತ್ಪುರುಷಮುಖದಿಂದ ಹುಟ್ಟಿ ದಾತನು ಧೇನು ಕರ್ಣನೆಂದು ಪ್ರಸಿದ್ಧನಾಗಿರುವನು ||೪೭|| ಆತನ ಹೆಸರು ಕಲಿಯುಗದಲ್ಲಿ ಪಂಡಿತಾರಾಧ್ಯ ಗೋತ್ರ ವೃಷಭ ಆತನ ಸೂತ್ರ ಮುಕ್ತಾಗುಚ್ಛ ವರ್ಣವು ಅತಿವರ್ಣ ಪ್ರವರ ಚತುರಕ್ಷರ ||೪೮||

कलशस्तस्य कांशस्य मुखं तत्पुरुषं तथा ।
तस्य श्वेतमयी कंथा चिन्हं वृषभगोत्रिणाम् । ॥ ५० ॥
ईशानाख्यमुखोत्पन्नो विश्वकर्णेति विश्रुतः ।
विश्वाराध्येति तन्नाम तत्सूत्रं पंचवर्णकम् ॥ ५१ ॥
पंचाक्षरश्च प्रवरो वर्णः स्यादतिवर्णकः ।
दंडो बैल्व इति प्रोक्तः सौवर्णश्च कमंडलुः ॥ ५२ ॥
यकारो मंत्रबीजश्च शाखा तु विश्वकर्णका ।
कलशस्तस्य सौवर्ण ईशानं मुखमीरितम् ॥ ५३ ॥
तस्य कंथा च सौवर्णा लक्षणं स्कंदगोत्रिणाम् ।
त एतेऽप्युपसूत्राणां गुरवः परिकीर्तिताः ॥ ५४ ॥
चरस्थापनपट्टाभिषेकेषु शुभकर्मसु ।
तथैवानुग्रहे चैव निग्रहेऽपि मम प्रिये ॥ ५५ ॥

---

ದಂಡ ಬಿದಿರಿನದು ಕಮಂಡಲು ಕಂಚಿನದು ಮಂತ್ರದ ಬೀಜಾಕ್ಷರವಾ. ಧೇನು ಕರ್ಣಶಾಖಾ ॥ ೪೯ ॥

ಕಂಚಿನಕಲಶ. ತತ್ಪುರುಷಮುಖ. ಕಂಥಾ ಬಿಳೇ ಬಣ್ಣದ್ದು ಇದೆಲ್ಲ ವೃಷಭ ಗೋತ್ರದವರಲಕ್ಷಣವು ॥ ೫೦ ॥

ಈಶಾನ ಮುಖದಿಂದ ಹುಟ್ಟಿದಾತನು ವಿಶ್ವಕರ್ಣನೆಂದು ಪ್ರಸಿದ್ಧನಾಗಿರುವನು. ಈತನ ಹೆಸರು ಕಲಿಯುಗದಲ್ಲಿ ವಿಶ್ವಾರಾಧ್ಯ. ಸೂತ್ರ ಪಂಚವರ್ಣ. ಕ. ಪಂಚವರ್ಣಿಗೆ ॥ ೫೧ ॥ ಪ್ರವರ ಪಂಚಾಕ್ಷರ, ವರ್ಣ ಅತಿವರ್ಣ. ದಂಡ ಬಿಲ್ವದ್ದು ಕಮಂಡಲ ಬಂಗಾರದ್ದು ॥ ೫೨ ॥ ಮಂತ್ರದ ಬೀಜಾಕ್ಷರವು. ಯ. ವಿಶ್ವಕರ್ಣಶಾಖಾ ಕಲಶ ಬಂಗಾರದ್ದು ಈಶಾನ ಮುಖವು ॥ ೫೩ ॥ ಕಂಥಾ ಬಂಗಾರ ಬಣ್ಣದ್ದು ಇವೆಲ್ಲಾ ಸ್ಕಂದ ಗೋತ್ರದವರ ಲಕ್ಷಣವು. ಮೇಲೆ ಹೇಳಿದ ಇವರು ಐವರು ಉಪಸೂತ್ರದವರಿಗೆ ಗುರುಗಳೆಂದೆ ಪರಿಗಣಿಸಲ್ಪಟ್ಟಿರುವರು. ॥ ೫೪ ॥

ಚರಾಧಿಕಾರದಲ್ಲಿ ಪಟ್ಟಾಭಿಷೇಕ ಕಾರ್ಯದಲ್ಲಿ ಮತ್ತು ಇತರ ಶುಭ ಕಾರ್ಯ ದಲ್ಲಿ ಅನುಗ್ರಹ ಮಾಡುವಲ್ಲಿ ಅಪರಾಧಿಗಳಿಗೆ ಶಿಕ್ಷಾ ಕೊಡುವದರಲ್ಲಿ ॥ ೫೫ ॥ ಆಹ್ವಾನ

आव्हाने च विसर्गे च मम पंचमुखोद्भवाः ।
रेणुकाद्याश्च गुरवः स्वस्वगोत्रानुसारतः ॥ ५६ ॥
यस्मान्मन्मुखसंजाताः स्वतंत्राश्चेति विश्रुताः ।
तेभ्यो ये वै समुत्पन्ना द्वादशैवोपसूत्रकाः ॥ ५७ ॥
अमुख्या अस्वतंत्रा वै महाचार्यानुगाश्च ते ।
सर्वेषां गोत्रसूत्राणि भिन्नानि हि वरानने ॥ ५८ ॥
एकैकस्य च गोत्रस्य शाखा सूत्रादिकं पृथक् ।
यस्य गोत्रस्य या शाखा यत्सूत्रं यः कमंडलुः ॥ ५९ ॥
या कंथा यश्च दंडश्च गुरुस्तैश्च समन्वितः ।
एवमेव हि पंचानां गोत्राणां गुरवः स्मृताः ॥ ६० ॥
स च पीठाधिकारी स्यादाराध्यश्च स एव हि ।
आचार्यश्च स एवायं सिंहासनपतिश्च सः ॥ ६१ ॥

---

ವಿಸರ್ಜನಗಳಲ್ಲಿ ನನ್ನ ಐದು ಮುಖಗಳಿಂದ ಹುಟ್ಟಿದಂಥ ರೇಣುಕಾದಿಗಳು ತಮ್ಮ ತಮ್ಮ ಗೋತ್ರಕ್ಕನುಸರಿಸಿ ಗುರುಗಳು ಆಗುತ್ತಾರೆ. ॥ ೫೬ ॥ ನನ್ನ ಮುಖದಿಂದ ಹುಟ್ಟಿದ ಐದುಜನ ಮಹಾಚಾರ್ಯರು ಸ್ವತಂತ್ರರಿರುವರು. ಈ ಮಹಾಚಾರ್ಯರಿಂದ ಉತ್ಪನ್ನರಾದ ಪ್ರತಿಯೊಬ್ಬ ಆಚಾರ್ಯರಿಗೆ ಇರುವ ಹನ್ನೆರಡು ಉಪಸೂತ್ರಗಳವರು. ॥ ೫೭ ॥ ಅಮುಖ್ಯರೂ ಅಸ್ವತಂತ್ರರೂ ಇದ್ದು ಮಹಾಚಾರ್ಯರ ಆಜ್ಞಾನುಸಾರ ನಡೆದುಕೊಳ್ಳುವವರಾಗುತ್ತಾರೆ. ಎಲೈ ಪಾರ್ವತಿಯೇ ಈ ಪಂಚಾಚಾರ್ಯರ ಗೋತ್ರಸೂತ್ರಾದಿಗಳು ಭಿನ್ನ ಭಿನ್ನ ವಾಗಿರುತ್ತವೆ. ॥ ೫೮ ॥ ಒಂದೊಂದು ಗೋತ್ರಕ್ಕೆ ಶಾಖಾ ಸೂತ್ರ ಪ್ರವರಾದಿಗಳು ಬೇರೆ ಬೇರೆ ಇರುತ್ತವೆ, ಯಾವಗೋತ್ರಕ್ಕೆ ಯಾವ ಶಾಖಾ. ಯಾವ ಸೂತ್ರ. ಯಾವ ಕಮಂಡಲು ॥ ೫೯ ॥ ಯಾವ ಕಂಥಾ, ಯಾವ ದಂಡ, ಇರುತ್ತವೊ ಅವೆಲ್ಲವುಗಳಿಂದ ಕೂಡಿಕೊಂಡಾತನೇ ಗುರುವು ಇದರಂತೆ ಐದು ಗೋತ್ರದವರಿಗೆ ಅಂಥವರೇ ಗುರುಗಳಾಗುತ್ತಾರೆ. ॥ ೬೦ ॥

ಇಂಥ ಮುಖ್ಯ ಸೂತ್ರದವರೆ ಗುರುಪೀಠಾಧಿಕಾರಿಗಳೂ ಆರಾಧ್ಯರೂ ಮಹಾಚಾರ್ಯರೂ. ಸಿಂಹಾಸನಾಧಿಪತಿಗಳೂ ಆಗುತ್ತಾರೆ. ॥ ೬೧ ॥

एतानि पंच नामानि पंचानां सूत्रिणां पृथक् ।
महासूत्रस्य चैकस्य चोपसूत्राणि द्वादश ॥ ६२ ॥
तेषामप्युपसूत्राणां पृथङ् नामानि संति हि ।
सिंहासनपतित्वं च नास्ति तेषां कदाचन ॥ ६३ ॥

इति श्रीमद्वीरशैव सदाचार संग्रहे सुप्रभेदागमोक्त वीर-शैवप्रकाशिकोक्तानुसारेण आचार्योत्पत्तिकथनं नाम प्रथमं प्रकरणं-समाप्तम् । १ ।

---

ಈ ರೀತಿ ಐದು ಸೂತ್ರದವರ ಐದು ಹೆಸರುಗಳು ಬೇರೆ ಬೇರೆಯಾಗಿರುತ್ತವೆ. ಒಂದೊಂದು ಮುಖ್ಯ ಸೂತ್ರಕ್ಕೆ ಹನ್ನೆರಡು ಉಪಸೂತ್ರಗಳಿರುತ್ತವೆ. ॥ ೬೨ ॥ ಆ ಉಪಸೂತ್ರಗಳಿಗೂ ಸಹ ಬೇರೆ ಬೇರೆ ಹೆಸರುಗಳಿರುತ್ತವೆ. ಈ ಉಪಸೂತ್ರದವರಿಗೆ ಸಿಂಹಾಸನಾಧಿಪತಿತ್ವವು ಯಾವಾಗಲೂ ಇರುವದಿಲ್ಲ. ॥ ೬೩ ॥

ಇಲ್ಲಿಗೆ ಶ್ರೀಮದ್ವೀರಶೈವ ಸದಾಚಾರಸಂಗ್ರಹದಲ್ಲಿ ಸುಪ್ರಭೇದಾಗಮೋಕ್ತ ವೀರಶೈವ ಪ್ರಕಾಶಿಕಾನುಸಾರವಾಗಿ ಆಚಾರ್ಯೋತ್ಪತ್ತಿಕಥನವೆಂಬ ಪ್ರಥಮಾಧಿಕರ-ಣದ, ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

# ॥ अथ द्वितीयं प्रकरणम् ॥

सुप्रभेदागमे– वीरशैवप्रकाशिकायां,

उपसूत्राणि लिख्यंते महासूत्रोद्भवानि च ।
रेणुकस्य विलासेन पड्विडेर्द्वादशैव हि ॥ १ ॥

पुराणं पच्छकंथा च षडंगी सुरगी तथा ।
महिषी दिगंबरश्चैव वेणी भित्तिस्तथैव च ॥ २ ॥

मारटश्चैव नाटिश्च शौरी सुत्तूरसंज्ञकम् ।
पड्विडेश्चैव संजातान्युपसूत्राणि द्वादश ॥ ३ ॥

दारुकस्य विलासेन वृष्टिसूत्राच्च द्वादश ।
कार्बोन्नः स्वर्णकन्था च सिंगी मसणिरेव च ॥ ४ ॥

कुठारश्च तथा भैत्री कठारश्चामरी तथा ।
कवाटः कुक्षकंथा च ज्वलत्कंथा तथैव च ॥ ५ ॥

शृंगिश्चैते द्वादशैव वृष्टिसूत्रात्समुद्भवाः ।

---

## ಅಥ ದ್ವಿತೀಯ ಪ್ರಕರಣ.

ಸುಪ್ರಭೇದಾಗಮೋಕ್ತಗಳಾದ ವೀರಶೈವ ಪ್ರಕಾಶಿಕೆಯಲ್ಲಿ ಹೇಳಿದ ಐದು ಮಹಾ ಸೂತ್ರಗಳಿಂದ ಉತ್ಪನ್ನಗಳಾದ ಉಪಸೂತ್ರಗಳು ಈಗ ಹೇಳಲ್ಪಡುತ್ತವೆ. ಶ್ರೀ ರೇಣುಕರ ಲೀಲೆಯಿಂದ ಪಡ್ವಿಡಿ ಎಂಬ ಮಹಾಸೂತ್ರದಿಂದ ಪುರಾಣ. ಪಚ್ಛಕಂಥಾ, ಷಡಂಗೀ ಸುರಗೀ, ಮಹಿಷೀ, ದಿಗಂಬರ, ವೇಣೀ, ಭಿತ್ತಿ ॥ ೨ ॥ ಮಾರಟ, ನಾಟಿ, ಶೌರಿ, ಸುತ್ತೂರ, ಎಂಬ ಹನ್ನೆರಡು ಉಪಸೂತ್ರಗಳು ಹುಟ್ಟಿರುವವು. ॥೩॥ ಶ್ರೀ ದಾರುಕರ ಲೀಲೆಯಿಂದ ವೃಷ್ಟಿ ಎಂಬ ಮಹಾಸೂತ್ರದಿಂದ ಹನ್ನೆರಡು ಉಪಸೂತ್ರಗಳು ಕಾರ್ಬೋನ್ನ, ಸ್ವರ್ಣಕಂಥಾ. ಸಿಂಗಿ, ಮಸಣಿ ॥ ೪ ॥ ಕುಠಾರ, ಭೈತ್ರಿ, ಕಠಾರ, ಚಾಮರಿ, ಕವಾಟ, ಕುಕ್ಷಕಂಥಾ, ಜ್ವಲತ್‌ಕಂಥಾ ॥ ೫ ॥ ಶೃಂಗಿ ಎಂಬವು ಹುಟ್ಟಿರುವವು.

शंखुकर्णविलासेन लंबकात् द्वादशैव हि । ॥ ६ ॥
त्रिपुटी रज्जुकंथा च भस्मी कार्पास एव च ।
रौप्यं कौपी चंद्रगुडो मृत्कंथाप्यलक एव च ॥ ७ ॥
वसनो मुंडि खड्गी च लंबसूत्रात्समुद्भवाः
धेनुकर्ण विलासेन मुक्तगुच्छाच्च द्वादश ॥ ८ ॥
गोणिकंथा तथा दंती जठरस्त्रिगुणिस्तथा ।
केशकंथा ललाटश्च व्याघ्रकंथा च लोचनः ॥ ९ ॥
भगिनी जालकंथा च नटनो बोदडि स्तथा ।
मुक्तगुच्छात्समुत्पन्नाश्चैते द्वादश विश्रुताः ॥ १० ॥
विश्वकर्ण विलासेन पंचवर्णाच्च द्वादश ।
कंबालो वृषभश्चैव गोचरो रज्जुकंथकः ॥ ११ ॥

---

ಶ್ರೀ ಶಂಖು (ಘಂಟಾ)ಕರ್ಣರ ಲೀಲೆಯಿಂದ ಲಂಬಕ ಎಂಬ ಮಹಾಸೂತ್ರದಿಂದ ಹನ್ನೆರಡು ॥ ೬ ॥ ತ್ರಿಪುಟೀ, ರಜ್ಜುಕಂಥಾ, ಭಸ್ಮೀ. ಕಾರ್ಪಾಸ, ರೌಪ್ಯ ಕೌಪೀ, ಚಂದ್ರಗುಂಡ, ಮೃತ್‌ಕಂಥಾ, ಅಲಕ, ॥ ೭ ॥ ವಸನ, ಮುಂಡಿ, ಖಡ್ಗಿ, ಎಂಬ ಉಪಸೂತ್ರಗಳು ಹುಟ್ಟಿರುತ್ತವೆ.* ಶ್ರೀ ಧೇನುಕರ್ಣರ ಲೀಲೆಯಿಂದ ಮುಕ್ತಾಗುಚ್ಛ ಮಹಾಸೂತ್ರದಿಂದ ಹನ್ನೆರಡು ಉಪಸೂತ್ರಗಳು ॥ ೮ ॥ ಗೋಣಿಕಂಥಾ, ದಂತೀ, ಜಠರ, ತ್ರಿಗುಣ, ಕೇಶಕಂಥಾ, ಲಲಾಟ, ವ್ಯಾಘ್ರಕಂಥಾ ಲೋಚನ ॥ ೯ ॥ ಭಗಿನೀ, ಜಾಲಕಂಥಾ, ನಟನ, ಬೋದಡಿ ಎಂಬ ಹನ್ನೆರಡು ಹುಟ್ಟಿದವು. ॥ ೧೦ ॥ ಶ್ರೀ ವಿಶ್ವಕರ್ಣರಲೀಲೆಯಿಂದ ಪಂಚವರ್ಣ ಎಂಬ ಮಹಾಸೂತ್ರದಿಂದ ಹನ್ನೆರಡು ಉಪಸೂತ್ರಗಳು, ಕಂಬಾಳಿ, ವೃಷಭ, ಗೋಚರ, ರಜ್ಜುಕಂಥಾ. ॥೧೧॥

ಟಿಪ್ಪಣಿ:— *ಲಂಬನ ಮಹಾಸೂತ್ರದಿಂದ ಹುಟ್ಟಿದ ಹನ್ನೆರಡು ಉಪಸೂತ್ರಗಳಲ್ಲಿ ಕಾರ್ಪಾಸ, ಕೌಪೀ, ಅಲಕ, ವಸನ ಎಂಬ ನಾಲ್ಕಕ್ಕೆ ಬೇರೆ ಗ್ರಂಥದಲ್ಲಿ, ಕ್ರಮವಾಗಿ ಶಿಖರಿ, ಕಾಷ್ಟಕ, ರಾಮಗಿರಿ, ಪವನ ಎಂಬ ಹೆಸರಿನ ಉಪಸೂತ್ರಗಳಿರುತ್ತವೆ. ಪಂಚವರ್ಣ ಮಹಾಸೂತ್ರದಿಂದ ಹುಟ್ಟಿದ ಉಪಸೂತ್ರಗಳಲ್ಲಿ– ರಜ್ಜುಕಂಥಾ, ವೀಟ ಇವೆರಡರ ಬದಲು ಜರತ್ಕಂಥಾ, ಗುಹಾಗ್ರ, ಎಂಬ ಹೆಸರಿನ ಉಪಸೂತ್ರಗಳಿರುತ್ತವೆ.

पंचमुखश्च वीटिर्दशमुखो गगनं तथा ।
मुसडी लगुडी चैव शिथिली पशुपतिस्तथा ॥ १२ ॥

पंचवर्णान्महासूत्रादुद्भूताः सर्वमंगले ।
जाता अपि महात्मभ्यः सर्वेऽप्येतेऽस्वतंत्रकाः ॥ १३ ॥

पार्वत्युवाच

महाचार्यसमुद्भूताः कथं तेऽप्यस्वतंत्रकाः ।
तत्र किं कारणं देव तत्सर्वं वद विस्तरात् ॥ १४ ॥

ईश्वर उवाच

मन्मुखोत्पत्तिराहित्यादस्वतंत्रा हि ये प्रिये ।
ते सर्वे वीरशैवानां सामान्यानां पुरोहिताः ॥ १५ ॥

सामान्यवीरशैवानां दीक्षायां लिंगधारणे ।
उपदेशे विवाहे च गौणतो गुरवो मताः ॥ १६ ॥

---

ಪಂಚಮುಖ, ವೀಟಿ, ದಶಮುಖ, ಗಗನ, ಮುಸಡೀ, ಲಗುಡೀ, ಶಿಥಿಲೀ, ಪಶುಪತಿ ॥ ೧೨ ॥ ಎಂಬಿವು ಹುಟ್ಟಿರುತ್ತವೆ. ಎಲೈ ಪಾರ್ವತಿಯೇ, ಈ ಉಪ ಸೂತ್ರಗಳು ಮಹಾಚಾರ್ಯರಿಂದ ಉದ್ಭವವಾಗಿದ್ದರೂ ಉಪಸೂತ್ರದವರಿಗೆ ಸ್ವಾತಂತ್ರ್ಯವಿರುವದಿಲ್ಲ. ॥ ೧೩ ॥ ಪಾರ್ವತಿಯು ಕೇಳುತ್ತಾಳೆ, ಎಲೈ ಶಂಕರನೇ ಈ ಉಪಸೂತ್ರದವರೂ ಸಹ ಮಹಾಚಾರ್ಯರಿಂದಲೇ ಉದ್ಭವರಾಗಿದ್ದರೂ ಅಸ್ವತಂತ್ರರು ಹೇಗೆ, ಕಾರಣವೇನು ಇದನ್ನು ವಿಸ್ತಾರವಾಗಿ ನನಗೆ ತಿಳಿಸು. ॥ ೧೪ ॥

ಈಶ್ವರನು ಹೇಳಿದನು.

ಎಲೈ ಪ್ರಿಯಳೆ ಉಪಸೂತ್ರದ ಆಚಾರ್ಯರು ನನ್ನ ಮುಖದಿಂದ ಹುಟ್ಟಿಲ್ಲ-ವಾದುದರಿಂದ ಅಸ್ವತಂತ್ರರು, ಇವರೆಲ್ಲರೂ, ಸಾಮಾನ್ಯ ವೀರಶೈವರ ಪುರೋಹಿತರು ಇರುತ್ತಾರೆ. ॥ ೧೫ ॥ ಉಪಸೂತ್ರದ ಆಚಾರ್ಯರು ಮಹಾಚಾರ್ಯರ ದೃಷ್ಟಿಯಿಂದ ಗೌಣಗುರುಗಳು ಆಗುತ್ತಾರೆ. ಆದುದರಿಂದ ಇವರು ಸಾಮಾನ್ಯವೀರಶೈವರಿಗೆ ಲಿಂಗಧಾರಣ ಮಾಡುವದು, ದೀಕ್ಷಾ ಮಾಡುವದು, ಉಪದೇಶ ಕೊಡುವದು, ವಿವಾಹ ಮುಂತಾದ ಕಾರ್ಯಗಳನ್ನು ನಡೆಸುವದು, ಮುಂತಾದ ಕಾರ್ಯಗಳಲ್ಲಿ ಸಾಮಾನ್ಯ ವೀರಶೈವರ ಗುರುಗಳಾಗುತ್ತಾರೆ. ॥ ೧೬ ॥

पार्वत्युवाच

कथं कुर्वन्त्यस्वतंत्रा वीरशैवालयेषु च ।
दीक्षोपदेशनं चैव लिंगधारणपूर्वकं ।
एतद्विस्तार्य भगवन् वक्तुमर्हसि सांप्रतम् ॥ १७ ॥

ईश्वर उवाच

अस्वतंत्राश्च ते सर्वे महासूत्रावलंबिनाम् ।
उपदेशानंतरं वै द्वादशाश्चोपसूत्रकाः ॥ १८ ॥
तदनुग्राहतस्तेषां गोत्रप्रवरवर्णकैः ।
करीरमंत्रदंडाद्यैः कमंडल्वादिभिर्युताः ॥ १९ ॥
वीरशैवालयेष्वेतेऽप्यस्वतंत्रप्रवर्तकाः ।
यतः कर्माणि कुर्वन्ति गौणतो गुरवः स्मृताः ॥ २० ॥

इति श्रीमद्वीरशैवसदाचारसंग्रहे सुप्रभेदागमोक्तानुसारेण उपसूत्र तदस्वतंत्रत्व कथनं नाम द्वितीयं प्रकरणम् समाप्तम् ॥

---

ಪಾರ್ವತಿಯ ಪ್ರಶ್ನೆ

ಎಲೈ ಭಗವಂತನೇ ಅಸ್ವತಂತ್ರರಾದ ಉಪಸೂತ್ರದ ಆಚಾರ್ಯರು ಸಾಮಾನ್ಯ ವೀರಶೈವರ ಮನೆಗಳಲ್ಲಿ ಲಿಂಗಧಾರಣ, ದೀಕ್ಷಾದಿ ಕಾರ್ಯಗಳನ್ನು ಹೇಗೆ ಮಾಡುವರು. ಅದನ್ನು ವಿಸ್ತಾರವಾಗಿ ನನಗೆ ಹೇಳಬೇಕು. ॥೧೭॥

ಈಶ್ವರನು ಹೇಳಿದನು

ಅಸ್ವತಂತ್ರರಾದ ಈ ಹನ್ನೆರಡು ಹನ್ನೆರಡು ಉಪಸೂತ್ರದವರು ಮುಖ್ಯಸೂತ್ರದ ಮಹಾಚಾರ್ಯರಿಂದ ತಾವು ಮೊದಲು ಉಪದೇಶವನ್ನು ಪಡೆದುಕೊಂಡು ॥೧೮॥ ಅವರ ಕೃಪೆಯಿಂದ ಅವರ ಗೋತ್ರ, ಪ್ರವರ, ವರ್ಣ, ಕಲಶ, ಮಂತ್ರ, ದಂಡ, ಕಮಂಡಲು ಮುಂತಾದ ಚಿನ್ಹಗಳನ್ನು ಧರಿಸಿದವರಾಗಿ ॥೧೯॥ ವೀರಶೈವರ ಮನೆಗಳಲ್ಲಿ ಅಸ್ವತಂತ್ರರಾದ ಉಪಸೂತ್ರದ ಆಚಾರ್ಯರು ಮೇಲೆ ಹೇಳಿದ ಎಲ್ಲಾ ವಿಧವಾದ ಕಾರ್ಯಗಳನ್ನು ಮಾಡುತ್ತಾರೆ. ಆದುದರಿಂದ ಈ ಉಪಸೂತ್ರದ ಆಚಾರ್ಯರು ಗೌಣ ಗುರುಗಳಾಗುತ್ತಾರೆ. ॥೨೦॥ ಇಲ್ಲಿಗೆ ಶ್ರೀ ಮದ್ವೀರಶೈವ ಸದಾಚಾರ ಸಂಗ್ರಹದಲ್ಲಿ ಸುಪ್ರಭೇದಾಗಮದಲ್ಲಿ ಹೇಳಿದ ಪ್ರಕಾರ ಉಪಸೂತ್ರಗಳ ಮತ್ತು ಅವುಗಳ ಅಸ್ವತಂತ್ರತ್ವದ ಹೇಳುವಿಕೆ ಎಂಬ ಎರಡನೆಯ ಅಧಿಕರಣದ, ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

## ॥ अथ तृतीयं प्रकरणम् ॥

( सुप्रभेदागमे )

पार्वत्युवाच

गुरवो वहवस्संति गृहस्थानां गृहे गृहे ।
प्रधानाः केऽप्रधानाः के विस्तराद्वद मे प्रभो ॥ १ ॥

ईश्वर उवाच

लोके गुरुत्वं द्विविधं प्राधान्याद्गौणतोऽपि वा ।
पाधान्येन गुरुत्वं तु मन्मुखोद्भूतपंचके ॥ २ ॥

तेऽपि स्वदण्डकलशकमण्डलुसबीजकैः ।
परानुपेक्ष्य कुर्वन्ति लिंगधारणपूर्वकम् ॥ ३ ॥

उपदेशे विवाहे च शिक्षायां रक्षणेऽपि च ।
त एव मुख्यगुरवः प्रधानास्ते प्रकीर्तिताः ॥ ४ ॥

---

## ಅಥ ತೃತೀಯ ಪ್ರಕರಣಂ

ಸುಪ್ರಭೇದಾಗಮದಲ್ಲಿ ಪಾರ್ವತಿಯ ಪ್ರಶ್ನೆ. ಎಲೈ ಪ್ರಭುವೆ ಗೃಹಸ್ಥರಾದ ಮಾಹೇಶ್ವರರ ಮನೆಮನೆಗಳಲ್ಲಿ ಗುರುಗಳು ಬಹಳ ಜನರು ಇರುತ್ತಾರೆ. ಇವರಲ್ಲಿ ಮುಖ್ಯ ಗುರುಗಳಾರು? ಗೌಣ ಗುರುಗಳು ಯಾರು? ಇದನ್ನು ನನಗೆ ವಿಸ್ತಾರವಾಗಿ ತಿಳಿಸು. ||೧|| ಶಿವನು ಹೇಳಿದನು– ಜಗತ್ತಿನಲ್ಲಿ ಗುರುತ್ವವು ಎರಡು ವಿಧವಾಗಿರುತ್ತದೆ. ಒಂದು ಮುಖ್ಯ ಗುರುತ್ವ. ಮತ್ತೊಂದು ಗೌಣ ಗುರುತ್ವ. ಮುಖ್ಯ ಗುರುತ್ವವು ನನ್ನ ಮುಖಗಳಿಂದ ಹುಟ್ಟಿದ ರೇಣುಕಾದಿ ಐವರಲ್ಲಿ ಮಾತ್ರ ಇರುತ್ತದೆ. ||೨|| ಅವರು ತಮ್ಮ ದಂಡ, ಕಲಶ, ಕಮಂಡಲು, ಮಂತ್ರಬೀಜ ಇತ್ಯಾದಿಗಳಿಂದ ಯುಕ್ತರಾಗಿ ಅನ್ಯರನ್ನು ಅಪೇಕ್ಷಿಸದೇ ಸ್ವತಂತ್ರವಾಗಿ ಲಿಂಗಧಾರಣ ಮೊದಲಾದ ಧರ್ಮ ಕಾರ್ಯಗಳನ್ನು ಮಾಡುತ್ತಾರೆ. ||೩|| ಉಪದೇಶ ಕೊಡುವದು. ವಿವಾಹ ಮುಂತಾದ ಶುಭ ಕಾರ್ಯಗಳನ್ನು ನಡೆಸುವದು, ತಪ್ಪು ಮಾಡಿದ ಭಕ್ತರನ್ನು ಶಿಕ್ಷಿಸುವದು, ರಕ್ಷಣೆ ಮಾಡುವದು ಮುಂತಾದ ಕಾರ್ಯಗಳಲ್ಲಿ ಮುಖ್ಯ ಸೂತ್ರೋತ್ಪನ್ನರಾದ ಆಚಾರ್ಯರೇ ಪ್ರಧಾನ ಗುರುಗಳೆಂದು ಹೇಳಲ್ಪಡುವರು. ||೪|| ಮಹಾ ಸೂತ್ರಜನ್ಯಗಳಾದ ಉಪ

तज्जन्यसूत्रजातास्तु स्वसूत्राधिपतेस्तथा ।
कलशान्मंत्रदंडांश्च गृहीत्वा दंडखंडनं ॥ ५ ॥

निग्रहानुग्रहांश्चैव आव्हानं च विसर्जनं ।
लिंगधारणदीक्षे तु विवाहं चोपदेशनं ॥ ६ ॥

परानपेक्ष्य कुर्वन्ति तत्तस्माद्गौणतश्च ते ।
गुरुशब्देन वाच्या हि वर्तन्ते शैवसद्मसु ॥ ७ ॥

इति द्वैविध्यमुदितं गुरूणां विहितं तथा ।
तल्लीलया समुद्भूतेषूपसूत्रेषु चैव हि ॥ ८ ॥

इति श्रीमद्वीरशैवसदाचारसंग्रहे सुप्रभेदागमोक्तानुसारेण गुरुद्वैविध्यकथनं नाम तृतीयं प्रकरणं समाप्तम् ।

---

ಸೂತ್ರಗಳವರು ತಮ್ಮ ತಮ್ಮ ಮುಖ್ಯ ಸೂತ್ರದವರ ಕಲಶ, ದಂಡ, ಕಮಂಡಲು, ಮಂತ್ರಬೀಜ ಮುಂತಾದವುಗಳನ್ನೂ ಗ್ರಹಿಸಿ ದಂಡ, ಖಂಡಸವನ್ನು ॥೫॥ ಶಿಕ್ಷಿಸುವದು, ಅನುಗ್ರಹಿಸುವದು, ಆಹ್ವಾನ, ವಿಸರ್ಜನ, ಲಿಂಗಧಾರಣ, ದೀಕ್ಷಾ, ವಿವಾಹ, ಉಪದೇಶ ಕೊಡುವದು. ॥೬॥ ಮುಂತಾದ ಕಾರ್ಯಗಳನ್ನು ಮುಖ್ಯ ಸೂತ್ರದವರ ಅನುಮತಿ ಯನ್ನು ಪಡೆದು ಮಾಡುತ್ತಾರೆ. ಆದುದರಿಂದ ಗೌಣ ಗುರುಗಳೆನಿಸಿಕೊಳ್ಳುವರು. ಅಂತು ಮುಖ್ಯಸೂತ್ರದವರಾಗಲಿ, ಉಪಸೂತ್ರದವರಾಗಲಿ ಸಾಮಾನ್ಯವೀರಶೈವರ ಮನೆಗಳಲ್ಲಿ ನಡೆಯುವ ಯಾವತ್ತೂ ಧರ್ಮಕಾರ್ಯಗಳಲ್ಲಿ ಇಬ್ಬರೂ ಗುರುಗಳಾಗಿ ಕೆಲಸ ಮಾಡುತ್ತಾರೆ.

ಈ ಪ್ರಕಾರ ಮುಖ್ಯ ಸೂತ್ರದವರಲ್ಲಿ ಗುರುತ್ವವು ಪ್ರಧಾನವಾಗಿಯೂ ಮತ್ತು ಉಪಸೂತ್ರದವರಲ್ಲಿ ಗೌಣವಾಗಿಯೂ ಇರುತ್ತದೆ. ಆದಕಾರಣ ಗುರುತ್ವವು ಎರಡು ವಿಧವಾಗಿರುತ್ತದೆ.

ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ಎರಡು ವಿಧವಾದ ಗುರುತ್ವವನ್ನು ಹೇಳುವಂಥಾ ಮೂರನೆಯ ಪ್ರಕರಣದ, ಪಂಡಿತ ಬಸವರಾಜ ಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

# ॥ अथ चतुर्थं प्रकरणम् ॥

( सुप्रभेदागमे )

पार्वत्युवाच

५ धसंख्या महाचार्याः कर्तारः पंचनामकाः ।
इति त्वयैव कथितं पुरा मे श्रुतवत्यहं ॥ १ ॥

लोकेऽस्मिन् जगतामीश उपाचार्याश्च संति वै ।
कौमार्यस्तावरार्यश्च मठार्यश्च गणार्यकः ॥ २ ॥

मालार्यश्चेति विख्याताः पंचोपाचार्यनामकाः ।
त्वयोक्ते वीरशैवाख्ये मते सर्वोत्तमोत्तमे ॥ ३ ॥

वीरशैवप्रभेदानां सर्वेषां लिङ्गधारणे ।
वैवाहादिकमांगल्ये सर्वेषु पुण्यकर्मसु ॥ ४ ॥

शवस्थापनश्राद्धादिकार्येष्वेतान् विना क्वचित् ।
उपाचार्यान् वीरशैवमतोत्पन्ननृणामपि ॥ ५ ॥

---

## ನಾಲ್ಕನೆಯ ಪ್ರಕರಣ

ಸುಪ್ರಭೇದಾಗಮದಲ್ಲಿ ಪಾರ್ವತಿಯ ಪ್ರಶ್ನೆ— ಎಲೈ ಭಗವಂತನೆ ಬೇರೆ ಬೇರೆ ಐದು ಹೆಸರುಳ್ಳ ಐದು ಜನ ಮಹಾಚಾರ್ಯರು ಕರ್ತೃಗಳೆಂದು ನೀನೆ ಹೇಳಿರುವಿ. ನಾನು ಕೇಳಿರುವೆನು. ॥೧॥ ಆದರೆ ಎಲೈ ಜಗದೀಶನೆ ನಿನ್ನಿಂದ ಹೇಳಲ್ಪಟ್ಟ ಸರ್ವ ಮತಗಳಲ್ಲಿ ಶ್ರೇಷ್ಠವಾದ ವೀರಶೈವ ಮತದಲ್ಲಿ ಮಠಾರ್ಯ (ಮಠಸ್ಥ) ಗಣಾರ್ಯ (ಗಣಾಚಾರಿ) ಸ್ತಾವರಾರ್ಯ (ಸ್ತಾವರದ) ಕೌಮಾರ್ಯ (ಗಣಕುಮಾರ) ಮಾಲಾರ್ಯ (ಮಠಪತಿ) ಎಂದು ಪ್ರಸಿದ್ಧರಾದ ಐದು ಜನ ಉಪಾಚಾರ್ಯರು ಈ ಲೋಕದಲ್ಲಿರುತ್ತಾರೆ. ॥೨-೩॥ ಸರ್ವ ವಿಧರಾದ ವೀರಶೈವರಿಗೆ ಲಿಂಗಧಾರಣ ಮಾಡುವಲ್ಲಿ ವಿವಾಹಾದಿ ಮಂಗಲಕಾರ್ಯಗಳಲ್ಲಿ ಇತರ ಸಮಸ್ತ ಪುಣ್ಯ ಕಾರ್ಯಗಳಲ್ಲಿ ಸಮಾಧಿಕಾರ್ಯದಲ್ಲಿ ದಿನಕರ್ಮದಲ್ಲಿ ಇತ್ಯಾದಿ ಇನ್ನೂ ಅನೇಕ ಕಾರ್ಯಗಳಲ್ಲಿ ಈ ಐದುಜನ ಉಪಾಚಾರ್ಯರನ್ನು ಬಿಟ್ಟರೆ ವೀರಶೈವರಾದವರಿಗೆ ಮಾರ್ಗವೇ

गतिर्नास्ति यतो नित्यं सर्वदेशेषु शंकर ।
सर्वकाल उपाचार्या व्यापका जगतीतले ॥ ६ ॥
शैवानां सर्वकर्माणि कुर्वन्ति नितरां प्रभो ।
अतः के ते उपाचार्याः कर्तारः प्रतिभांति हि ॥ ७ ॥
पूर्वमुक्ता महाचार्याः सिंहपीठाधिपाः किमु ।
कर्तारः सर्वकार्येषु वीराणामथवा वद ॥ ८ ॥
उपाचार्याश्च कर्तारो महाचर्यानुगा इमे ।
उपाचार्यानुगास्तेषां महाचार्याः किमु प्रभो ॥ ९ ॥
किंवा दशविधानां तु समत्वं विद्यतेऽनघ ।
एवमादिषु संदेहा मम संति कृपानिधे ॥ १० ॥
भक्तानां मुक्तिदं क्षिप्रमेतद्विस्तार्थं मे वद ।
श्रोतुं कौतूहलं चित्तं लोकसंशयकारकम् ॥ ११ ॥

---

ಇರುವದಿಲ್ಲ. ಆದುದರಿಂದಲೇ ಎಲ್ಲಾ ದೇಶದಲ್ಲಿ ಎಲ್ಲಾ ಕಾಲದಲ್ಲಿ ಈ ಐದು ಜನ ಉಪಾಚಾರ್ಯರೆ ಈ ಭೂಮಿಯ ತುಂಬಾ ವ್ಯಾಪಿಸಿಕೊಂಡು ವೀರಶೈವರ ಮನೆಗಳಲ್ಲಿ ನಡೆಯುವ ಎಲ್ಲಾ ಧರ್ಮಕಾರ್ಯಗಳನ್ನು ನಡೆಯಿಸಿಕೊಂಡು ಹೋಗುತ್ತಾರೆ. ಈ ರೀತಿ ಸರ್ವಕಾರ್ಯಗಳನ್ನು ನಡೆಯಿಸಿಕೊಂಡು ಹೋಗುವ ಉಪಾಚಾರ್ಯರು ಎಂಥವರಿರುವರು? ಉಪಾಚಾರ್ಯರೇ ಸರ್ವಕಾರ್ಯಗಳನ್ನು ನಡೆಯಿಸಿಕೊಂಡು ಹೋಗುವಂಥಾ ಕರ್ತೃಗಳಾಗಿ ತೋರುತ್ತಾರೆ. ಎಲೈ ಪ್ರಭುವೇ? ನೀನು ಮೊದಲು ಹೇಳಿದ ಸಿಂಹಾಸನಾಧಿಪತಿಗಳಾದ ಮಹಾಚಾರ್ಯರು ವೀರಶೈವರ ಮನೆ ಮನೆಗಳಲ್ಲಿ ನಡೆಯುವ ಸರ್ವವಿಧವಾದ ಧರ್ಮಕಾರ್ಯಗಳಲ್ಲಿ ಕರ್ತೃಗಳೋ ಅಥವಾ ಉಪಾಚಾರ್ಯರು ಕರ್ತೃಗಳೋ ಹೇಳು. ॥೬–೮॥

ಅಥವಾ ಮಹಾಚಾರ್ಯರ ಅಪ್ಪಣೆಯ ಮೇರೆಗೆ ಉಪಾಚಾರ್ಯರು ಸರ್ವವಿಧ ವಾದ ಧರ್ಮಕಾರ್ಯಗಳನ್ನು ಮಾಡುತ್ತಿರುವರೋ? ಏನು ಉಪಾಚಾರ್ಯರ ಅನು ಮತಿಯ ಮೇರೆಗೆ ಮಹಾಚಾರ್ಯರು ಎಲ್ಲಾ ಕಾರ್ಯಗಳನ್ನು ಮಾಡುತ್ತಿರುವರೋ? ಅಥವಾ ಐದು ಜನ ಮಹಾಚಾರ್ಯರೂ ಐದು ಜನ ಉಪಾಚಾರ್ಯರೂ ಈ ಹತ್ತು

इत्येवं गिरिजापृष्टः शंकरः प्रश्नमस्तुवत् ।
तदा विस्मयमानस्तामुवाच मधुरं वचः ॥ १२ ॥

ईश्वर उवाच

जगज्जननि मत्प्राणप्रिये मंगलरूपिणि ।
वीरशैवमतांभोधिवर्धने चंद्रसन्निभे ॥ १३ ॥
साधु पृष्टं त्वया कांते लोकोद्धरणहेतवे ।
एतत्क्रमं प्रवक्ष्यामि शृणु त्वं सावधानतः ॥ १४ ॥
मद्धृदयात्समुद्भूत उपार्याख्यो मठार्यकः ।
मम दक्षिणस्कंधे तु समुद्भूतो गणार्यकः ॥ १५ ॥

---

ಜನರಿಗೂ ಸಮಾನತೆ ಇರುವದೋ? ದಯಾಸಾಗರನಾದ ಎಲೈ ಶಂಕರನೇ ಈ ವಿಷಯಗಳಲ್ಲಿ ನನಗೆ ಬಹಳ ಸಂಶಯಗಳಿರುತ್ತವೆ. ಭಕ್ತರಿಗೆ ಮುಕ್ತಿಯನ್ನು ಕೊಡುವಂಥ ಈ ವಿಷಯವನ್ನು ವಿಸ್ತಾರವಾಗಿ ನನಗೆ ತಿಳಿಸಿಕೊಡು. ಜನರ ಸಂಶಯವನ್ನು ಹೋಗಲಾಡಿಸಲು ಬಯಸುವಂತಹ ನನ್ನ ಮನಸ್ಸು ಈ ವಿಷಯವನ್ನು ಕೇಳಲು ಬಹಳ ಉತ್ಸುಕವಾದುದಾಗಿದೆ. ಈ ಪ್ರಕಾರ ಪಾರ್ವತಿಯು ಪ್ರಶ್ನೆ ಮಾಡಿದ ನಂತರ ಶಂಕರನು ಎಲೈ ಪಾರ್ವತಿಯೇ? ಬಹಳ ಒಳ್ಳೆ ಪ್ರಶ್ನೆಯನ್ನು ಮಾಡಿದಿ ಎಂದು ಹೊಗಳಿದನು. ಆಗ ಶಂಕರನು ಮುಗುಳು ನಗೆಯುಳ್ಳವನಾಗಿ ಪಾರ್ವತಿಯನ್ನು ಕುರಿತು ಮಧುರವಾಗಿ ಹೇಳಲಿಕ್ಕೆ ಆರಂಭಿಸಿದನು. ||೯-೧೨||

### ಈಶ್ವರನು ಹೇಳಿದನು

ಜಗನ್ಮಾತೆಯೂ, ಮಂಗಲರೂಪಿಣಿಯೂ, ವೀರಶೈವ ಮತವೆಂಬ ಸಮುದ್ರವನ್ನು ವೃದ್ಧಿಗೊಳಿಸುವವಳೂ, ನನ್ನ ಪ್ರಾಣಪ್ರಿಯಳೂ ಆದ ಎಲೈ ಕಾಂತಾಮಣಿಯೇ ಜಗತ್ತನ್ನು ಉದ್ಧಾರ ಮಾಡಬೇಕೆಂಬ ಹೇತುವಿನಿಂದ ನೀನು ಒಳ್ಳೆ ವಿಷಯವನ್ನು ಕೇಳಿರುವಿ ಅದನ್ನು ಹೇಳುವೆನು ಸಾವಧಾನದಿಂದ ಕೇಳು. ||೧೩-೧೪||

ನನ್ನ ಹೃದಯದಿಂದ ಮಠಾರ್ಯನೆಂಬ ಹೆಸರುಳ್ಳ ಉಪಾಚಾರ್ಯನು ಹುಟ್ಟಿರುವನು. ನನ್ನ ಬಲಗಡೆಯ ಹೆಗಲಿನಿಂದ ಗಣಾಚಾರಿಯು ಹುಟ್ಟಿರುವನು. ಎಡಗಡೆಯ

मम बामवरस्कंधान्मालार्यस्य समुद्भवः ।
तथा दक्षिणपादाच्च जातः स्तावरसंज्ञकः ॥ १६ ॥
पुनर्वामपदोद्भूतः कौमार्योऽस्य उपार्यकः ।
एतदाख्यायुताऽऽचार्या उपाचार्या इति श्रुताः ॥ १७ ॥
मत्सेवार्थं यथा सृष्टाः पैशाचगणनायकाः ।
विष्णुसेवाविधानार्थं शौनकादिगणो यथा ॥ १८ ॥
महीपानां च सेवायै परिचारिगणो यथा ।
देशिकानां च सेवार्थं यथा शिष्या गुणाकराः ॥ १९ ॥
उपाचार्याश्च तद्वत्तु महाचार्येषु सेवकाः ।
मन्मुखोद्भूत पंचार्याः पंचपीठाधिपास्तथा ॥ २० ॥
त एव वीरशैवानां प्रशस्यंतेऽधिकारिणः
मद्रूपा अतएवैषामुपार्याः सेवका मताः ॥ २१ ॥

---

ಹೆಗಲಿನಿಂದ ಮಠಪತಿ ಎಂಬವನು ಹುಟ್ಟಿರುವನು. ನನ್ನ ಬಲಪಾದದಿಂದ ಸ್ತಾವರನೆಂಬುವನು ಹುಟ್ಟಿರುವನು. ಎಡಪಾದದಿಂದ ಕೌಮಾರ್ಯನೆಂಬ (ಗಣಕುಮಾರನು) ಹುಟ್ಟಿರುವನು. ಈ ಹೆಸರುಳ್ಳ ಐವರು ಉಪಾಚಾರ್ಯರೆಂದು ಪ್ರಸಿದ್ಧರಾಗಿರುವರು. ॥೧೫-೧೭॥ ನನ್ನ ಸೇವಾ ಮಾಡುವದಕ್ಕಾಗಿ ಹೇಗೆ ಪಿಶಾಚಾದಿಭೂತಗಳು, ಗಣಾಧಿಪತಿಗಳು, ಸೃಷ್ಟಿಮಾಡಲ್ಪಟ್ಟಿರುವರೋ? ವಿಷ್ಣುವಿನ ಸೇವೆಗಾಗಿ ಶೌನಕಾದಿಗಣವು ಹೇಗೆ ನಿರ್ಮಿಸಲ್ಪಟ್ಟಿರುವದೋ? ರಾಜರ ಸೇವೆಗಾಗಿ ಪರಿಚಾರಕರ ಗುಂಪು ಹೇಗೆ ಇರುವರೋ? ಗುರುಗಳ ಸೇವೆಗಾಗಿ ಗುಣವಂತರಾದ ಶಿಷ್ಯರು ಹೇಗೆ ಇರುವರೋ ಅದರಂತೆ ಮಹಾಚಾರ್ಯರ ಸೇವೆಗಾಗಿ ಉಪಾಚಾರ್ಯರು ಇರುತ್ತಾರೆ. ನನ್ನ ಮುಖಗಳಿಂದ ಉತ್ಪನ್ನರಾದ ಐದು ಜನ ಸಿಂಹಾಸನಾಧಿಪತಿಗಳಾದ ಮಹಾಚಾರ್ಯರೇ ವೀರಶೈವರಿಗೆ ಮುಖ್ಯಾಧಿಕಾರಿಗಳು ಎಂದು ಹೇಳಲ್ಪಡುವರು. ಆ ಪಂಚಾಚಾರ್ಯರು ಕೇವಲ ನನ್ನ ಸ್ವರೂಪರಿರುತ್ತಾರೆ. ಆದುದರಿಂದಲೇ ಆ ಮಹಾಚಾರ್ಯರಿಗೆ ಉಪಾಚಾರ್ಯರು ಸೇವಕರೆಂದು ಗಣಿಸಲ್ಪಡುವರು ॥೧೮-೨೧॥ ಇವರಿಗೆ ಗ್ರಾಮಾ-ಚಾರ್ಯರು ಮತ್ತು ಉಪಾಚಾರ್ಯರು ಎಂದು ಎರಡು ಹೆಸರುಗಳಿರುತ್ತವೆ. ಪ್ರತಿಯೊಂದು ಸಣ್ಣ ದೊಡ್ಡ ಹಳ್ಳಿ ಪಟ್ಟಣಗಳಲ್ಲಿರುವ ವೀರಶೈವರ ಮನೆಗಳಲ್ಲಿ

ग्रामाचार्यो उपाचार्यो इति नामद्वयं मतम् ।
तदभावो यदाचास्ति शैवसद्मनि मंगले ॥ २२ ॥
तदा स्वतारतम्येन कुर्वन्ति हि महीतले ।
पूर्वं त्वयोक्तकर्माणि सर्वाण्यपि यथाविधि ॥ २३ ॥
पूज्योऽपूज्याश्च विद्यंते तेषां मध्ये सदाऽनघे ।
पूज्यो मठार्य एवैकः सर्वेऽपूज्या भवंति हि ॥ २४ ॥

इति श्रीमद्वीरशैवसदाचारसंग्रहे सुप्रभेदागमानुसारेणोपाचार्यकथनं नाम चतुर्थं प्रकरणं समाप्तम् ॥

---

ನಡೆಯುವ ಶುಭ ಶೋಭನಾದಿ ಸಮಸ್ತ ಕಾರ್ಯಗಳಲ್ಲಿ ಮಹಾಚಾರ್ಯರು ಉಪಸ್ಥಿತರಾಗಲು ಸಾಧ್ಯವಿಲ್ಲ. ಆಚಾರ್ಯರ ಆಗಮನಾಭಾವ ಕಾಲದಲ್ಲಿ ಈ ಉಪಾಚಾರ್ಯರು ವೀರಶೈವರ ಮನೆಗಳಲ್ಲಿ ನಡೆಯುವ ನೀನು ಹಿಂದೆ ಹೇಳಿದ ಎಲ್ಲಾ ಕಾರ್ಯಗಳನ್ನು ತಮ್ಮ ತಮ್ಮ ಅಧಿಕಾರಕ್ಕೆ ತಕ್ಕಂತೆ ವಿಧಾನಪ್ರಕಾರ ಮಾಡಿಕೊಂಡು ಹೋಗುವರು. ಭೂಮಂಡಲದ ತುಂಬಾ ಹೀಗೆ ನಡೆದಿದೆ. ॥೨೨-೨೩॥

ಎಲೈ ಪಾರ್ವತಿಯೇ ಐದು ಜನ ಉಪಾಚಾರ್ಯರಲ್ಲಿ ಕೇವಲ ಮಠಾರ್ಯನೊಬ್ಬನೇ ಪೂಜ್ಯನು. (ಪೂಜಾ ಮಾಡಿಸಿಕೊಳ್ಳಲಿಕ್ಕೆ ಯೋಗ್ಯನು) ಉಳಿದ ಗಣಾಚಾರಿ, ಮಠಪತಿ, ಸ್ಥಾವರ, ಗಣಕುಮಾರ ಎಂಬ ನಾಲ್ವರು ಅಪೂಜ್ಯರು. (ಪೂಜಾ ಮಾಡಿಸಿಕೊಳ್ಳಲು ಯೋಗ್ಯರಲ್ಲ) ಪೂಜ್ಯನಾದ ಮಠಾರ್ಯನಿಗೆ ಧರ್ಮ ಕಾರ್ಯಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವವರು. ॥೨೪॥

ಹೇಗೆಂದರೆ ಮಠಸ್ಥನು ಧಾರ್ಮಿಕ ಕಾರ್ಯಗಳಲ್ಲಿ ಪೌರೋಹಿತ್ಯವನ್ನು ವಹಿಸಿ ಕಾರ್ಯಗಳನ್ನು ನಡೆಸುವನು. ಮತ್ತು ಗದ್ದುಗೆಯ ಮೇಲೆ ಕೂತು ಪೂಜಾ ಮಾಡಿಸಿಕೊಂಡು ಪಾದೋದಕ ಪ್ರಸಾದಗಳನ್ನು ಕೊಡುವನು. ಇದು ಮಠಸ್ಥನ ಕರ್ತವ್ಯವು. ಆ ಆ ಕಾರ್ಯಕ್ಕೆ ಮತ್ತು ಒಳಗೆ ನಡೆಯುವ ಪೂಜಾದಿಗಳಿಗೆ ಬೇಕಾಗುವ ಹೂ ಪತ್ರಿಗಳನ್ನು ಸಂಗ್ರಹಿಸಿ ಪೂಜಾ ಸಾಮಗ್ರಿಗಳನ್ನು ತಯಾರ ಮಾಡಿಕೊಂಡು ಮಠಸ್ಥನು ಹೇಳಿದಂತೆ ಪೂಜಾದಿಗಳನ್ನು ಮಾಡುವದು ಮಠಪತಿಯ ಕರ್ತವ್ಯವು. ಆಯಾಯ ಕಾರ್ಯಗಳಲ್ಲಿ ಮನೆಯ ಯಜಮಾನನ ಯೋಗ್ಯತೆಗೆ ಅನುಗುಣವಾಗಿ ಯಾರು ಯಾರು ಬರಬೇಕಾಗಿರುತ್ತಾರೆ. ಒಳಗಿನ ಪೂಜಾ ಕಾರ್ಯದಲ್ಲಿ ಯಾರು ಬೇಕೋ ಅವರೆಲ್ಲರಿಗೆ ಆಮಂತ್ರಣ ಕೊಟ್ಟು ಸಕಾಲಕ್ಕೆ ಅವರು ಬಂದುದನ್ನು ನೋಡಿಕೊಳ್ಳುವದು

# ॥ अथ पंचमं प्रकरणम् ॥

पार्वत्युवाच—

देव देव जगन्नाथ सर्वानुग्रहकारक ।
जननं पंचमानां हि श्रोतुमिच्छामि सांप्रतम् ॥ १ ॥

---

ಗಣಾಚಾರಿಯ ಕರ್ತವ್ಯವು. ಹೊರಗಿನ ಕಾರ್ಯದಲ್ಲಿ ಮತ್ತು ಒಳಗಿನ ಪೂಜಾದಿ ಕಾರ್ಯದಲ್ಲಿ ಎಷ್ಟು ಜನರು ಬರುವರೋ ಅವರೆಲ್ಲರಿಗೆ ಅರ್ಪವರಿಗೆ ತಕ್ಕಂತೆ ಆಸನ ಗಳನ್ನು ಸಿದ್ಧ ಮಾಡಿಸುವದು. ಕೊನೆಗೆ ಅವನ್ನು ತಗೆಯಿಸಿ ಸ್ವಚ್ಛ ಮಾಡಿಸುವದು ಸ್ಥಾವರದವರ ಕರ್ತವ್ಯವು. ಬಂದಿರುವ ಯಾವತ್ತೂ ಜನರಿಗೆ ಪಾದೋದಕ ಪ್ರಸಾದ ಗಳು ಸರಿಯಾಗಿ ವಿನಿಯೋಗವಾದವೋ ಹೇಗೆ ಎಂಬುದನ್ನು ನಿರೀಕ್ಷಿಸುವದು ಗಣ ಕುಮಾರನ ಕರ್ತವ್ಯವು. ಈ ಕರ್ತವ್ಯಗಳು ದೇಶಭೇದದಿಂದ ಭಿನ್ನ ಭಿನ್ನಗಳಾಗಿಯೂ ಇರಬಹುದು. ತಮ್ಮ ತಮ್ಮ ಪ್ರಾಂತಾನುಗುಣವಾಗಿ ಈ ಕಾರ್ಯಗಳನ್ನು ಹಂಚಿ ಹಾಕಿಕೊಳ್ಳಬಹುದು. ಒಂದೊಂದು ಕಡೆಯಲ್ಲಿ ಐದು ಜನರು ಇರುವದಿಲ್ಲ ಅಂತಹ ಸ್ಥಳದಲ್ಲಿ ಇದ್ದವರೇ ಆಯಾ ಕಾರ್ಯಗಳನ್ನು ನಡೆಯಿಸಿಕೊಂಡು ಹೋಗಬೇಕು. ಮಠಸ್ಥರು, ಮಠಪತಿಗಳು, ಸರ್ವತ್ರ ದೊರೆಯುವರು. ಗಣಾಚಾರಿಗಳು ಸ್ಥಾವರ ದವರು ಕೆಲ ಕೆಲವು ಕಡೆಯಲ್ಲಿ ದೊರೆಯುತ್ತಾರೆ. ಕೌಮಾರ್ಯ (ಗಣಕಮಾರ) ಎಂಬವರು ಮಾತ್ರ ಬಹಳ ವಿರಳ. ಮತ್ತು ಬೇರೆ ಬೇರೆ ಪ್ರಾಂತಗಳಲ್ಲಿ ಈ ಹೆಸರಿ ನಲ್ಲಿಯೂ ವ್ಯತ್ಯಾಸ ಬರುವದು. ಆದುದರಿಂದ ತಮ್ಮ ತಮ್ಮ ಪ್ರಾಂತಾನುಗುಣವಾಗಿ ಹೆಸರುಗಳನ್ನು ಅವರವರ ಕರ್ತವ್ಯಗಳನ್ನು ತಿಳಿದುಕೊಳ್ಳಬೇಕು. ವಿಪರೀತವಾಗಿ ಯಾರೂ ಭಾವಿಸಬಾರದು.

ವೀರಶೈವ ಸದಾಚಾರಸಂಗ್ರಹದಲ್ಲಿ ಉಪಾಚಾರ್ಯರಾದ ಮಾಹೇಶ್ವರ ವರ್ಗ ದವರ ವಿವರಣನಾಮಕವಾದ ಚತುರ್ಥಾಧಿಕರಣದ, ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

———

ಸುಪ್ರಭೇದಾಗಮದಲ್ಲಿ ಪಾರ್ವತಿಯ ಪ್ರಶ್ನೆ— ಹೇ ದೇವಾಧಿದೇವ? ಜಗನ್ನಾಥ ಸರ್ವರಿಗೂ ಅನುಗ್ರಹ ಮಾಡುವಂಥ ಪರಮಾತ್ಮನೆ ? ಈಗ ಪಂಚಮರ ಜನನವನ್ನು ಕೇಳಲು ಬಯಸುತ್ತೇನೆ ॥೧॥ ಈಶ್ವರನು ಹೇಳಿದನು— ನನ್ನ ಈಶಾನ ಮುಖದಿಂದ

ईश्वर उवाच

ममेशानमुखोत्पन्नः पंचवक्त्रगणेश्वरः ।
तन्मुखात्पंचमानां तु जननं विद्धि मत्प्रिये ॥ २ ॥

पार्वत्युवाच

नामानि पंचमानां तु तेषां पुत्रान् पृथक् पृथक् ।
सर्वेषां गोत्रसूत्राणि शाखाः प्रवरकांस्तथा ।
पृथग्विस्तार्य तत्सर्वं वद मे करुणाकर ॥ ३ ॥

ईश्वर उवाच

ममोर्ध्वमुखसंजातः पंचवक्त्रगणेश्वरः ।
अतिवर्णाश्रमोपेतो वीरशैवमताश्रितः ॥ ४ ॥
तस्य वक्त्रेषु संभूताः पंचमाः पंचसंख्यकाः ।
कथ्यते हि मया देवि तेषां गोत्रादिकं पृथक् ॥ ५ ॥

---

ಪಂಚಮುಖ ಗಣೇಶ್ವರನು ಹುಟ್ಟಿದನು. ಆತನ ಮುಖದಿಂದ ಪಂಚಮರ ಉತ್ಪತ್ತಿ ಯಾಯಿತೆಂಬುದನ್ನು ಎಲೈ ನನ್ನ ಪ್ರಿಯಳೆ ತಿಳಿದುಕೊ ॥೨॥ ಪಾರ್ವತಿಯ ಪ್ರಶ್ನೆ- ಪಂಚಮರ ಹೆಸರುಗಳನ್ನು, ಅವರ ಪುತ್ರರನ್ನು ಮತ್ತು ಅವರೆಲ್ಲರ ಗೋತ್ರ, ಸೂತ್ರ, ಪ್ರವರ, ಶಾಖಾ ಎಲ್ಲವನ್ನು ಎಲೈ ದಯಾಸಾಗರನೇ ನನಗೆ ವಿಸ್ತಾರವಾಗಿ ಹೇಳು ॥೩॥ ಈಶ್ವರನು ಹೇಳಿದನು- ನನ್ನ ಊರ್ಧ್ವ (ಈಶಾನ) ಮುಖದಿಂದ ಪಂಚಮುಖ ಗಣೇಶ್ವರನು ಹುಟ್ಟಿದನು. ಐದನೆಯದಾದ ಈಶಾನ ಮುಖದಿಂದ ಹುಟ್ಟಿದ್ದರಿಂದ ಪಂಚಮುಖ ಗಣೇಶ್ವರನು ಪಂಚಮನೆನಿಸಿಕೊಂಡನು. ಆತನ ಮಕ್ಕಳಿಗೂ ಪಂಚಮರೆಂಬ ಹೆಸರು ರೂಢವಾಗಿ ಬಂದಿದೆ. ಪಂಚಮನೆಂಬ ಹೆಸರುಳ್ಳ ಪಂಚಮುಖ ಗಣೇಶ್ವರನು ಅತಿವರ್ಣಾಶ್ರಮಿಯೂ, ಶ್ರೇಷ್ಠವಾದ ವೀರಶೈವ ಧರ್ಮವನ್ನು ಆಶ್ರಯಿಸಿದವನೂ ಇರುತ್ತಾನೆ. ॥ ೪ ॥ ಎಲೈ ದೇವಿಯೇ ಪಂಚಮುಖ ಗಣೇಶ್ವರನ ಮುಖಗಳಲ್ಲಿ ಐದು ಜನ ಪಂಚಮರು ಹುಟ್ಟಿದರು. ಅವರ ಗೋತ್ರ ಮೊದಲಾದುದನ್ನು ಪ್ರತ್ಯೇಕವಾಗಿ ಹೇಳುವೆನು. ॥ ೫ ॥

पंचास्यमुखसंभूता यतः सर्वे ततोऽधिकाः ।
पंचमाः सर्ववर्णेभ्यो मद्भक्ता मत्प्रियाः सदा ॥ ६ ॥
अतिवर्णाश्रमाचारा लिंगाराधनतत्पराः ।
ते वै साक्षान्महादेवि मोदन्ते ह्यागमेषु च ॥ ७ ॥
मखारिश्चैव कालारिः पुरारिस्तु स्मरारि वै ।
वेदारिः पंचमश्चेति पंच नामानि वै शृणु ॥ ८ ॥
एतेषां पंचमानां तु चोपदेष्टा च यो गुरुः ।
तस्य गोत्रादिकं यद्यज्ज्ञेयं तत्तत्सदामले ॥ ९ ॥
स्वगोत्रैःसह संबंधो नैव कार्यः कदाचन ।
प्रमादाद्वा प्रकुर्वीत संबंधस्तु स दोषभाक् ॥ १० ॥

---

ಪಂಚಮುಖ ಗಣೇಶ್ವರನ ಮುಖಗಳಿಂದ ಈ ಪಂಚಮರೆಲ್ಲರೂ ಹುಟ್ಟಿರುವದರಿಂದ ನನ್ನ ಭಕ್ತರಾದ ಸರ್ವವರ್ಣದ ಭಕ್ತರಿಗಿಂತಲೂ ಶ್ರೇಷ್ಠರಾದ ಭಕ್ತರು. ಮತ್ತು ನನ್ನ ಪ್ರೀತಿಗೆ ಪಾತ್ರರೂ, ಅತಿವರ್ಣಾಶ್ರಮದ ಆಚಾರಪರರೂ, ಲಿಂಗ ಪೂಜೆಯಲ್ಲಿ ನಿಷ್ಣಾತರೂ ಇದ್ದು ಎಲೈ ಮಹಾದೇವಿಯೇ, ಅವರು ಯಾವಾಗಲೂ ಆಗಮಗಳಲ್ಲಿಯೇ ಆನಂದಪಡತಕ್ಕವರು ಇರುತ್ತಾರೆ. ॥೭॥ ಮಖಾರಿ, ಕಾಲಾರಿ, ಪುರಾರಿ, ಸ್ಮರಾರಿ ಮತ್ತು ವೇದಾರಿ ಎಂಬ ಹೆಸರುಗಳು ಐದು ಜನ ಪಂಚಮರಿಗೆ ಕ್ರಮವಾಗಿ ಇರುತ್ತವೆ. ॥೮॥ ಐದು ಜನ ಪಂಚಮರಿಗೆ ದೀಕ್ಷಾ ಉಪದೇಶಾದಿಗಳನ್ನು ಮಾಡುವಂಥ ಗುರುಗಳು ಐದು ಜನರು ಬೇರೆ ಬೇರೆ ಇರುತ್ತಾರೆ. ಯಾವ ಪಂಚಮನಿಗೆ ಉಪದೇಶ ಮಾಡುವಂಥ ಯಾವ ಯಾವ ಗುರು ಇರುವನೋ ಆ ಗುರುವಿಗೆ ಯಾವ ಯಾವ ಗೋತ್ರ, ಸೂತ್ರ, ಪ್ರವರ, ಶಾಖಾದಿಗಳಿರುವವೊ ಅವೇ (ಗುರುಗಳ ಗೋತ್ರ ಸೂತ್ರಾದಿಗಳೇ) ಆಯಾ ಪಂಚಮನಿಗೆ ಗೋತ್ರ, ಸೂತ್ರಾದಿಗಳೆಂದು ತಿಳಿದುಕೊಳ್ಳಬೇಕು. ಪಂಚಮರಿಗೆ ಪ್ರತ್ಯೇಕ ಗೋತ್ರ ಸೂತ್ರಾದಿಗಳಿರುವದಿಲ್ಲ. ಗುರುಗಳ ಗೋತ್ರ, ಸೂತ್ರಾದಿಗಳೇ ಪಂಚಮರಿಗೂ ಇರುತ್ತವೆಂದು ತಿಳಿದುಕೊಳ್ಳಬೇಕು. ॥೯॥ ಗುರುಗಳ ಗೋತ್ರ ಸೂತ್ರಾದಿಗಳನ್ನೆ ತಮ್ಮ ಗೋತ್ರ ಸೂತ್ರವೆಂದು ತಿಳಿದ ಪಂಚಮರಲ್ಲಿ ಪರಸ್ಪರ ವಿವಾಹಾದಿ ಶರೀರ ಸಂಬಂಧ ಮಾಡುವಾಗ ಇಬ್ಬರು ಪಂಚಮರಿಗೂ ಒಬ್ಬರೇ ಗುರುವಾಗಬಾರದು. ಏಕೆಂದರೆ ಗುರುವು ಒಬ್ಬನೇ ಆದರೆ ಇಬ್ಬರ ಗೋತ್ರ, ಸೂತ್ರಗಳು ಒಂದೇ ಆಗುತ್ತವೆ. ಯಾರೂ ತನ್ನ ಗೋತ್ರ ಸೂತ್ರದವರೊಡನೆ ತಾನು ಯಾವಾಗಲೂ ಶರೀರಸಂಬಂಧ ಮಾಡಬಾರದು. ಒಂದು ಪಕ್ಷ ಗೊತ್ತಿಲ್ಲದೇ ಮಾಡಿದರೆ ಅದು ಮಹಾದೋಷಕರವಾಗುವದು. ॥೧೦॥

एतेषां पंचमानां वै गोत्रसूत्रादिकं पृथक् ।
मखारिपंचमाख्यस्य वीरगोत्रं वरानने ॥ ११ ॥

तच्छाखा रेणुकाभिख्या सूत्रं पडिविडीत्यपि ।
एकाक्षरश्च प्रवरो मूलवर्णो नकारकः ॥ १२ ॥

कलशस्तु हरिद्वर्ण आराध्यो रेवणो मतः ।
तस्य मंत्रः प्रसादाख्यो दशवर्णमहामनुः ॥ १३ ॥

ॐ ह्रां ह्रीं ह्रूं ह्रैं ह्रौं नमः शिवाय ।
इति मंत्रः सदा तस्य उपदेश उदीरितः ।
अत्याश्रमी गृहस्थःस्यादिष्टलिंगेन संयुतः ।
एतैश्च लक्षणैर्युक्तो मखारिः पंचमो भवेत् ॥ १४ ॥

तत्सूत्राच्च समुत्पन्ना द्वादशैवोपपंचमाः ।
तेषां पृथक् च नामानि शृणु देवि वदाम्यहं ॥ १५ ॥

---

ಉಪದೇಶಕರಾದ ಗುರುಗಳ ಗೋತ್ರ, ಸೂತ್ರಾದಿಗಳೇ ಪಂಚಮರಿಗಿರುವಾಗ ಇವರಿಗೆ ಪ್ರತ್ಯೇಕವಾಗಿ ಹೇಳಬೇಕಾಗುವದಿಲ್ಲ. ಆದರೆ ಐದು ಜನ ಪಂಚಮರಲ್ಲಿ ಯಾವ ಪಂಚಮನಿಗೆ ಯಾವ ಗುರುವು ಇರುವನು ಎಂಬುದನ್ನಷ್ಟೇ ತಿಳಿಸಿದರೆ ನಡೆಯುತ್ತದೆ. ಆದರೂ ಆಯಾ ಪಂಚಮನಿಗೆ ಆಯಾಯ ಗುರುವನ್ನು ಹೇಳುತ್ತ ಹಿಂದೆ ಹೇಳಿದ ಗುರುಗಳ ಗೋತ್ರ, ಸೂತ್ರಗಳನ್ನೆ ಸ್ಫುಟವಾಗಿ ತಿಳಿಯಲಿ ಎಂಬ ಬುದ್ಧಿಯಿಂದ ಮತ್ತೊಮ್ಮೆ ಹೇಳಿರುವನು. ||೧೧||

ಮೊದಲನೆಯ ಪಂಚಮನು ಮಖಾರಿ ಎಂಬ ಹೆಸರುಳ್ಳವನು. ಇವನ ಗುರುವು ರೇವಣಾರಾಧ್ಯನು. ಈತನ ಗೋತ್ರ ವೀರಗೋತ್ರ, ಸೂತ್ರ ಪಡ್ವಿಡಿ, ಶಾಖಾ ರೇಣುಕ, ಪ್ರವರ, ಏಕಾಕ್ಷರ, ಮಂತ್ರವರ್ಣ, ನಕಾರ, ತಿಳಿ ಹಸಿರು ಬಣ್ಣದ ಕಲಶ, ಮಂತ್ರ ಹತ್ತು ಅಕ್ಷರಗಳುಳ್ಳ ಪ್ರಸಾದ ಪಂಚಾಕ್ಷರೀ ಈ ಮಂತ್ರವನ್ನೆ ಶಿಷ್ಯರಿಗೆ ಬೋಧ ಮಾಡುವದು ಈ ಲಕ್ಷಣಗಳಿಂದ ಕೂಡಿದ ಮಖಾರಿ ಪಂಚಮನು, ಅತ್ಯಾಶ್ರಮಿಯೂ, ಗೃಹಸ್ಥನು, ಇಷ್ಟಲಿಂಗದೊಡನೆ ಯುಕ್ತನು ಇರುವನು. ೧೪ ಈ ಮಖಾರಿ ಪಂಚಮನಿಂದ ಹನ್ನೆರಡು ಜನ ಉಪಪಂಚಮರು ಹುಟ್ಟಿರುವರು. ಎಲೈ ದೇವಿಯೇ? ಅವರ ಬೇರೆ ಬೇರೆ ಹೆಸರುಗಳನ್ನು ಹೇಳುತ್ತೇನೆ ಕೇಳು. ||೧೫|| ಶತಾಂಗ, ಪ್ರಮುಖ, ಶರ್ಕರ, ವೃಷಭ,

शतांगः प्रमुखश्चैव शर्करो वृषभाह्वयकः ।
सहस्राक्षः सधर्माख्यो विषमो मोचकाह्वयः ॥ १६ ॥
वृकभेदी कुंजरारिः शेषः शिखिवहाह्वयकः ।
मखारिपंचमादेते संभूता ह्युपपंचमाः ॥ १७ ॥
अतः परं प्रवक्ष्यामि कालारेर्लक्षणं शृणु।
कालारिपंचमाह्वयस्य नंदिगोत्रं प्रकीर्तितम् ॥ १८ ॥
तच्छाखा दारुका नाम प्रवरो द्व्यक्षरो मतः ।
तत्सूत्रे वृष्टिकाख्ये स्यान्मूलवर्णो मकारकः ॥ १९ ॥
कलशस्तस्य ताम्रश्च आराध्यो मरुळो मतः ।
मायापंचाक्षराख्यश्च नववर्णो महामनुः ॥ २० ॥
ॐ ह्रां ह्रीं ह्रूं ह्रैं नमः शिवाय ।
अयमेव महामन्त्रश्चोपदेशे प्रशस्यते ।
अतिवर्णी गृहस्थःस्यादिष्टलिंगार्चनापरः ॥ २१ ॥
एतैश्च लक्षणैर्युक्तः कालारिः पंचमस्तथा ।
तत्सूत्राच्च समुत्पन्ना द्वादशैवोपपंचमाः ॥ २२ ॥

---

ಸಹಸ್ರಾಕ್ಷ, ಸಧರ್ಮ, ವಿಷಮ, ಮೋಚಕ, ॥ ೧೬ ॥ ವೃಕಭೇದಿ, ಕುಂಜರಾರಿ, ಶೇಷ ಮತ್ತು ಶಿಖಿವಾಹ ಈ ಹನ್ನೆರಡು ಜನ ಉಪಪಂಚಮರು ಮಖಾರಿ ಪಂಚಮನಿಂದ ಹುಟ್ಟಿರುವರು. ॥ ೧೭ ॥

ಎಲೈ ಪಾರ್ವತಿಯೇ ಕಾಲಾರಿ ಪಂಚಮನ ಲಕ್ಷಣವನ್ನು ಹೇಳುವೆನು ಕೇಳು. ಎರಡನೆಯ ಪಂಚಮನು ಕಾಲಾರಿ ಎಂಬ ಹೆಸರುಳ್ಳವನು. ಈತನ ಗುರುವು ಮರುಳಾರಾಧ್ಯನು. ಈತನ ಗೋತ್ರ ನಂದಿಗೋತ್ರ, ಸೂತ್ರವೃಷ್ಟಿ, ದಾರುಕಶಾಖಾ, ಪ್ರವರ ದ್ವ್ಯಕ್ಷರ, ಮಂತ್ರದ ಬೀಜ, ಮಕಾರ ತಾಮ್ರದ ಕಲಶ, ಒಂಭತ್ತು ಅಕ್ಷರಗಳುಳ್ಳ ಮಾಯಾ ಪಂಚಾಕ್ಷರೀ ಮಂತ್ರ ಇದೇ ಉಪದೇಶ ಕಾಲದಲ್ಲಿ ಹೇಳಲ್ಪಡುವದು. ಈ ಲಕ್ಷಣಗಳಿಂದ ಕೂಡಿದವನು ಕಾಲಾರಿ ಪಂಚಮನು. ಇವನು ಗೃಹಸ್ಥಾಶ್ರಮಿಯು. ಅತಿವರ್ಣಿಯು ಇದ್ದು ಇಷ್ಟಲಿಂಗ ಪೂಜಾದಲ್ಲಿ ನಿರತನಾಗಿರುವನು. ಈ ಕಾಲಾರಿ ಪಂಚಮನಿಂದ ಹನ್ನೆರಡು ಜನ ಉಪಪಂಚಮರು ಹುಟ್ಟಿರುವರು. ॥ ೨೨ ॥

तेषां पृथक् च नामानि शृणु देवि वदाम्यहम् ।
केशराक्षो मृगारिश्च नाकेशो ऋषनामकः ॥ २३ ॥
शिलांगः शृंगशीर्षश्च चेलांबरकुहासनः ।
शतभुक् बहुजिह्वश्च नागदन्तो फणाह्वयः ।
कालारिपंचमादेते संभूता उपपंचमाः ॥ २४ ॥
पुरारिपंचमस्याथ भृंगिगोत्रं प्रकीर्तितम् ।
तच्छाखा शंखुकर्णाख्या प्रवरस्त्र्यक्षरो मतः ॥ २५ ॥
तत्सूत्रं लंबकं प्रोक्तं मूलवर्णः शिकारकः ।
कलशः कृष्णवर्णः स्याद्रामाचार्यो महागुरुः ॥ २६ ॥
सूक्ष्मपंचाक्षरीमंत्रस्त्वष्टाक्षर समन्वितः ।
ॐ ह्रां ह्रीं ह्रूं नमः शिवायेत्युपदेशाधिकारकः ॥ २७ ॥
अतिवर्णी गृहस्थः स्यादिष्टलिंगार्चनापरः ।
एतैश्च लक्षणैर्युक्तः पुरारिः पंचमस्तथा ॥ २८ ॥

---

ಎಲೈ ದೇವಿಯೇ ಅವರ ಬೇರೆ ಬೇರೆ ಹೆಸರುಗಳನ್ನು ಹೇಳುವೆನು ಕೇಳು. ಕೇಶರಾಕ್ಷ, ಮೃಗಾರಿ, ನಾಕೇಶ, ಋಷ, ॥ ೨೩ ॥ ಶಿಲಾಂಗ, ಶೃಂಗ ಶೀರ್ಷ, ಚೇಲಾಂಬರ, ಕುಹಾಸನ, ಶತಭುಕ್, ಬಹುಜಿಹ್ವ, ನಾಗದಂತ ಮತ್ತು ಫಣ ಎಂಬ ಹನ್ನೆರಡು ಜನ ಉಪಪಂಚಮರು ಕಾಲಾರಿ ಪಂಚಮನಿಂದ ಹುಟ್ಟಿರುವರು. ॥ ೨೪ ॥

ಮೂರನೆಯ ಪಂಚಮನು ಪುರಾರಿ ಎಂಬ ಹೆಸರುಳ್ಳವನು. ಇವನ ಗುರುವು ಏಕೋರಾಮಾರಾಧ್ಯನು. ಈತನ ಗೋತ್ರ ಭೃಂಗಿ, ಸೂತ್ರ, ಲಂಬನ, ಶಂಖುಕರ್ಣ, ಶಾಖಾ ಪ್ರವರ ತ್ರ್ಯಕ್ಷರ ॥ ೨೫ ॥ ಮಂತ್ರದ ಬೀಜಾಕ್ಷರ ಶಿಕಾರ, ಕಪ್ಪು ಬಣ್ಣದ ಕಲಶ ಎಂಟು ಅಕ್ಷರಗಳುಳ್ಳ ಸೂಕ್ಷ್ಮ ಪಂಚಾಕ್ಷರೀ ಮಂತ್ರ ಇದೇ ಉಪದೇಶ ಕಾಲದಲ್ಲಿ ಹೇಳಲ್ಪಡುವದು. ಈ ಲಕ್ಷಣಗಳಿಂದ ಕೂಡಿದವನು ಪುರಾರಿ ಎಂಬ ಪಂಚಮನು. ಇವನು ಅತಿವರ್ಣಿಯೂ ಗೃಹಸ್ಥಾಶ್ರಮಿಯೂ ಇದ್ದು ಇಷ್ಟಲಿಂಗ ಪೂಜಾದಲ್ಲಿ ನಿರತನಾಗಿರುವನು. ॥ ೨೬–೨೮ ॥

तत्सूत्राच्च समुत्पन्ना द्वादशैवोपपंचमाः ।
तेषां पृथक् च नामानि कथयामि शृणुष्व ते ॥ २९ ॥
अग्निभुक्कर्मकारी च जाबालो निर्जरस्तथा ।
निःशूलश्च शशांकश्च ललाटाक्षोऽक्षराख्यकः ॥ ३० ॥
पादाख्यो विकटांगश्च शिलादश्च हरिन्मुखः ।
पुरारिपंचमादेते संभूता उपपंचमाः ॥ ३१ ॥
स्मरारिपंचमस्याथ गोत्रं वै वृषभाभिधम् ।
तच्छाखा धेनुकर्णाख्या प्रवरश्चतुरक्षरः ॥ ३२ ॥
तत्सूत्रं मुक्तगुच्छाख्यं वाकारो मूलवर्णकः ।
कलशः श्वेतवर्णः स्यादाराध्यः पंडितस्तथा ॥ ३३ ॥
स्थूलपंचाक्षरीमंत्रः सप्तवर्णसमन्वितः ।
ॐ ऱ्हां ऱ्हीं नमः शिवाय सर्वोत्कृष्टोऽयमीरितः ॥ ३४ ॥
एतादृशमहामंत्र उपदेशाधिकारकः ।
अत्याश्रमी गृहस्थः स्यादिष्टलिंगार्चको भवेत् ।
एतैश्च लक्षणैर्युक्तः स्मरारिः पंचमस्तथा ॥ ३५ ॥

---

ಈ ಪುರಾರಿ ಪಂಚಮನಿಂದ ಹನ್ನೆರಡು ಜನ ಉಪಪಂಚಮರು ಹುಟ್ಟಿರುವರು. ಅವರ ಬೇರೆ ಬೇರೆ ಹೆಸರುಗಳನ್ನು ಹೇಳುವೆನು ದೇವಿಯೇ ಕೇಳು. ॥೨೯॥ ಅಗ್ನಿಭುಕ್, ಕರ್ಮಕಾರಿ, ಜಾಬಾಲ, ನಿರ್ಜರ, ನಿಃಶೂಲ, ಶಶಾಂಕ, ಲಲಾಟಾಕ್ಷ, ಅಕ್ಷರ, ಪಾದ, ವಿಕಟಾಂಗ, ಶಿಲಾದ ಮತ್ತು ಹರಿನ್ಮುಖ ಎಂಬ ಉಪಪಂಚಮರು ಪುರಾರಿ ಪಂಚಮನಿಂದ ಹುಟ್ಟಿರುವರು. ॥೩೦-೩೧॥

ನಾಲ್ಕನೆಯ ಪಂಚಮನು ಸ್ಮರಾರಿ ಎಂಬ ಹೆಸರುಳ್ಳವನು. ಇವನ ಗುರುವು ಪಂಡಿತಾರಾಧ್ಯನು. ಈತನ ಗೋತ್ರವು (ವೃಷಭ), ಸೂತ್ರ, ಮುಕ್ತಗುಚ್ಛ, ಧೇನುಕರ್ಣಶಾಖಾ, ಪ್ರವರ, ಚತುರಕ್ಷರ, ಮಂತ್ರಬೀಜ, ವಾಕಾರ, ಬಿಳಿ ಬಣ್ಣದ ಕಲಶ, ಏಳು ಅಕ್ಷರಗಳುಳ್ಳ ಸ್ಥೂಲ ಪಂಚಾಕ್ಷರೀಮಂತ್ರ ಇದೇ ಮಂತ್ರವು ಉಪದೇಶ ಕಾಲದಲ್ಲಿ ಹೇಳಲ್ಪಡುವದು.

ಈ ಲಕ್ಷಣಗಳಿಂದ ಕೂಡಿದವನು ಸ್ಮರಾರಿ ಪಂಚಮನು, ಅತ್ಯಾಶ್ರಮಿಯೂ, ಗೃಹಸ್ಥನು ಇದ್ದು ಇಷ್ಟಲಿಂಗ ಪೂಜಾದಲ್ಲಿ ತತ್ಪರನಾಗಿರುವನು ॥೩೨-೩೫॥

तत्सूत्राच्च समुत्पन्ना द्वादशैवोपपंचमाः ।
सहस्रशीर्षः पीतांगो नगमाली निराशयः ॥ ३६ ॥
यमद्युतिश्च सप्तांगो लतांगो मृत्युनाशनः ।
नतनुर्घोटवक्त्रश्च निरोगी चाभयाह्वयः ।
स्मरारिपंचमादेते संभूता उपपंचमाः ॥ ३७ ॥
वेदारिपंचमस्याथ स्कंदगोत्रमितीर्यते ।
तच्छाखा विश्वकर्णाख्या प्रवरः पंचमाक्षरः ॥ ३८ ॥
तत्सूत्रं पंचवर्णाख्यं मूलवर्णो यकारकः ।
कलशस्तस्य सौवर्णो विश्वाराध्यो गुरुः स्मृतः ॥ ३९ ॥
मूलं षडक्षरो मंत्रः षडक्षरसमन्वितः ।
ॐ नमः शिवायेति मंत्रमाता षडक्षरी ।
एतादृशमहामंत्रस्योपदेशः प्रशस्यते ॥ ४० ॥
अत्याश्रमी गृहस्थः स्यादिष्टलिंगार्चने रतः ।
एतैश्च लक्षणैर्युक्तो वेदारिः पंचमस्तथा ॥ ४१ ॥

---

ಸ್ಮರಾರಿ ಪಂಚಮನಿಂದ ಹನ್ನೆರಡು ಜನ ಉಪಪಂಚಮರು ಹುಟ್ಟಿರುವರು. ಸಹಸ್ರ ಶೀರ್ಷ, ಪೀತಾಂಗ, ನಗಮಾಲಿ, ನಿರಾಶನ. ‖ ೩೬ ‖ ಯಮದ್ಯುತಿ, ಸಪ್ತಾಂಗ, ಲತಾಂಗ. ಮೃತ್ಯುನಾಶನ, ನತನು, ಘೋಟವಕ್ತ್ರ, ನಿರೋಗೀ, ಅಭಯ ಎಂಬ ಉಪ ಪಂಚಮರು ಸ್ಮರಾರಿ ಪಂಚಮನಿಂದ ಹುಟ್ಟಿರುವರು. ‖ ೩೭ ‖

ಐದನೆಯ ಪಂಚಮನು ವೇದಾರಿ ಎಂಬ ಹೆಸರುಳ್ಳವನು. ಇವನ ಗುರುವು ವಿಶ್ವಾರಾಧ್ಯನು. ಈತನ ಗೋತ್ರ ಸ್ಕಂದಗೋತ್ರ. ಸೂತ್ರ ಪಂಚವರ್ಣ, ವಿಶ್ವಕರ್ಣ ಶಾಖಾ, ಪ್ರವರ, ಪಂಚಾಕ್ಷರ, ಮಂತ್ರದ ಬೀಜಾಕ್ಷರ, ಯಕಾರ, ಕಲಶಸುವರ್ಣದ್ದು, ಆರು ಅಕ್ಷರಗಳುಳ್ಳ. ಮೂಲ ಪಂಚಾಕ್ಷರೀ ಮಂತ್ರ ಇದೇ ಉಪದೇಶದಲ್ಲಿ ಹೇಳಲ್ಪಡುವದು. ‖ ೪೦ ‖ ಈ ಲಕ್ಷಣಗಳಿಂದ ಕೂಡಿದವನು. ವೇದಾರಿ ಪಂಚಮನು, ಅತ್ಯಾಶ್ರಮಿಯೂ ಗೃಹಸ್ಥನೂ ಇದ್ದು ಇಷ್ಟಲಿಂಗಪೂಜೆಯಲ್ಲಿ ನಿರತನಾಗಿರುವನು. ‖ ೪೧ ‖

तत्सूत्राच्च समुद्भूता द्वादशैवोपपंचमाः ।
तेषां पृथक् च नामानि शृणुष्वाहं वदामि ते ॥ ४२ ॥
पश्चाद्दृष्टिश्च पुष्टास्यो गिरिवक्त्रश्च गोमुखः ।
सुवर्णनखपद्मांघ्री दशाननविषाननौ ॥ ४३ ॥
उग्रदेहः शतपदः सहस्रस्कंदनामकः ।
त्रिवदनश्च वेदारेः संभूताश्चोपपंचमाः ॥ ४४ ॥
स्वयंभुवागमे — अवतीर्य महीभागे मदनुज्ञानुसारतः ।
पंचास्यपञ्चपुत्राणां दीक्षां कृत्वा विधानतः ॥ ४५ ॥
उद्धार्य भुवि मद्भक्तान्पंचाराध्या इतीरिताः ।
आराध्यैः पंचभिर्यै तु दीक्षिताः खलु पञ्चमाः ॥ ४६ ॥
वंशस्तु पंचमानां वै गतो वृद्धिं वरानने ।
ममेशानमुखाज्जातः पुरा पंचास्यसंज्ञकः ॥ ४७ ॥

---

ಈ ವೇದಾರಿ ಪಂಚಮನಿಂದ ಹನ್ನೆರಡು ಜನ ಪಂಚಮರು ಹುಟ್ಟಿರುವರು. ಅವರ ಹೆಸರುಗಳನ್ನು ಹೇಳುವೆನು. ಎಲೈ ದೇವಿಯೇ ಕೇಳು ॥ ೪೨ ॥ ಪಶ್ಚಾದ್ದೃಷ್ಟಿ, ಪುಷ್ಟಾಸ್ಯ, ಗಿರಿವಕ್ತ್ರ, ಗೋಮುಖ, ಸುವರ್ಣನಖ, ಪದ್ಮಾಂಘ್ರಿ, ದಶಾನನ, ವಿಷಾನನ. ॥ ೪೩ ॥ ಉಗ್ರದೇಹ, ಶತಪದ, ಸಹಸ್ರಸ್ಕಂದ ಮತ್ತು ತ್ರಿವದನ ಎಂಬ ಉಪಪಂಚಮರು ವೇದಾರಿ ಪಂಚಮನಿಂದ ಹುಟ್ಟಿರುವರು. ॥ ೪೪ ॥

ಸ್ವಯಂಭುವಾಗಮದಲ್ಲಿ ಪರಮಾತ್ಮನು ಪಾರ್ವತಿಗೆ ಹೇಳಿದನು. ಏನಂದರೆ ನನ್ನ ಅಪ್ಪಣೆಯ ಪ್ರಕಾರ ಭೂಮಿಯಲ್ಲಿ ಅವತರಿಸಿ ಪಂಚವಕ್ತ್ರನ ಐದು ಜನ ಮಕ್ಕಳಿಗೆ ವಿಧಾನೋಕ್ತವಾಗಿ ದೀಕ್ಷೆಯನ್ನು ಮಾಡಿ ॥ ೪೫ ॥ ನನ್ನ ಭಕ್ತರಾದ ಪಂಚಮರನ್ನು ಉದ್ಧಾರ ಮಾಡಿರಿ ಎಂದು ಐದು ಜನ ಆರಾಧ್ಯರು ನನ್ನಿಂದ ಹೇಳಲ್ಪಟ್ಟಿರುವರು. ಆ ಪ್ರಕಾರ ರೇವಣಾರಾಧ್ಯರೇ ಮೊದಲಾದ ಐದು ಜನ ಆರಾಧ್ಯರಿಂದ ಐದು ಜನ ಪಂಚಮರು ದೀಕ್ಷಿತರಾಗಿರುವರು. ॥ ೪೬ ॥ —: ವಿಚಾರ :—

ಐದುಜನ ಪಂಚಮರಿಗೆ ದೀಕ್ಷಾ ಮಾಡುವದಕ್ಕಾಗಿ ಐದು ಜನ ಆಚಾರ್ಯರಿಗೆ ಭೂಲೋಕದಲ್ಲಿ ಅವತರಿಸಲು ಪರಮಾತ್ಮನು ಏಕೆ ಅಪ್ಪಣೆ ಮಾಡಬೇಕಾಗಿತ್ತು.

तस्मात्पंचास्यगणपः पंचमश्चेति कीर्तितः ।
तद्वत्तद्वंशसंभूताः पंचमा इति विश्रुताः ॥ ४८ ॥
यथा मत्पंचवक्त्रेषु श्रेष्ठमीशानमाननम् ।
तथा सर्वेषु वर्णेषु श्रेष्ठाः पंचमवंशजाः ॥ ४९ ॥
तनुं समर्प्य गुरवे जंगमाय धनं तथा ।
मह्यं मनो महीभागे वर्तन्ते च मम प्रिये ॥ ५० ॥

---

ಒಬ್ಬನಿಂದಲೇ ಆ ಕಾರ್ಯವು ಆಗುತ್ತಿದ್ದಿಲ್ಲವೋ ಎಂದು ಯಾರಿಗಾದರೂ ಸಂಶಯ ಬರಬಹುದು. ಒಬ್ಬ ಆಚಾರ್ಯನು ಐದು ಜನರಿಗೇಕೆ ಸಾವಿರಾರು ಜನರಿಗೆ ದೀಕ್ಷಾ ಮಾಡಬಹುದು. ಆದರೆ ಒಬ್ಬ ಗುರುವಿನಿಂದಲೇ ಐದು ಜನ ಪಂಚಮರಿಗೆ ದೀಕ್ಷಾದಿ ಸಂಸ್ಕಾರಗಳಾದರೆ ಎಲ್ಲರೂ ಒಬ್ಬ ಗುರುವಿನ ಮಕ್ಕಳಾಗುವದರಿಂದ ಈ ಐದು ಜನ ಪಂಚಮರಲ್ಲಿ ಪರಸ್ಪರ ವಿವಾಹಾದಿ ಕಾರ್ಯಗಳು ನಡೆಯಬಾರದಾಗಿ ಅವರ ವಂಶವು ವೃದ್ಧಿಯಾಗುತ್ತಿದ್ದಿಲ್ಲ. ಅದಕ್ಕಾಗಿ ಐದು ಜನ ಗುರುಗಳು ಬೇರೆ ಬೇರೆಯಾಗಿ ಐದು ಜನ ಪಂಚಮರಿಗೆ ದೀಕ್ಷಾದಿಗಳನ್ನು ಮಾಡುವದಕ್ಕೆ ಅವಶ್ಯವಾಗಿ ಬೇಕಾಗುವದು. ಇದರಿಂದ ಒಬ್ಬ ಗುರುವಿನಪುತ್ರನಾದ ಪಂಚಮನೊಡನೆ ಮತ್ತೊಬ್ಬ ಗುರುವಿನ ಪುತ್ರನಾದ ಇನ್ನೊಬ್ಬ ಪಂಚಮನಿಗೆ ಶರೀರಸಂಬಂಧಾದಿಗಳನ್ನು ಮಾಡಲು ತೊಂದರೆ ಇಲ್ಲದಂತಾಗಿ ಈ ಪಂಚಮರ ವಂಶವು ವೃದ್ಧಿಯನ್ನು ಹೊಂದಿರುವದು.

ಎಲೈ ಪಾರ್ವತಿಯೆ ನನ್ನ ಐದನೆದಾದ ಈಶಾನ ಮುಖದಿಂದ ಪಂಚಾಸ್ಯ ಗಣಪನು ಹುಟ್ಟಿದ್ದರಿಂದ ಆತನು ಪಂಚಮನೆಂದು ಪ್ರಸಿದ್ಧನಾದನು. ಮುಂದೆ ಆತನ ಮಕ್ಕಳಿಗೂ ತಂದೆಯಂತೆ ಪಂಚಮರೆಂದೇ ಕರೆಯಲಿಕ್ಕೆ ಹತ್ತಿದರು.

ನನ್ನ ಎಲ್ಲಾ ಮುಖಗಳಲ್ಲಿ ಈಶಾನ ಮುಖವು ಶ್ರೇಷ್ಠವಾಗಿರುವಂತೆ ಕಾಲ ಕಾಲಕ್ಕೆ ವೀರಶೈವ ಧರ್ಮದಲ್ಲಿ ಸೇರುವ ಸರ್ವ ವರ್ಣದ ನನ್ನ ಭಕ್ತರಲ್ಲಿ ಪಂಚಮ ವಂಶದ ಭಕ್ತರು ಶ್ರೇಷ್ಠರು. ॥ ೪೯ ॥ ಏಕೆಂದರೆ ಎಲೈ ಪ್ರಿಯಳೆ ಈ ಪಂಚಮರು ಗುರುವಿಗೆ ತನುವನ್ನು ಲಿಂಗಕ್ಕೆ (ನನಗೆ) ಮನವನ್ನು ಜಂಗಮಕ್ಕೆ ಧನವನ್ನು ನಿರ್ವಂಚನೆಯಿಂದ ಸಮರ್ಪಿಸುವವರಿರುತ್ತಾರೆ. ॥ ೫೦ ॥ ಆದುದರಿಂದ ನನ್ನ ಭಕ್ತರಲ್ಲಿ

मद्भक्तानां त एवाद्या वीरशैवा इतीरिताः ।
शैवास्तदितरे लोकाः सत्यं सत्यं नगात्मजे ॥ ५१ ॥
पञ्चमा वीरशैवास्ते मन्मतोद्धारहेतवः ।
मदन्यदैवविमुखा मद्भक्ता मत्प्रियाः सदा ॥ ५२ ॥
पञ्चमानां समुत्पत्तिरियं पर्वतनन्दिनि
यथा नदीनां सर्वासां गङ्गा, स्त्रीणां भवान्यहम् । । ५३ ।
पुसां, वाराणसीक्षेत्रं क्षेत्राणां, मणिकर्णिका ।
तीर्थानां, सर्वमन्त्राणां मम पञ्चाक्षरीमनुः । ५४ ।
कैलासः सर्वलोकेषु पादपानां सुरद्रुमः ।
वीरशैवमतं देवि तथा सर्वोत्तमोत्तमम् । ५५ ।

इति श्रीमद्वीरशैवसदाचारसंग्रहे सुप्रभेदागमोक्तानुसारेण पञ्चमोत्पत्तितच्छाखाप्रवरादिकथनन्नाम पचमं प्रकरणं समाप्तम् ॥

---

ಇವರೇ ಪ್ರಥಮ ಭಕ್ತರು. ಉಳಿದವರೆಲ್ಲರೂ ಶೈವರು (ಸಾಮಾನ್ಯ ಭಕ್ತರು) ಎಲೈ ಪಾರ್ವತಿಯೇ ಇದು ನಿಜವಾದ ಸಂಗತಿಯೆಂದು ತಿಳಿ. ॥ ೫೧ ॥ ವೀರಶೈವರಾದ ಆ ಪಂಚಮರು ವೀರಶೈವ ಮತದ ಅಭಿವೃದ್ಧಿಗೆ ಕಾರಣೀಭೂತರಾಗಿರುವರು. ಏಕೆಂದರೆ ಈ ಪಂಚಮರು ನನ್ನ ಹೊರತು ಮತ್ತೊಂದು ದೇವತೆಯನ್ನು ಪೂಜಿಸುವದಿಲ್ಲ. ಶಿವಸರ್ವೋತ್ತಮತ್ವವನ್ನು ಒಳ್ಳೆ ನಿಷ್ಠೆಯಿಂದ ಪಾಲಿಸುತ್ತಾರೆ. ಇವರು ನನಗೆ ಯಾವಾಗಲೂ ಅತ್ಯಂತ ಪ್ರೀತಿಯ ಭಕ್ತರಾಗಿರುವರು. ॥ ೫೨ ॥ ಎಲೈ ಪಾರ್ವತಿಯೆ? ಈ ಪ್ರಕಾರ ಪಂಚಮರ ಉತ್ಪತ್ತಿಯು ಇರುತ್ತದೆ.

ಎಲೈ ದೇವಿಯೇ ಯಾವ ರೀತಿ ಎಲ್ಲಾ ನದಿಗಳಲ್ಲಿ ಗಂಗಾ ನದಿಯು ಶ್ರೇಷ್ಠ. ಎಲ್ಲಾ ಸ್ತ್ರೀಯರಲ್ಲಿ ನೀನು ಶ್ರೇಷ್ಠಳು. ಎಲ್ಲಾ ಪುರುಷರಲ್ಲಿ ನಾನು ಶ್ರೇಷ್ಠನು. ಎಲ್ಲಾ ಕ್ಷೇತ್ರಗಳಲ್ಲಿ ಕಾಶೀ ಕ್ಷೇತ್ರ ಶ್ರೇಷ್ಠವು ಎಲ್ಲಾ ತೀರ್ಥಗಳಲ್ಲಿ ಮಣಿಕರ್ಣಿಕಾ ಶ್ರೇಷ್ಠ. ಎಲ್ಲಾ ಮಂತ್ರಗಳಲ್ಲಿ ಪಂಚಾಕ್ಷರೀ ಮಂತ್ರ ಶ್ರೇಷ್ಠ. ಎಲ್ಲಾ ಲೋಕಗಳಲ್ಲಿ ಕೈಲಾಸ ಲೋಕ ಶ್ರೇಷ್ಠ. ಎಲ್ಲಾ ವೃಕ್ಷಗಳಲ್ಲಿ ಕಲ್ಪವೃಕ್ಷ ಶ್ರೇಷ್ಠ. ಅದೇ ಪ್ರಕಾರವಾಗಿ ಎಲ್ಲಾ ಮತಗಳಲ್ಲಿ ವೀರಶೈವ ಮತವು ಸರ್ವಶ್ರೇಷ್ಠವಾದುದು.

**ಟಿಪ್ಪಣಿ:—** ಪ್ರಚಲಿತ ಕಾಲದಲ್ಲಿ ಮಾಹೇಶ್ವರ ವರ್ಗದಲ್ಲಿ ಅನಾದಿ ಕಾಲ ದಿಂದಲೂ ಇಂದಿನ ವರೆಗೆ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಐದು ಗೋತ್ರಗಳ ಮತ್ತು ಪಡ್ವಿಡಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ, ಪಂಚವರ್ಣ (ಪಂಚವಣ್ಣಿಗೆ) ಎಂಬ ಐದು ಮುಖ್ಯ ಸೂತ್ರಗಳ ಹಾಗು ಪಚ್ಚಕಂಥಾ, ಕುಕ್ಷಕಂಥಾ, ರಾಮಗಿರಿ, ಕಾರ್ಪಾಸಕಂಥಾ, ವ್ಯಾಘ್ರಕಂಥಾ, (ಹುಲಿಕಂತಿಬಗಿ) ಕಂಬಾಳಿ ಮುಂತಾದ ಉಪಸೂತ್ರಗಳ ಹೆಸರುಗಳನ್ನು ಹೇಳುವಂತಹ ಪರಂಪರೆಯು ಅವ್ಯಾಹತ ವಾಗಿ ಬಂದಿರುವದೊ ಆ ಪ್ರಕಾರವಾಗಿ ಭಕ್ತವರ್ಗದವರಲ್ಲಿ— ಮಖಾರಿ, ಕಾಲಾರಿ, ಪುರಾರಿ, ಸ್ಮರಾರಿ ಮತ್ತು ವೇದಾರಿ ಎಂಬ ಮೂಲ ಪುರುಷರಾದ ಪಂಚಮರ ಹೆಸರು ಗಳನ್ನು ಹೇಳಿಕೊಳ್ಳುವಂಥ ಮತ್ತು ಶತಾಂಗ, ಕುಂಜರಾರಿ, ಕೇಶರಾಕ್ಷ, ಮೃಗಾರಿ, ಅಗ್ನಿಭುಕ್, ಜಾಬಾಲ, ಸಹಸ್ರಶೀರ್ಷ, ಪೀತಾಂಗ, ಸುವರ್ಣನಖ ಮುಂತಾದ ಉಪ ಪಂಚಮರ ಹೆಸರುಗಳನ್ನು ಹೇಳಿಕೊಳ್ಳುವಂಥ ಭಕ್ತರು ಬಹುಶಃ ಎಲ್ಲಿಯೂ ನಮ್ಮ ದೃಷ್ಟಿಯಲ್ಲಿ ಕಂಡುಬಂದಿರುವದಿಲ್ಲ. ಎಲ್ಲಿಯಾದರೂ ಇದ್ದರೆ ಅಂಥವರು ತಿಳುಹಿಸಿದಲ್ಲಿ ಪರಮೋಪಕಾರ ಮಾಡಿದಂತಾಗುವದು. ಯಾವುದಾದರೊಂದು ಹೆಸರನ್ನು ಹೇಳಿದರೆ ಪ್ರಯೋಜನವಿಲ್ಲ. ಐದು ಜನ ಮೂಲಪುರುಷರ, ಕೆಲವು ಜನ ಉಪಪುರುಷರ ಹೆಸರಿ ನವರು ಪರಂಪರಾಗತವಾಗಿರುವದನ್ನು ತೋರಿಸಬೇಕು. ಅವರವರ ಶರೀರ ಸಂಬಂಧಾದಿ ಗಳು ಹಾಗೇ ನಡೆಯುತ್ತ ಬಂದಿರಬೇಕು. ಹೀಗಿದ್ದರೆ ನಂಬಬಹುದು. ಯಾವುದೊ ಒಂದು ಹೆಸರನ್ನು ತೋರಿಸಿದರೆ ಪ್ರಯೋಜನವಿಲ್ಲ.

ಹೀಗೆ ಈ ಪರಂಪರೆಯು ಲೋಪವಾಗುವದಕ್ಕೆ ಶ್ರೀ ಬಸವಣ್ಣನವರ ಕಾಲದಲ್ಲಿ ಜೈನ ಧರ್ಮದವರಲ್ಲಿ ಒಂದು ಪಂಗಡವಾದ ಪಂಚಮರೆಂಬವರು ವೀರಶೈವ ಧರ್ಮದಲ್ಲಿ ಸೇರಿದ ಬಳಿಕ, ಆಗಂತುಕರಾದ ಪೂರ್ವೀ ಜೈನ ಧರ್ಮದ ಪಂಚಮ ವೀರಶೈವರಿಗೂ ಆನುವಂಶಿಕರಾದ ಪಂಚಮ ವೀರಶೈವರಿಗೂ ಶ್ರೀ ಬಸವಣ್ಣನವರ ಪ್ರಭಾವದಿಂದ ಶರೀರ ಸಂಬಂಧಾದಿಗಳು ನಡೆಯಲಿಕ್ಕೆ ಹತ್ತಿದುದೇ ಕಾರಣವಾಗಿರಬಹುದೆಂದು ನಮಗೆ ತೋರುತ್ತದೆ. ಇದರ ಯಥಾರ್ಥ ನಿರ್ಣಯವನ್ನು ಇತಿಹಾಸ ತಜ್ಞರು ಮಾಡಬೇಕು.

I.ಗ.D ?

ವೀರಶೈವ ಸದಾಚಾರ ಸಂಗ್ರಹದಲ್ಲಿ ಸುಪ್ರಭೇದಾಗಮಾನುಸಾರವಾಗಿ ಪಂಚಮ ರಾದ ಭಕ್ತವರ್ಗದವರ ಉತ್ಪತ್ತಿ ಮೊದಲಾದ ಯಾವತ್ತು ವಿಷಯವನ್ನು ವಿವರಿಸುವ ಪಂಚಮಾಧಿಕರಣದ, ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

———

# ॥ अथ षष्टप्रकरणम् ॥

॥ वीरशैवानंदचंद्रिकायाम् ॥ चतुर्दशप्रकरणे ॥

उक्ता वर्णाश्रमाचाराः प्राकृताः श्रुतिसंमताः ।
अतिवर्णाश्रमाचारा ये तु श्रुत्यंतगोचराः ॥ १ ॥
तानहं श्रोतुमिच्छामि त्वत्तस्तत्वविदां वर ।
शृणु त्वं निष्कलंकेन मनसा सावधानतः ॥ २ ॥
अमायैर्विबुधैः श्राव्यान्बसव क्षोणिपालक ।
ब्रवीम्यत्याश्रमाचारान्सर्वश्रुत्यन्तगोचरान् ॥ ३ ॥
अतिवर्णाश्रमाः पूर्वे नंद्यादिप्रमथाः स्मृताः ।
तत्संततिसमायाता वीरशैवा इति श्रुताः ॥ ४ ॥
तत्संततीनां विस्तारास्तद्धर्मा मुक्तिदायिनः ।
श्रुत्यन्तप्रतिपन्नास्त इति शैवागमोदितम् ॥ ५ ॥

---

ವೀರಶೈವಾನಂದಚಂದ್ರಿಕೆಯಲ್ಲಿ ಹದಿನಾಲ್ಕನೆಯ ಪ್ರಕರಣದಲ್ಲಿ ಶ್ರುತಿಗಳಿಗೆ ಮಾನ್ಯಗಳಾದ ಪ್ರಾಕೃತ ವರ್ಣಾಶ್ರಮಾದಿ ಆಚಾರಗಳು ಹೇಳಲ್ಪಟ್ಟಿರುವವು. ಯಾವು ಶ್ರುತಿಗಳ ಅಂತಿಮ ಭಾಗಗಳಾದ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ, ಅತಿವರ್ಣಾಶ್ರಮಾಚಾರಗಳಿರುತ್ತವೋ ॥೧॥ ಅವುಗಳನ್ನು ನಾನು ಎಲೈ ತತ್ವಜ್ಞಾನಿಗಳಲ್ಲಿ ಶ್ರೇಷ್ಠನಾದ ಪೂಜ್ಯನೆ ನಿಮ್ಮಿಂದ ಕೇಳಬೇಕೆಂಬ ಇಚ್ಛೆಯುಳ್ಳವನಾಗಿರುವೆನು. ಭೂಪಾಲನಾದ ಎಲೈ ಬಸವರಾಜನೇ ಕಲಂಕರಹಿತವಾದ (ನಿಷ್ಕಪಟವಾದ) ಮನಸ್ಸಿನಿಂದ ಸಾವಧಾನವಾಗಿ ಕೇಳಿಕೋ ॥೨॥ ಕಪಟರಹಿತರಾದ ಪಂಡಿತರಿಂದ ಕೇಳಲಿಕ್ಕೆ ಯೋಗ್ಯಗಳಾದ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟ, ಅತಿವರ್ಣಾಶ್ರಮಗಳನ್ನು ಹೇಳುತ್ತೇನೆ ಕೇಳು. ॥೩॥ ಪುರಾತನರಾದ ನಂದಿ ಮೊದಲಾದ ಪ್ರಮಥರು ಅತಿವರ್ಣಾಶ್ರಮಿಗಳಾಗಿದ್ದರು. ಅವರ ಸಂತತಿಯವರೇ ವೀರಶೈವರೆಂದು ಪ್ರಸಿದ್ಧರಾಗಿರುವರು ॥೪॥ ಅವರ ಸಂತತಿಯು ವಿಸ್ತಾರವಾಯಿತು. ನಂದಿ ಮೊದಲಾದವರು ಯಾವ ಧರ್ಮಗಳನ್ನು ಅನುಸರಿಸುತ್ತಿದ್ದರೋ ಆ ಧರ್ಮಗಳು ಮುಕ್ತಿಯನ್ನು ಕೊಡತಕ್ಕಂಥವುಗಳೂ ಮತ್ತು ಉಪನಿಷತ್ ಪ್ರತಿಪಾದಿತಗಳೂ ಆಗಿರುವವೆಂದು ಶೈವಾಗಮಗಳು ಹೇಳುತ್ತವೆ. ॥೫॥

ब्रह्मचारी गृहस्थश्च वानप्रस्थश्च भिक्षुकः ।
अतिवर्णाश्रमी चेति क्रमाच्छ्रेष्ठा विचक्षण ॥ ६ ॥

गृहस्थोऽपि वनस्थस्य यतेरप्यंबुजेक्षण ।
विद्योत्कर्षबलेनैव गुरुर्भवति नान्यथा ॥ ७ ॥

वानप्रस्थाश्रमस्थोऽपि तथा सन्यासिनो हरे ।
विद्योत्कर्षबलेनैव गुरुर्भवति नान्यथा ॥ ८ ॥

अतिवर्णाश्रमी प्रोक्तो गुरुः सर्वाधिकारिणाम् ।
न तस्मादधिकः कोऽपि यथाहं पुरुषोत्तम ॥ ९ ॥

अतिवर्णाश्रमी साक्षाद्गुरूणां गुरुरुच्यते ।
यस्य वर्णाश्रमाचारो गलितः स्वात्मदर्शनात् ॥ १० ॥

---

ಎಲೈ ಚತುರನೆ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಭಿಕ್ಷುಕ, (ಸನ್ಯಾಸಿ) ಮತ್ತು ಅತಿವರ್ಣಾಶ್ರಮಿ ಈ ಐದು ಜನರಲ್ಲಿ ಕ್ರಮವಾಗಿ ಉತ್ತರೋತ್ತರ ಶ್ರೇಷ್ಠರಾಗುತ್ತಾರೆ. ಬ್ರಹ್ಮಚಾರಿಗಿಂತ ಗೃಹಸ್ಥನು ಶ್ರೇಷ್ಠನು. ಗೃಹಸ್ಥನಿಗಿಂತ ವಾನಪ್ರಸ್ಥನು ಶ್ರೇಷ್ಠನು. ವಾನಪ್ರಸ್ಥನಿಗಿಂತ ಸನ್ಯಾಸಿಯು ಶ್ರೇಷ್ಠ. ಈ ಸನ್ಯಾಸಿಗಿಂತಲೂ ಅತಿವರ್ಣಾಶ್ರಮಿಯು ಶ್ರೇಷ್ಠನು. ॥ ೬ ॥ ಗೃಹಸ್ಥಾಶ್ರಮಿಯು ವಿಶೇಷ ಜ್ಞಾನವುಳ್ಳವನಾಗಿದ್ದರೆ ಅರಣ್ಯದಲ್ಲಿ ವಾಸವಾಡಿ ತಪಸ್ಸನ್ನು ಮಾಡುವಂಥ ವಾನಪ್ರಸ್ಥನಿಗೂ ಸಹ ಗುರುವಾಗುವನು. (ಜ್ಞಾನವಿಲ್ಲದಿದ್ದರೆ ಆಗಲಾರನು) ॥ ೭ ॥

ಎಲೈ ಕಮಲನಯನನೇ ವಾನಪ್ರಸ್ಥಾಶ್ರಮಿಯೂ ಸಹ ಸನ್ಯಾಸಾಶ್ರಮಿಗೂ ಕೂಡ ವಿಶೇಷ ಜ್ಞಾನಬಲದಿಂದ ಗುರುವಾಗುವನು. ಜ್ಞಾನವಿಲ್ಲದಿದ್ದರೆ ಆಗಲಾರನು ॥ ೮ ॥ ಎಲೈ ಪುರುಷೋತ್ತಮನೆ ಅತಿವರ್ಣಾಶ್ರಮಿಯು ನಾಲ್ಕೂ ಆಶ್ರಮವಾಸಿಗಳಿಗೂ ಗುರುವಾಗಿರುವನು. ನಾನು ಹೇಗೆ ಸರ್ವಶ್ರೇಷ್ಠನಾಗಿರುವೆನೊ ಅದರಂತೆ ಅತಿವರ್ಣಾಶ್ರಮಿಯು ಸರ್ವರಿಗೂ ಶ್ರೇಷ್ಠನಾಗಿರುವನು. ಅವನಿಗಿಂತಲೂ ಹೆಚ್ಚಿನವರು ಯಾರೂ ಇರುವದಿಲ್ಲ. ॥೯॥ ಈ ಅತಿವರ್ಣಾಶ್ರಮಿಯು ಪ್ರತ್ಯಕ್ಷ ಗುರುಗಳಿಗೂ ಗುರುವಾಗಿರುವನು. ಏಕೆಂದರೆ ಯಾವಾತನಿಗೆ ಸ್ವಸ್ವರೂಪಸಾಕ್ಷಾತ್ಕಾರವಾಗುವದೊ ಆತನಿಗೆ ವರ್ಣ ಮತ್ತು ಆಶ್ರಮಗಳ ಆಚಾರವು ವಿಲಯವಾಗುವದು. ॥೧೦॥ ಯಾವನಿಗೆ

योो वर्णानाश्रमान्सर्वानतीत्य स्वात्मनि स्थितः
सोऽतिवर्णाश्रमी प्रोक्तः सर्ववेदार्थवादिभिः ॥ ११ ॥
पंचाक्षरी पराविद्या शिवज्योतिरवाप्तये।
ॐकारः प्रणवः सूक्ष्मोविद्यानां वीजमुत्तमम्। ॥ १२ ॥
तस्मादशेषतत्वानि प्रणवेन विशोधयेत्।
सितेनोध्दूलयेद्देहमग्निरित्यादिसप्तभिः ॥ १३ ॥
त्रियायुषं जमदग्निरिति कुर्यात्त्रिपुंड्रकम्।
योहि पशुः पशुत्वं च व्रतेनानेन संत्यजेत् ॥ १४ ॥

---

ಪರಿಪೂರ್ಣ ಜ್ಞಾನೋದಯವಾಗಿ ಕೇವಲ ಪರಶಿವ ಸ್ವರೂಪದಲ್ಲಿ ಲೀನವಾದ ಬಳಿಕ ನಾನು ಇಂಥ ವರ್ಣದವನು ಇಂಥ ಆಶ್ರಮದವನು ಅವುಗಳ ಆಚಾರವು ಈ ರೀತಿ ಇರುತ್ತದೆ ಎಂಬ ಭಾವವು ತನ್ನಿಂದ ತಾನೇ ಹೊರಟು ಹೋಗುವದೊ, ಯಾವನು ಎಲ್ಲಾ ವರ್ಣಗಳನ್ನು ಎಲ್ಲಾ ಆಶ್ರಮಗಳನ್ನು ಅತಿಕ್ರಮಿಸಿ ತನ್ನ ಸ್ವ ಸ್ವರೂಪದಲ್ಲಿ ಲೀನನಾಗಿರುವನೋ ಅವನೇ ಎಲ್ಲಾ ವೇದಗಳ ಅರ್ಥವನ್ನು ಬಲ್ಲಂಥ ಜ್ಞಾನಿಗಳಿಂದ ಅತಿವರ್ಣಾಶ್ರಮಿ ಎಂದು ಹೇಳಲ್ಪಟ್ಟಿರುವನು ॥ ೧೧ ॥ ಪರಶಿವಸ್ವರೂಪವನ್ನು ದೊರಕಿಸಿ ಕೊಡುವದಕ್ಕೆ ಪಂಚಾಕ್ಷರೀ ಮಹಾಮಂತ್ರವೇ ಶ್ರೇಷ್ಠವಾದ ವಿದ್ಯೆಯಾಗಿರುತ್ತದೆ. ಸೂಕ್ಷ್ಮವಾದ ಓಂಕಾರ ಪ್ರಣವವು ಎಲ್ಲಾ ವಿದ್ಯೆಗಳಿಗೂ ಮೂಲ ಬೀಜವಾಗಿರುವದು ॥ ೧೨ ॥ ಆದಕಾರಣ ಎಲ್ಲಾ ತತ್ವಗಳನ್ನು ಪ್ರಣವದಿಂದ ಶುದ್ಧಿ ಮಾಡಿಕೊಳ್ಳಬೇಕು. "ಅಗ್ನಿರಿತಿಭಸ್ಮ, ವಾಯುರಿತಿಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮೇತಿಭಸ್ಮ, ಭಸ್ಮೇತಿಭಸ್ಮ, ಸರ್ವಗ್ಂ ಹವಾಇದಂಭಸ್ಮ, ಮನ ಇತ್ತೇತಾನಿ ಚಕ್ಷೂಗ್ಂಸಿ ಭಸ್ಮಾನಿ" ಎಂಬ ಮಂತ್ರದಿಂದ ಅಭಿಮಂತ್ರಿಸಿ ಸರ್ವಾಂಗಕ್ಕೆ ಊದ್ಧೂಳನವನ್ನು ಮಾಡಿಕೊಳ್ಳಬೇಕು. ॥ ೧೩ ॥

"ತ್ರಿಯಾಯುಷಂಜಮದಗ್ನೇಃ ಕಸ್ಯಪಸ್ಯತ್ರಿಯಾಯುಷಂ ಅಗಸ್ತ್ಯಸ್ಯ ತ್ರಿಯಾಯುಷಂ ಯದ್ದೇವಾನಾಂ ತ್ರಿಯಾಯುಷಂ ತನ್ಮೇ ಅಸ್ತು ತ್ರಿಯಾಯುಷಂ" ಎಂಬ ಮಂತ್ರದಿಂದ ತ್ರಿಪುಂಡ್ರ ಧಾರಣವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡುವ ಈ ವ್ರತದಿಂದ ಪಶುವಿನಲ್ಲಿರುವ ಪಶುತ್ವವೂ ಕೂಡ ನಷ್ಟವಾಗುವದು. ಮನುಷ್ಯರದು ಏನು ಹೇಳುವದು ॥ ೧೪ ॥ ಶಿರಸ್ಸು, ಲಲಾಟ, (ಹಣೆ) ಕಂಠ, ಕಿವಿ, ಬಾಹು,

वृत्तम् । शिरो ललाटश्रुतिकण्ठबाहूरुनाभिदेशेषु षडंगुलानि ।
विचिंतयेत्स्वात्मनि शंभुमीशं शिवं वरं शान्तमुमासहायम् ।
भस्मांगमाविष्कृतसर्वदीप्तमत्याश्रमाचारमिमं वदंति ॥ १५ ॥

ॐकारबोधितं तत्वं शाश्वतं शिवमुच्यते ।
अव्यक्ताप्रकृतौलीनं परंज्योतिरनुत्तमम् ॥ १६ ॥

तदन्तः परमं तत्वमनाधारं निरंजनम् ।
ध्यायीत तन्मनो नित्यमेकरूपं महेश्वरम् ॥ १७ ॥

विशोध्य सर्वतत्वानि प्रणवेनाथवा पुनः ।
संस्थाप्य मयि चात्मानं निर्मले परमे पदे ॥ १८ ॥

प्लावयेदात्मनो देहं तेनैव ज्ञानवारिणा ।
मदात्मा मन्मयो भस्म गृहीत्वा ह्यग्निहोत्रजम् ॥ १९ ॥

---

ಊರು, (ತೊಡೆ) ನಾಭಿ ಮುಂತಾದ ಅಂಗಗಳಲ್ಲಿ ಆರಂಗುಲ ಪ್ರಮಾಣ ಉದ್ದವಾಗಿ ಭಸ್ಮತ್ರಿಪುಂಡ್ರವನ್ನು ಧರಿಸಬೇಕು. ಮತ್ತು ತನ್ನ ಅಂತಃಕರಣದಲ್ಲಿ ಉಮಾರೂಪಶಕ್ತಿ ವಿಶಿಷ್ಟನಾದ ಸರ್ವಾಂಗಕ್ಕೆ ಭಸ್ಮವನ್ನು ಧರಿಸಿದಂತಹ ಝಗಝಗ ಹೊಳೆಯುತ್ತಿರುವ ಶರೀರಕಾಂತಿಯುಳ್ಳ ಈಶ, ಶಂಭು, ಶಿವ ಇತ್ಯಾದಿ ನಾಮವುಳ್ಳ ಶಾಂತಮೂರ್ತಿಯಾದ ಪರಮಾತ್ಮನನ್ನು ಧ್ಯಾನ ಮಾಡುತ್ತಿರಬೇಕು. ಈ ಪ್ರಕಾರ ಮಾಡುವದಕ್ಕೆ ಅತ್ಯಾಶ್ರಮಾಚಾರವೆನ್ನುತ್ತಾರೆ ॥ ೧೫ ॥ ಓಂಕಾರದಿಂದ ಯಾವ ತತ್ವದ ಬೋಧ ವಾಗುವದೋ, ಯಾವದು ನಾಶರಹಿತವಾದುದು ಅವ್ಯಕ್ತ (ಇಂದ್ರಿಯಗಳಿಗೆ ಅಗೋಚರ) ವಾದುದು ಪ್ರಕೃತಿಯಲ್ಲಿ ಲೀನವಾಗದೆ ಇದ್ದುದು ಆಗಿರುವದೋ, ಯಾವುದಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ವಸ್ತುವು ಇರುವದಿಲ್ಲವೋ ಅಂಥ ಪರಂಜ್ಯೋತಿ ಸ್ವರೂಪವೇ ಶಿವತತ್ವವೆಂದು ಹೇಳಬೇಕಾಗುತ್ತದೆ. ॥ ೧೬ ॥ ಅಂಥ ಆಧಾರ ರಹಿತವಾದ, ನಿತ್ಯವಾದ, ಏಕರೂಪವಾದ ಮಹೇಶ್ವರ (ಎಲ್ಲವುಗಳ ಮೇಲೆಯೂ ತನ್ನ ಸತ್ತೆಯನ್ನು ನಡೆಸುತ್ತಿರುವಂಥ) ನಿರಂಜನ ನಿರ್ಲೇಪವಾದ ಶಿವತತ್ವವನ್ನು ಅಂತಃ ಕರಣವಾದ ಮನಸ್ಸು ಸದಾ ಧ್ಯಾನಿಸುತ್ತಿರಬೇಕು. ॥ ೧೭ ॥ ಅಥವಾ ಓಂಕಾರದಿಂದ ಪುನಃ ಎಲ್ಲಾ ತತ್ವಗಳನ್ನು ಶೋಧ ಮಾಡಿ ನಿರ್ಮಲ ಮತ್ತು ಪರಮಪದವಾದ ನನ್ನಲ್ಲಿ ಆತ್ಮನನ್ನು ಸ್ಥಿರಗೊಳಿಸಿ ॥ ೧೮ ॥ ಅಂಥಾ ಜ್ಞಾನರೂಪವಾದ ನೀರಿನಿಂದ ಆತ್ಮನ ದೇಹವನ್ನು ತೊಳೆದು (ಅಂಥಾ ಜ್ಞಾನದಲ್ಲಿ ಮಗ್ನನಾಗಿ) ಅರ್ಥಾತ್ ನನ್ನಲ್ಲಿ

तेनोध्दूल्य च सर्वांगमग्निरित्यादिमंत्रतः ।
चिंतयेदात्मनीशानं परंज्योतिः स्वरूपिणम् ॥ २० ॥

एष पाशुपतो योगः पशुपाशविमुक्तये ।
सर्ववेदान्तसारोऽयमत्याश्रम इति श्रुतिः ॥ २१ ॥

उध्दूलनं त्रिपुंड्रं च ज्ञानांगत्वेन केवलम् ।
आमनन्ति मुनिश्रेष्ठा अथर्वशिरसि स्थितम् ॥ २२ ॥

व्रतं पाशुपतं येन सम्यगाचरितं बुधाः ।
तस्य ज्ञानं विजायेत तेन पाशविमोचनम् ॥ २३ ॥

उध्दूलनं त्रिपुंड्र च ज्ञानांगत्वेन केवलम् ।
आमनंति मुनिश्रेष्ठाः श्वेताश्वतरशाखिनः ॥ २४ ॥

---

ಆತ್ಮನನ್ನು ಸ್ಥಿರಗೊಳಿಸಿ, ನನ್ನ ಸ್ವರೂಪನಾಗಿ ಪಂಚ ಬ್ರಹ್ಮ ಮಂತ್ರಪೂರ್ವಕವಾಗಿ ಅಗ್ನಿಯಿಂದ ದಹಿಸಲ್ಪಟ್ಟ ಭಸ್ಮವನ್ನು ತೆಗೆದುಕೊಂಡು "ಅಗ್ನಿರಿತಿಭಸ್ಮ, ವಾಯುರಿತಿ ಭಸ್ಮ, ಜಲಮಿತಿಭಸ್ಮ, ಸ್ಥಲಮಿತಿಭಸ್ಮ, ವ್ಯೋಮೇತಿಭಸ್ಮ, ಭಸ್ಮೇತಿಭಸ್ಮ, ಸರ್ವಗ್ಂ ಹವಾಇದಂಭಸ್ಮ, ಮನ ಇತ್ಯೇತಾನಿ ಚಕ್ಷೂಗ್ಂಸಿ ಭಸ್ಮಾನಿ ಎಂಬ ಮಂತ್ರದಿಂದ ಸರ್ವಾಂಗವನ್ನು ಊದ್ಧೂಳನ ಮಾಡಿಕೊಂಡು ಅಂತಃಕರಣದಲ್ಲಿ ಪರಂಜ್ಯೋತಿ ಸ್ವರೂಪನಾದ ಪರಶಿವನನ್ನು ಧ್ಯಾನ ಮಾಡುವದು. ॥ ೨೦ ॥ ಹೀಗೆ ಮಾಡುವದಕ್ಕೆ ಪಾಶುಪತ ಯೋಗವೆನ್ನುವರು. ಇದು ಪಶು ಪಾಶಗಳ ಬಿಡುಗಡೆಗೆ ಕಾರಣವಾಗಿರುವದು. ಹಾಗು ಎಲ್ಲಾ ಉಪನಿಷತ್ತುಗಳ ಸಾರವಾಗಿದೆ. ಇದೇ ಅತ್ಯಾಶ್ರಮ ಎಂದು ಶ್ರುತಿಗಳು ಸಾರುತ್ತವೆ. ॥ ೨೧ ॥ ಉದ್ಧೂಳನವನ್ನು ಮತ್ತು ತ್ರಿಪುಂಡ್ರ ಧಾರಣವನ್ನು ಕೇವಲ ಜ್ಞಾನಾಂಗವನ್ನಾಗಿ ದೊಡ್ಡ ದೊಡ್ಡ ಮುನಿಗಳು ಅಥರ್ವಶಿರಸ್ಸು ಎಂಬ ಉಪನಿಷತ್ತಿನಲ್ಲಿ ಹೇಳಿರುವರು. ॥ ೨೨ ॥ ಇದರಂತೆ ಎಲೈ ಜ್ಞಾನಿಗಳೇ ಈ ಪಾಶುಪತ ವ್ರತವನ್ನು ಯಾವನು ಚನ್ನಾಗಿ ಆಚರಿಸುವನೋ ಅವನ ಜ್ಞಾನ ವೃದ್ಧಿಹೊಂದುವದು ॥ ಆ ಜ್ಞಾನದಿಂದ ಅವನು ಸಂಸಾರರೂಪ ಪಾಶವನ್ನು ಕಳೆದುಕೊಳ್ಳುವನು. ॥ ೨೩ ॥

ಇದರಂತೆ ಶ್ವೇತಾಶ್ವತರ ಶಾಖಾವಲಂಬಿಗಳಾದ ಮಹರ್ಷಿಗಳು ಭಸ್ಮೋದ್ಧೂಳನವನ್ನು ಮತ್ತು ತ್ರಿಪುಂಡ್ರಧಾರಣವನ್ನು ಕೇವಲ ಜ್ಞಾನಾಂಗವನ್ನಾಗಿ ಮಾನಿಸು

अयमत्याश्रमो धर्मो यैः समाचरितो मुदा ।
तेषामेव शिवज्ञानं संसारोच्छेदकारणम् ॥ २५ ॥
लिंगं शिवो भवेत्क्षेत्रमंगं संयोगमाश्रयः ।
तस्माल्लिंगांगसंयुक्तो योऽपि सोऽत्याश्रमी भवेत् ॥ २६ ॥
एतद्वेदशिरोनिष्ठाः प्राहुः पाशुपतं मुने ।
एतच्छिरोव्रतं प्राहुः केचिदत्याश्रमं बुधाः ।
केचित्तद्व्रतमित्याहुः केचिच्छांभवमैश्वरम् ॥ २७ ॥
वृत्तम् । ब्रह्माण्डतो निर्गमनाभ्युपायो नास्त्येव शास्त्रेष्वखिलेषु भूप ।
व्रतेन वा पाशुपतेन मुक्तिर्मृतेन काश्यामपि वाप्यतेऽत्र ॥ २८ ॥
उत्पत्तिमेषां भूपाल वदामि शृणु सांप्रतम् ॥ २९ ॥

---

ತ್ತಾ.ರಿ. ॥ ೨೫ ॥ ಇಂತಹ ಅತ್ಯಾಶ್ರಮ ಧರ್ಮವು ಯಾರಿಂದ ಸಂತೋಷಪೂರ್ವಕ ವಾಗಿ ಆಚರಿಸಲ್ಪಡುವದೋ ಅವರಿಗೇನೇ ಸಂಸಾರ ನಾಶಕ್ಕೆ ಕಾರಣೀಭೂತ ವಾದ ಶಿವಜ್ಞಾನವು ಉಂಟಾಗುವದು. ॥ ೨೬ ॥ ಲಿಂಗವೆಂದರೆ ಶಿವನು. ಅಂಗವೆಂದರೆ ಆ ಶಿವನ ಕ್ಷೇತ್ರ. ಈ ಲಿಂಗಾಂಗಗಳ ಸಂಯೋಗವೇ ಆಶ್ರಯವೆನಿಸಿಕೊಳ್ಳುವದು. ಆದುದರಿಂದ ಯಾವನು ಲಿಂಗಾಂಗಸಂಯೋಗವುಳ್ಳವನಾಗಿರುವನೋ ಅವನು ಅತ್ಯಾಶ್ರಮಿ ಎನಿಸಿಕೊಳ್ಳುವನು. ॥ ೨೬ ॥ ಉಪನಿಷತ್ತತ್ವವನ್ನು ತಿಳಿದುಕೊಂಡ ಜ್ಞಾನಿಗಳಲ್ಲಿ ಇದನ್ನು ಪಾಶುಪತವೆಂದು ಕೆಲವರು, ಶಿರೋವ್ರತವೆಂದು ಕೆಲವರು, ಅತ್ಯಾಶ್ರಮವೆಂದು ಕೆಲವರು, ಶಾಂಭವವ್ರತ (ಈಶ್ವರಸಂಬಂಧಿವ್ರತ) ವೆಂದು ಕೆಲವರು ಹೇಳುವರು. ॥ ೨೭ ॥

ಎಲೈ ರಾಜನೆ ಬ್ರಹ್ಮಾಂಡರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಿ ಹೊರಟು ಹೋಗುವ ವಿಚಾರವು ಸಕಲ ಶಾಸ್ತ್ರಗಳಲ್ಲಿ ಬೇರೊಂದಿರುವದಿಲ್ಲ. ಕೇವಲ ಪಾಶುಪತ ವ್ರತದಿಂದ ಅಥವಾ ಕಾಶಿಯಲ್ಲಿ ಮರಣ ಹೊಂದುವದರಿಂದ ಮುಕ್ತಿಯನ್ನು ಮಾನವನು ಹೊಂದುವನು. ॥ ೨೮ ॥ ಎಲೈ ರಾಜನೇ ಅತ್ಯಾಶ್ರಮಿಗಳೆನಿಸಿಕೊಂಡ ಇವರ ಉತ್ಪತ್ತಿಯನ್ನು ಈಗ ಹೇಳುವೆನು ಕೇಳು ॥ ೨೯ ॥ ವಿಜಯತಂತ್ರದಲ್ಲಿ

विजयतंत्रे । अस्ति सच्चित्सुखाकारमलक्षणपदास्पदम् ।
निर्विकल्पं निराकारं निरस्ताशेषवैषमम् ॥ ३० ॥
परिच्छेदकथाशून्यं प्रपंचातीतवैभवम् ।
प्रत्यक्षादिप्रमाणानामगोचरपदेस्थितम् ॥ ३१ ॥
स्वप्रकाशविराजन्तमनामयमनूपमम् ।
सर्वज्ञं सर्वगं शान्तं सर्वशक्तिनिरंकुशम् ॥ ३२ ॥
शिवरुद्रमहादेवभवादिपदसंज्ञकम् ।
अद्वितीयमनिर्देश्यं परं ब्रह्म सनातनम् ॥ ३३ ॥
अप्रलीनमभूत्पूर्वं चेतनाचेतनात्मकम् ।
स्वात्मलीनं जगत्कार्यं स्वप्रकाशं तदद्भुतम् ॥ ३४ ॥
शिवाभिधं परं ब्रह्म जगन्निर्मातुमिच्छया ।
स्वरूपमादधे किंचित्सुखस्फूर्तिविजृम्भितम् ॥ ३५ ॥

---

ಯಾವದು ಸತ್-ಚಿತ್-ಆನಂದ ಸ್ವರೂಪವಾಗಿರುವದೊ, ಯಾವುದರಲ್ಲಿ ಗುರ್ತಿಸ ಲಿಕ್ಕೆ ಯಾವ ವಿಧವಾದ ಚಿಹ್ನವೂ ಇರುವದಿಲ್ಲವೋ, ಯಾವದು ವಿಕಲ್ಪರಹಿತ ಮತ್ತು ನಿರಾಕಾರವಾಗಿದ್ದು ಯಾವ ವಿಧವಾದ ವೈಷಮ್ಯ (ಉಚ್ಚನೀಚ) ಭಾವರಹಿತ ವಾಗಿರುವದೋ ॥ ೩೦ ॥ ಯಾವುದರಲ್ಲಿ ಭೇದಾಭೇದದ ಸುದ್ದಿಯು ಇರುವದಿಲ್ಲವೋ ಪ್ರಪಂಚವನ್ನು ಮೀರಿದ ವೈಭವವುಳ್ಳದ್ದು ಪ್ರತ್ಯಕ್ಷಾನುಮಾನಾದಿ ಪ್ರಮಾಣಗಳಿಗೆ ಅಗೋಚರವಾದುದೋ ಸ್ವಪ್ರಕಾಶರೂಪವಾದುದೂ ನಿರ್ಲೇಪ ಮತ್ತು ಉಪಮಾನ ರಹಿತವಾದುದೂ ಸರ್ವವನ್ನು ತಿಳಿದಂಥಾದ್ದು ಎಲ್ಲವುಗಳಲ್ಲಿ ವ್ಯಾಪಿಸಿದಂಥ ಶಾಂತ ವಾದಂಥಾ ಎಲ್ಲ ವಿಧವಾದ ಶಕ್ತಿಯುಳ್ಳಂಥ ಮತ್ತು ಸ್ವತಂತ್ರವಾದಂಥ ॥ ೩೨ ॥ ಯಾವದು ಶಿವ, ರುದ್ರ, ಮಹಾದೇವ, ಭವ ಇತ್ಯಾದಿ ಸಂಜ್ಞೆಯುಳ್ಳದ್ದಾಗಿರುವದೊ, ಅದ್ವಿತೀಯ ತನಗಿಂತಲೂ ಭಿನ್ನವಾದ ಮತ್ತೊಂದು ವಸ್ತುವಿಲ್ಲದಂಥ, ಹೀಗೆ ಇದೆ ಎಂದು ತೋರಿಸಲಿಕ್ಕೆ ಬಾರದಂಥ ಸನಾತನವಾದ ಪರಬ್ರಹ್ಮವು ನಾಶರಹಿತವಾದದ್ದು ಚೇತನ ಮತ್ತು ಅಚೇತನ ಇವುಗಳಲ್ಲಿ ಪರಿಪೂರ್ಣವಾದದ್ದು ತನ್ನಲ್ಲಿ ಅಡಗಿದ ಜಗದ್ರೂಪ ಕಾರ್ಯವುಳ್ಳದ್ದು, ಸ್ವಯಂ ಪ್ರಕಾಶರೂಪವಾದದ್ದು ಆಶ್ಚರ್ಯಕರ ವಾದದ್ದು ಆದ ಶಿವನೆಂಬ ಹೆಸರುಳ್ಳ, ಯಾವ ಪರಬ್ರಹ್ಮವಿರುವದೊ ಅದು ಜಗತ್ತನ್ನು ನಿರ್ಮಾಣ ಮಾಡಬೇಕೆಂಬ ಇಚ್ಛೆಯಿಂದ ಕಿಂಚಿದಾನಂದ ಸ್ಫೂರ್ತಿಯನ್ನು ಪ್ರಕಾಶ ಪಡಿಸುವಂಥ ಒಂದು ಬೇರೆ ಸ್ವರೂಪವನ್ನು ಹೊಂದಿತು. ॥ ೩೫ ॥

निरस्तदोषसंबंधं निरुपाधिकमव्ययम् ।
दिव्यमप्राकृतं नित्यं नीलकण्ठं त्रिलोचनम् ॥ ३६ ॥
चंद्रार्धशेखरं शुद्धं शुद्धस्फटिकसन्निभम् ।
शुद्धमुक्ताफलाभासमुपास्यं गुणमूर्तिभिः ॥ ३७ ॥
विशुद्धज्ञानकरणं विषयः सर्वयोगिनाम् ।
कोटिसूर्यप्रतीकाशं चंद्रकोटिसमप्रभम् ।
अप्राकृतगुणाधारमनन्तमहिमास्पदम् ॥ ३८ ॥
तदीया परमा शक्तिः सच्चिदानन्दलक्षणा ।
समस्तलोकनिर्माणसमवायस्वरूपिणी ॥ ३९ ॥
तदिच्छयाऽभवत्साक्षात्तत्स्वरूपानुकारिणी ।
स शंभुर्भगवान् देवः सर्वज्ञः सर्वशक्तिमान् ॥ ४० ॥

---

ಮೂಲ ಪರಶಿವನಿಂದ ಭಿನ್ನವಾದ ಆ ಸ್ವರೂಪವು ಎಂಥಾದ್ದೆಂದರೆ ಯಾವ ವಿಧವಾದ ದೋಷದ ಸಂಪರ್ಕವಿಲ್ಲದಂಥ ಉಪಾಧಿರಹಿತವಾದ, ನಾಶರಹಿತವಾದ, ದಿವ್ಯ, ಅಸಾಮಾನ್ಯವಾದ, ನಿತ್ಯವಾದ ಕಪ್ಪು ಕಂಠವುಳ್ಳ ಮೂರು ಕಣ್ಣುಗಳುಳ್ಳ ॥೩೬॥ ಅರ್ಧಚಂದ್ರನನ್ನು ಶಿರೋಭೂಷಣವಾಗಿ ಮಾಡಿಕೊಂಡ, ಪರಿಶುದ್ಧವಾದ, ಸ್ವಚ್ಛವಾದ ಸ್ಫಟಿಕಕ್ಕೆ ಸಮಾನವಾದ, ಶುಭ್ರವಾದ ಮುತ್ತುಗಳಿಗೆ ಸಮಾನವಾದ ಕಾಂತಿಯುಳ್ಳ ಗುಣವಂತರಿಂದ ಉಪಾಸನಾ ಮಾಡಲಿಕ್ಕೆ ಯೋಗ್ಯವಾದ ॥ ೩೭ ॥ ಪರಿಶುದ್ಧವಾದ ಜ್ಞಾನವನ್ನುಂಟು ಮಾಡುವಂಥ ಸಮಸ್ತ ಯೋಗಿಗಳಿಗೆ ಗೋಚರವಾದ, ಕೋಟಿ ಸೂರ್ಯರಿಗೆ ಸಮಾನವಾದ ಕೋಟಿ ಚಂದ್ರರಿಗೆ ಸದೃಶವಾದ ಪ್ರಕಾಶವುಳ್ಳ ಅಲೌಕಿಕ ಗುಣಗಳಿಗೆ ಆಗರವಾದ ಅಸಂಖ್ಯಾಕ ಪವಾಡಗಳಿಗೆ ಸ್ಥಾನವಾದ ಮಹಾದೇವನೆಂಬ ಸ್ವರೂಪವನ್ನು ಹೊಂದಿತು. ॥ ೩೮ ॥

ಈ ಮಹಾದೇವನಲ್ಲಿ ಶ್ರೇಷ್ಠವಾದ ಶಕ್ತಿಯು ಇರುತ್ತದೆ. ಅದು ಆ ಮಹಾದೇವನ ಇಚ್ಛಾನುಸಾರವಾಗಿ ತತ್ಸ್ವರೂಪವನ್ನು ಅನುಕರಣ ಮಾಡುವಂಥಾದ್ದಾಗಿ ಸತ್-ಚಿತ್-ಆನಂದ ಲಕ್ಷಣ ಉಳ್ಳದ್ದು ಸಮಸ್ತ ಲೋಕಗಳನ್ನು ಹುಟ್ಟಿಸಲಿಕ್ಕೆ ಸಮವಾಯ ಕಾರಣವಾದದ್ದು ಆಗಿ ಪ್ರಕಟವಾಯಿತು. ॥ ೩೯ ॥ ಆ ಭಗವಂತನೂ, ಸರ್ವಜ್ಞನೂ ಸರ್ವವಿಧವಾದ ಶಕ್ತಿಯುಳ್ಳವನೂ, ವಿಶ್ವಕ್ಕೆ ಒಡೆಯನೂ ಆದ ಶಂಭುವು ಜಗತ್ತನ್ನು

जगत्सिसृक्षुः प्रथमं ब्रह्माणम् सर्वदेहिनाम् ।
कर्तारं सर्वलोकानां विदधे विश्वनायकः ॥ ४१ ॥
तस्मै प्रथमपुत्राय शङ्करः शक्तिमान् विभुः ।
सर्वज्ञः सकला विद्याः सानुग्रहमुपादिशत् ॥ ४२ ॥
प्राप्तविद्यो महादेवाद्ब्रह्मा विश्वनियामकात् ।
समस्तलोकं निर्मातुं समुद्योगपरोऽभवत् ॥ ४३ ॥
कृतोद्योगोऽपि निर्माणे जगतां शंकराज्ञया ।
अज्ञातोपायसंपत्तिरभवन्मायया वृतः ॥ ४४ ॥
विधातुमखिलाऀल्लोकानुपायं प्राप्तुमिच्छया ।
पुनस्तं प्रार्थयामास देवदेवं त्रियंबकम् ॥ ४५ ॥
नमस्ते देवदेवेश नमस्ते करुणाकर ।
अस्मदादिजगत्सर्वं निर्वापनविधिक्षम ॥ ४६ ॥

---

ಹುಟ್ಟಿಸಬೇಕೆಂಬ ಇಚ್ಛೆಯುಳ್ಳವನಾಗಿ ಮೊಟ್ಟಮೊದಲಿಗೆ ಎಲ್ಲಾ ಲೋಕಗಳಲ್ಲಿ ಎಲ್ಲಾ ಪ್ರಾಣಿಗಳನ್ನು ಹುಟ್ಟಿಸುವಂಥ ಬ್ರಹ್ಮನನ್ನು ಹುಟ್ಟಿಸಿದನು. ॥ ೪೧ ॥ ಮೊದಲನೇ ಮಗನಾದ ಆ ಬ್ರಹ್ಮನಿಗೆ ಶಕ್ತಿಯುತನೂ, ಸರ್ವಜ್ಞನೂ, ವಿಭುವೂ ಆದ ಶಂಕರನು ಎಲ್ಲಾ ವಿದ್ಯೆಗಳನ್ನು ಕೃಪೆಯಿಂದ ಉಪದೇಶ ಮಾಡಿದನು. ॥ ೪೨ ॥

ಜಗನ್ನಿಯಾಮಕನಾದ ಆ ಮಹಾದೇವನಿಂದ ವಿದ್ಯೆಯನ್ನು ಪಡೆದುಕೊಂಡ ಬ್ರಹ್ಮನು ಜಗತ್ತನ್ನು ನಿರ್ಮಾಣ ಮಾಡಲಿಕ್ಕೆ ಉದ್ಯುಕ್ತನಾದನು. ॥ ೪೩ ॥ ಶಂಕರನ ಅಪ್ಪಣೆಯಪ್ರಕಾರ ಬ್ರಹ್ಮನು ಜಗತ್ತನ್ನು ಹುಟ್ಟಿಸುವ ಕಾರ್ಯದಲ್ಲಿ ತೊಡಗಿದನು. ಆದರೆ ಮಾಯೆಯಿಂದ ಆವೃತನಾಗಿ ನಿರ್ಮಾಣ ಮಾಡುವ ಉಪಾಯವನ್ನೇ ತಿಳಿಯದವನಾದನು ॥೪೪॥ ಆಗ ಬ್ರಹ್ಮನು ಸಮಸ್ತ ಲೋಕಗಳನ್ನು ನಿರ್ಮಾಣ ಮಾಡುವ ಉಪಾಯವನ್ನು ಆ ಮಹಾದೇವನಿಂದ ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ದೇವಾಧಿದೇವನೂ, ಮುಕ್ಕಣ್ಣನೂ ಆದ ಶಂಕರನನ್ನು ಪುನಃ ಪ್ರಾರ್ಥನೆ ಮಾಡಿದನು. ॥ ೪೫ ॥ ಹೇಗೆಂದರೆ ಎಲೈ ದೇವಾಧಿದೇವನೇ ನಿನಗೆ ನಮಸ್ಕಾರವು. ಎಲೈ ಕರುಣಾಸಾಗರನೇ ನಿನಗೆ ನಮಸ್ಕಾರವು. ಎಲೈ ಪರಮಾತ್ಮನೆ ನಾನೆ ಮೊದಲಾದ ಎಲ್ಲಾ ಜಗತ್ತನ್ನು ಸಂಹಾರ ಮಾಡುವದರಲ್ಲಿ ನೀನು ಸಮರ್ಥನಾಗಿರುವಿ. ॥ ೪೬ ॥ ಸಕಲ ಜಗತ್ತಿಗೆ

उपायं वद मे शंभो जगत्सृष्ट्यां जगत्पते ।
सर्वज्ञः सर्वशक्तिस्त्वं सर्वकर्ता सनातनः ॥ ४७ ॥
इति संप्रार्थितः शंभुर्ब्रह्मणा विश्वनायकः ।
उपायमवदत्तस्मै लोकसृष्टिप्रवर्तकम् ॥ ४८ ॥
उपायमीश्वरेणोक्तं लब्ध्वापि चतुराननः ।
न समर्थोऽभवत्कर्तुं नानारूपमिदं जगत् ॥ ४९ ॥
पुनस्तं प्रार्थयामास ब्रह्मा विह्वलमानसः ।
देवदेव महादेव जगत्प्रथमकारण ॥ ५० ॥
नमस्ते सच्चिदानंद स्वेच्छाविग्रहराजित ।
भव शर्व महेशान सर्वकारणकारण ॥ ५१ ॥
भवदुक्तोऽप्युपायो मे न किंचिज्ज्ञायतेऽधुना ।

---

ಒಡೆಯನಾದ ಎಲೈ ಶಂಭುವೇ ಜಗತ್ತನ್ನು ನಿರ್ಮಾಣ ಮಾಡುವ ಕಾರ್ಯದಲ್ಲಿ ನನಗೆ ಉಪಾಯವನ್ನು ಹೇಳಿ ಕೊಡು. ನೀನು ಸರ್ವಜ್ಞನು. ಎಲ್ಲಾ ಶಕ್ತಿಯುಳ್ಳವನು. ಸರ್ವ ಕರ್ತೃವು ಮತ್ತು ಸನಾತನನು ಇರುವಿ. ॥ ೪೭ ॥ ಹೀಗೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಜಗದೊಡೆಯನಾದ ಶಂಭುವು ಜಗತ್ತಿನ ಸೃಷ್ಟಿ ಮಾಡುವ ಉಪಾಯವನ್ನು ಬ್ರಹ್ಮನಿಗೆ ಹೇಳಿಕೊಟ್ಟನು. ॥ ೪೮ ॥ ಶಂಕರನಿಂದ ಹೇಳಲ್ಪಟ್ಟ ಉಪಾಯವನ್ನು ಪಡೆದುಕೊಂಡರೂ ಬ್ರಹ್ಮನು ನಾನಾ ರೂಪವಾದ ಈ ಜಗತ್ತನ್ನು ನಿರ್ಮಾಣ ಮಾಡಲು ಸಮರ್ಥನಾಗಲಿಲ್ಲ. ॥ ೪೯ ॥ ಆಗ ಕಳವಳಗೊಂಡ ಮನಸ್ಸುಳ್ಳ ಆ ಬ್ರಹ್ಮನು ಮತ್ತೊಮ್ಮೆ ಪ್ರಾರ್ಥನೆ ಮಾಡಿದನು. ಎಲೈ ದೇವಾಧಿದೇವನಾದ ಮಹಾದೇವನೇ ಈ ಜಗತ್ತಿಗೆ ನೀನೇ ಮೂಲ ಕಾರಣನು ಇರುವಿ ॥ ೫೦ ॥ ಸತ್-ಚಿತ್-ಆನಂದ ಸ್ವರೂಪನು ಇಚ್ಛಾನುಸಾರ ದೇಹ ಧಾರಣ ಮಾಡುವ ಸಾಮರ್ಥ್ಯವುಳ್ಳ ಎಲೈ ಭವನೇ, ಎಲೈ ಶರ್ವನೆ, ಎಲೈ ಮಹೇಶನೇ ಎಲ್ಲಾ ಕಾರಣಗಳಿಗೂ ಕಾರಣನಾದ ಪರಶಿವನೆ ನಿನಗೆ ನಮಸ್ಕಾರವು ॥ ೫೧ ॥ ಸೃಷ್ಟಿ ಮಾಡುವ ಉಪಾಯವನ್ನು ತಾವು ನನಗೆ ಹೇಳಿಕೊಟ್ಟಿರಿ. ಆದರೆ ಅದು ನನಗೆ ಸ್ವಲ್ಪವೂ ತಿಳಿಯಲೊಲ್ಲದು. ಭಗವಂತನಾದ ಎಲೈ ಪರಮೇಶ್ವರನೇ ಈಗ ಸೃಷ್ಟಿಯನ್ನೇ ಮಾಡಿತೋರಿಸು ಅಂದರೆ

सृष्टिं विधेहि भगवन्प्रथमं परमेश्वर ।
ज्ञातोपायस्ततः कुर्यां जगत्सृष्टिमुमापते ॥ ५२ ॥
इत्येवं प्रार्थितः शंभुर्ब्रह्मणा विश्वयोनिना ।
ससर्जात्मसमप्रख्यान् सर्वज्ञान्सर्वशक्तिकान् ॥ ५३ ॥
प्रबोधपरमानंदपरिवाहितमानसान् ।
प्रमथान् विश्वनिर्माणप्रलयादिविधिक्षमान् ॥ ५४ ॥
सृष्टप्रमथवर्गेषु वर्णाश्रमपरिक्रमान् ।
अप्राकृतसदाचारानुपादिशदथ प्रभुः ।
तस्मात्तद्गोत्रजाः सर्वे शिवभक्ता धृतव्रताः ॥ ५५ ॥

इति श्रीमद्वीरशैवसदाचारसंग्रहे वीरशैवानंदचंद्रिकानुसारेण अप्राकृत सृष्टिकालादिकथनन्नाम षष्ठं प्रकरणं समाप्तम् ॥

---

ಉಪಾಯವನ್ನು ತಿಳಿದುಕೊಳ್ಳುವೆನು. ಅನಂತರ ಎಲೈ ಉಮಾಪತಿಯೇ ನಾನು ಸೃಷ್ಟಿ ಮಾಡಲು ಸಮರ್ಥನಾಗಬಹುದು. ॥ ೫೨ ॥ ಈ ರೀತಿಯಾಗಿ ಜಗದುತ್ಪತ್ತಿಗೆ ಕಾರಣೀಭೂತನಾದ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಶಂಭುವು ತನಗೆ ಸಮಾನವಾದ ಯೋಗ್ಯತೆಯುಳ್ಳಂಥ ಸರ್ವಜ್ಞರು. ಸರ್ವಶಕ್ತಿಯುಳ್ಳವರು ಆದಂಥ ॥ ೫೩ ॥ ಪರಮಾತ್ಮನ ವಿಷಯಕವಾದ ಜ್ಞಾನದಿಂದುಂಟಾದ ಆನಂದಾಮೃತದಿಂದ ತುಂಬಿದ ಮನಸುಳ್ಳ ಈ ಜಗತ್ತಿನ ಸೃಷ್ಟಿ–ಸ್ಥಿತಿ–ಲಯುಗಳನ್ನು ಮಾಡಲು ಸಮರ್ಥರಾದಂಥ ಪ್ರಮಥರನ್ನು ಸೃಷ್ಟಿ ಮಾಡಿದನು. ॥ ೫೪ ॥ ಹೀಗೆ ಸೃಷ್ಟಿ ಮಾಡಲ್ಪಟ್ಟ ಪ್ರಮಥ ವರ್ಗದವರಿಗೆ ಪ್ರಭುವಾದ ಆ ಪರಮಾತ್ಮನು ಅಪ್ರಾಕೃತವಾದ ವರ್ಣ ಮತ್ತು ಆಶ್ರಮ ಇವುಗಳ ಕ್ರಮವನ್ನು ಅಪ್ರಾಕೃತಗಳಾದ ಸದಾಚಾರಗಳನ್ನು ಉಪದೇಶ ಮಾಡಿದನು. ಆ ಪ್ರಮಥರ ಗೋತ್ರಗಳಲ್ಲಿ ಹುಟ್ಟಿದ ಎಲ್ಲಾ ಮಾಹೇಶ್ವರರು ಶಿವನಲ್ಲಿ ಭಕ್ತಿಯುಳ್ಳವರು. ದೃಢವಾದ ವ್ರತವುಳ್ಳವರು ಆಗಿರುತ್ತಾರೆ. ॥ ೫೫ ॥ ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವಾನಂದ ಚಂದ್ರಿಕೆಗೆ ಅನುಗುಣವಾಗಿ ಹೇಳಲ್ಪಟ್ಟ ಅಪ್ರಾಕೃತಸೃಷ್ಟಿ ಕಾಲಾದಿ ಕಥನವೆಂಬ ಆರನೇಯ ಅಧಿಕರಣದ ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

# ॥ अथ सप्तमप्रकरणम् ॥

विशुद्धाः प्राकृताश्चेति द्विविधा मानुषाः स्मृताः ।
शिवसंस्कारिणः शुद्धाः प्राकृता इतरे मताः ॥ १ ॥
वर्णाश्रमादिधर्माणां व्यवस्था हि द्विधा मता ।
एका शिवेन निर्दिष्टा ब्रह्मणा कथिताऽपरा ॥ २ ॥
शिवधर्मो हि कथितः शिवाश्रमनिषेविणाम् ।
शिवसंस्कारहीनानां धर्मः पैतामहःस्मृतः ॥ ३ ॥
वर्णाश्रमविभागस्तु धर्मतो नतु जातितः ।
भक्तमाहेश्वरेष्वेषु दीक्षया चैकभावतः ॥ ४ ॥

---

## ಏಳನೆಯ ಪ್ರಕರಣ

ಸುಪ್ರಭೇದಾಗಮದಲ್ಲಿ– ಮನುಷ್ಯರಲ್ಲಿ ವಿಶುದ್ಧರೂ ಪ್ರಾಕೃತರೂ ಎಂದು ಎರಡು ವರ್ಗಗಳಿರುತ್ತವೆ. ಶಿವ ಸಂಸ್ಕಾರವು ಯಾರಿಗೆ ಆಗಿರುತ್ತದೊ ಅವರು ವಿಶುದ್ಧರು ಶಿವಸಂಸ್ಕಾರ ರಹಿತರು ಪ್ರಾಕೃತರು ॥೧॥ ವರ್ಣ ಆಶ್ರಮಾದಿ ಧರ್ಮಗಳ ವ್ಯವಸ್ಥೆಯು ಎರಡು ಪ್ರಕಾರವಾಗಿರುತ್ತದೆ. ಒಂದು ಶಿವನಿಂದ ಹೇಳಲ್ಪಟ್ಟದ್ದು. ಮತ್ತೊಂದು ಬ್ರಹ್ಮನಿಂದ ಹೇಳಲ್ಪಟ್ಟದ್ದು. ॥೨॥ ಶಿವಸಂಸ್ಕಾರವನ್ನು ಹೊಂದಿ ವೀರಶೈವಧರ್ಮವನ್ನಾಶ್ರಯಿಸಿದವರಿಗೆ ಶಿವನಿಂದ ಹೇಳಲ್ಪಟ್ಟ ಅಪ್ರಾಕೃತವಾದ ವರ್ಣಾಶ್ರಮಾದಿ ಧರ್ಮವು, ಶಿವಸಂಸ್ಕಾರವಿಲ್ಲದ ಇತರರಿಗೆ ಬ್ರಹ್ಮನಿಂದ ಹೇಳಲ್ಪಟ್ಟ ಪ್ರಾಕೃತ ವರ್ಣಾಶ್ರಮಾದಿ ಧರ್ಮವು ಆಶ್ರಯಣೀಯವಾಗಿದೆ. ॥೩॥ ವೀರಶೈವರಲ್ಲಿ ಭಕ್ತವರ್ಗ ಮಾಹೇಶ್ವರ (ಜಂಗಮ) ವರ್ಗ ಎಂದು ಎರಡು ಭೇದವಿದ್ದರೂ ಎರಡು ವರ್ಗದವರಿಗೂ ದೀಕ್ಷೆಯು ಒಂದೇ ಕಾಲದಲ್ಲಿ ಆಗುತ್ತಿರುವದರಿಂದ ವೀರಶೈವರ ಅಪ್ರಾಕೃತ ವರ್ಣಾಶ್ರಮಾದಿ ವಿಭಾಗವು ಧರ್ಮದಿಂದ ಇರುವದಲ್ಲದೆ ಜಾತಿಯಿಂದಲ್ಲ. ॥೪॥ **ವಿಶೇಷ ವಿಚಾರ:–** ಇದೇ ಪುಸ್ತಕದ ಹನ್ನೊಂದನೆಯ ಪ್ರಕರಣದಲ್ಲಿ ೪೫ ನೆಯ ಶ್ಲೋಕದಿಂದ "ವೀರಶೈವಾಭಿಧಾ ದೀಕ್ಷಾ ವೀರಮಾಹೇಶ್ವರಾಭಿಧಾ ॥ ಏವಂಹಿಭಿದ್ಯತೇದೀಕ್ಷಾ, ಭಕ್ತಮಾಹೇಶ್ವರೇಷುಚ ॥ ವೀರಶೈವದೀಕ್ಷಾ ವೀರಮಾಹೇಶ್ವರ ದೀಕ್ಷಾ ಎಂದು ದೀಕ್ಷೆಯಲ್ಲಿ ಎರಡು ಭಾಗಗಳಿರುತ್ತವೆ. ಭಕ್ತ ವರ್ಗದವರಿಗೆ ಮಾಡುವ ದೀಕ್ಷೆಯು ವೀರಶೈವ ದೀಕ್ಷೆಯು, ಮಾಹೇಶ್ವರ ವರ್ಗದವರಿಗೆ ಮಾಡುವ ದೀಕ್ಷೆಯು

सोऽयं धर्मः संग्रहेण प्रोच्यते नातिविस्तरम् ।
तपः कर्म जपो ध्यानं ज्ञानं चेत्यनुपूर्वकम् ॥ ५ ॥
शिवार्थं देहसंशोषस्तपः कृच्छ्रादि नो मतम् ।
शिवार्चा कर्म विज्ञेयं बाह्यं यागादि नोच्यते ॥ ६ ॥
जपः पंचाक्षराभ्यासः प्रणवाभ्यास एव वा ।
रुद्राध्यायादिकाभ्यासो न वेदाध्ययनादिकम् ॥ ७ ॥
ध्यानं शिवस्वरूपादिचिन्ता नात्मादिचिंतनम् ।
शिवागमार्थविज्ञानं ज्ञानं नान्यार्थवेदनम् ।
इति पञ्चप्रकारोऽयं शिवयज्ञः प्रकीर्तितः ॥ ८ ॥

---

ವೀರಮಾಹೇಶ್ವರ ದೀಕ್ಷೆಯು (ಅಯ್ಯಾಚಾರ) ಎಂದು ಕರೆಯಲ್ಪಡುತ್ತದೆಂದು ಸ್ಪಷ್ಟವಾಗಿ ದೀಕ್ಷಾಭೇದವು ಹೇಳಲ್ಪಟ್ಟದೆ, ಕಾಲವು ಇಬ್ಬರಿಗೂ ಒಂದೇ ಇದೆ."

ಇಂಥ ಅಪ್ರಾಕೃತವಾದ ವೀರಶೈವ ಧರ್ಮವು ವಿಸ್ತಾರವಾಗದಂತೆ ಸಂಗ್ರಹರೂಪವಾಗಿ ಹೇಳಲ್ಪಡುತ್ತದೆ.

ಧರ್ಮವು, ತಪಸ್ಸು, ಕರ್ಮ, ಜಪ, ಧ್ಯಾನ ಮತ್ತು ಜ್ಞಾನ ಈ ಕ್ರಮದಿಂದ ಐದು ಪ್ರಕಾರವಾಗಿರುವದು. ॥ ೫ ॥ ವೀರಶೈವರ ತಪಸ್ಸೆಂದರೆ ಶಿವನ ಸಲುವಾಗಿ ದೇಹವನ್ನು ದಂಡಿಸುವದೇ (ಗುರು ಲಿಂಗ ಜಂಗಮರ ಪೂಜಾ ಸೇವಾ ಸತ್ಕಾರಾದಿಗಳ ನಿಮಿತ್ತವಾಗಿ ಶರೀರ ಶೋಷಣ ಮಾಡುವದೇ.) ತಪಸ್ಸು ಇದರ ಹೊರತು ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳನ್ನಾಚರಿಸುವದು ವೀರಶೈವರ ತಪಸ್ಸಲ್ಲ. ವೀರಶೈವರಿಗೆ ಕರ್ಮವೆಂದರೆ ಶಿವಪೂಜೆಯೊಂದೇ. ಇದರ ಹೊರತು ಬಾಹ್ಯಗಳಾದ ಯಜ್ಞ, ಯಾಗ, ಹೋಮ, ಹವನ ಮುಂತಾದವು ವೀರಶೈವರ ಕರ್ಮಗಳಲ್ಲ ॥ ೬ ॥ ವೀರಶೈವರು ಮಾಡುವ ಜಪವೆಂದರೆ ಪಂಚಾಕ್ಷರ ಮಂತ್ರದ ಪುರಶ್ಚರಣವು ಅಥವಾ ಓಂಕಾರದ ಪುರಶ್ಚರಣವು ಮತ್ತು ರುದ್ರಾಧ್ಯಯನ ( ಶ್ರೀ ರುದ್ರ ) ಮೊದಲಾದವುಗಳ ಪಾರಾಯಣವು ಇವನ್ನು ಬಿಟ್ಟು ಕರ್ಮಕಾಂಡದ ವೇದಾಧ್ಯಯನಾದಿಗಳು ವೀರಶೈವರ ಜಪವಲ್ಲ. ॥ ೭ ॥ ಶಿವನ ಸ್ವರೂಪಾದಿಗಳ ಚಿಂತನವೇ ವೀರಶೈವರಿಗೆ ಧ್ಯಾನವಲ್ಲದೆ ಆತ್ಮಾದಿ ಚಿಂತನವು ಧ್ಯಾನವಲ್ಲ. ಶಿವಾಗಮಗಳ ಅರ್ಥವನ್ನು ತಿಳಿದುಕೊಳ್ಳುವದೇ ವೀರಶೈವರಿಗೆ ಜ್ಞಾನವಲ್ಲದೆ ಇತರ ಯಾವ ಶಾಸ್ತ್ರಗಳ ಅರ್ಥವನ್ನು ತಿಳಿದುಕೊಂಡರೂ ಅದು ವೀರಶೈವರಿಗೆ ನಿಜವಾದ ಜ್ಞಾನವಲ್ಲ. ಈ ಪ್ರಕಾರವಾಗಿ ಐದು ವಿಧವಾದ ಧರ್ಮವು ವೀರಶೈವರಿಗೆ ಪಂಚಯಜ್ಞವೆಂದು ಹೇಳಲ್ಪಡುವದು. ॥ ೮ ॥ ಈ ಐದು

अनेन पंचयज्ञेन यः पूजयति शंकरम् ।
भक्त्या परमया युक्तः स वै भक्त इति स्मृतः ॥ ९ ॥

अन्तःप्रकाशमानस्य संवित्सूर्यस्य संततम् ।
मनसा यदुपस्थानं तत्संध्यावंदनं विदुः ।१०।

सत्यं क्षमा दया शौचं नियमो मार्दवं तथा ।
तपस्त्यागो ब्रह्मचर्यं संतुष्टिश्चार्जवं तथा ।११।

धर्मा एकादश प्रोक्ता भक्तानां शुभवांच्छिनाम् ।
लिंगार्चनादिकं कर्म कार्यं दीक्षान्वितैर्नरैः ।१२।

इति शिवार्चनादीनामेव पंचयज्ञसंध्यावंदनादिकत्वेनोक्तत्वात् ।
तथा च शङ्करसंहितायाम् ।

यदा यदा हि धर्मस्य हानिर्भवति भूतले ।
तदा तदावतारोऽयं गणेशानां महीतले ।१३।

---

ವಿಧವಾದ ಯಜ್ಞದಿಂದ ಯಾವನು ಶಿವನನ್ನು ಪೂಜಿಸುವನೋ? ಅಂಥ ಶ್ರೇಷ್ಠವಾದ ಭಕ್ತಿಯಿಂದ ಕೂಡಿದವನೇ ಭಕ್ತನೆನಿಸಿಕೊಳ್ಳುವನು. ॥೯॥ ಅಂತಃಕರಣದಲ್ಲಿ ಪ್ರಕಾಶಮಾನವಾದ ಜ್ಞಾನರೂಪಿ ಸೂರ್ಯನ ಉಪಾಸನೆಯನ್ನು ಮನಸ್ಸಿನಿಂದ ಯಾವಾಗಲೂ ಮಾಡುವದೇ ಸಂಧ್ಯಾವಂದನವೆಂದು ಹೇಳಲ್ಪಡುವದು. ॥೧೦॥ ಸತ್ಯ, ಕ್ಷಮಾ, ದಯಾ, ಶೌಚ (ಮನಸ್ಸು ಶರೀರ ಇವುಗಳ ಪಾವಿತ್ರ್ಯ) ನಿಯಮದಿಂದ ನಡೆಯುವದು. ಮಾರ್ದವ (ವಿನಯ), ತಪಸ್ಸು, ತ್ಯಾಗ, (ಅಲಿಪ್ತನಾಗಿರುವದು.) ಬ್ರಹ್ಮಚರ್ಯ, ಸಂತೋಷ ಮತ್ತು ಸರಳತನ (ಕಪಟರಾಹಿತ್ಯ) ॥೧೧॥ ಹೀಗೆ ತಮಗೆ ಶುಭವಾಗಬೇಕೆಂದು ಬಯಸುವ ಭಕ್ತರಿಗೆ ಈ ಹನ್ನೊಂದು ವಿಧವಾದ ಧರ್ಮವು ಹೇಳಲ್ಪಟ್ಟಿದೆ. ಶಿವ ದೀಕ್ಷಾ ಸಂಸ್ಕಾರವನ್ನು ಹೊಂದಿದ ಮಾನವರು ಶಿವ ಪೂಜಾದಿ ಕರ್ಮವನ್ನು ಮಾಡತಕ್ಕದ್ದು. ॥೧೨॥

ಎಂದು ಶಿವಪೂಜಾದಿಗಳಿಗೇನೇ ಪಂಚಯಜ್ಞ ಸಂಧ್ಯಾವಂದನ ಇತ್ಯಾದಿ ಸ್ವರೂಪದಿಂದ ಹೇಳಿರುವರು. **ಶಂಕರ ಸಂಹಿತೆಯಲ್ಲಿ** ಯಾವ ಯಾವ ಕಾಲದಲ್ಲಿ ಧರ್ಮದ ಹಾನಿಯು ಭೂಮಿಯ ಮೇಲೆ ಆಗುವದೋ ಆಯಾ ಕಾಲದಲ್ಲಿ ಪ್ರಮಥ ಗಣಂಗಳ ಅವತಾರವು ಭೂಮಿಯಲ್ಲಿ ಆಗುವದು. ॥೧೩॥ ಯಾವ ಯಾವ ಸಮಯ

वृत्तम् । यदायदा प्राणशिवैक्यभाजां हानिर्भवेद्भूमितले गणेशाः ।
तदा तदा मर्त्यकुलेऽवतीर्य संभूय कुर्वन्ति हि धर्मसंस्थाम् ॥१४॥

इति शङ्करसंहितावचनानुसारेण प्रथमप्रकरणोक्ताचार्योत्पत्तिसारेण च ।
तथा च । प्रवक्ष्यामि भवितृंश्च शृणु तज्जननक्रम म्।
द्राक्षारामे रामनाथलिंगे युगचतुष्टये ।
एकोरामस्य जननमावासस्तु हिमालये ॥ १५ ॥
सुधाकुण्डाख्यसुक्षेत्रे लिंगे श्रीमल्लिकार्जुने ।
जननं पंडितार्यस्य निवासः श्रीगिरौ शिवे ॥ १६ ॥
तथा रेवणसिद्धस्य कोल्लिपाके पुरोत्तमे ।
सोमेशलिंगे जननमावासःकदलीपुरे ॥ १७ ॥
तद्वन्मरुळसिद्धस्य वटक्षेत्रे महत्तरे ।
सिद्धेशलिंगे जननं स्थानमुज्जयनीपुरे ॥ १८ ॥

---

ದಲ್ಲಿ ಪ್ರಾಣ ಮತ್ತು ಶಿವ ಇವರಲ್ಲಿ ಏಕತ್ವವನ್ನು (ಲಿಂಗಾಂಗ ಸಾಮರಸ್ಯವನ್ನು) ಹೊಂದಿದಂಥ ಭಕ್ತರ ಅಭಾವವಾಗುವದೊ ಆಗಾಗ ಪ್ರಮಥ ಗಣರು ಈ ಭೂಮಿಯ ಮೇಲೆ ಮನುಷ್ಯ ಕುಲದಲ್ಲಿ ಅವತರಿಸಿ ಸಂಘಟಿತ (ಕೂಡಿದವ)ರಾಗಿ ವೀರಶೈವ ಧರ್ಮದ ಸ್ಥಾಪನೆ (ಸ್ಥಿರತೆ)ಯನ್ನು ಮಾಡುವರು. ॥೧೪॥

ಎಂಬ ಶಂಕರಸಂಹಿತೆಯ ವಚನಾನುಸಾರವಾಗಿ ಮತ್ತು ಮೊದಲನೆಯ ಪ್ರಕರಣದಲ್ಲಿ ಹೇಳಿದ ಆಚಾರ್ಯರ ಅವತಾರಕ್ಕನುಗುಣವಾಗಿ ಶಂಕರನು ಪಾರ್ವತಿಗೆ ಹೇಳುವನು. ॥ ಎಲೈ ದೇವಿಯೆ– ಮುಂದೆ ಆಗುವವರಾದ ಆಚಾರ್ಯರ ಅವತಾರ ಕ್ರಮವನ್ನು ಹೇಳುವೆನು ಕೇಳು. ದ್ರಾಕ್ಷಾರಾಮ ಕ್ಷೇತ್ರದಲ್ಲಿ ರಾಮನಾಥ ಲಿಂಗ ದೊಳಗೆ ನಾಲ್ಕು ಯುಗಗಳಲ್ಲಿಯೂ ಏಕೋರಾಮಾಚಾರ್ಯರ ಆವಿರ್ಭಾವವು ಈತನ ವಾಸವು ಹಿಮಾಲಯದಲ್ಲಿ ॥೧೫॥ ಎಲೈ ಪಾರ್ವತಿಯೇ ಸುಧಾಕುಂಡ ಎಂಬ ಕ್ಷೇತ್ರದಲ್ಲಿ ಶ್ರೀ ಮಲ್ಲಿಕಾರ್ಜುನ ಲಿಂಗದೊಳಗೆ ಪಂಡಿತಾಚಾರ್ಯರ ಅವತಾರವು ಈತನ ವಾಸವು ಶ್ರೀಶೈಲ ಪರ್ವತದಲ್ಲಿ ॥೧೬॥ ಕೊಲ್ಲಿಪಾಕಿ ಎಂಬ ಪುರದಲ್ಲಿ ಸೋಮೇಶ್ವರ ಲಿಂಗದೊಳಗೆ ರೇವಣಸಿದ್ಧರ ಅವತಾರವು ಈತನ ವಾಸವು ರಂಭಾಪುರಿ ಯಲ್ಲಿ ॥೧೭॥ ಶ್ರೇಷ್ಠವಾದ ವಟಕ್ಷೇತ್ರದಲ್ಲಿ ಶ್ರೀ ಸಿದ್ಧೇಶ್ವರ ಲಿಂಗದೊಳಗೆ ಮರುಳ ಸಿದ್ಧರ ಆವಿರ್ಭಾವವು, ಈತನ ವಾಸವು ಉಜ್ಜಯನೀ ಪಟ್ಟಣದಲ್ಲಿ ॥೧೮॥

काश्यां विश्वेश्वरे लिंगे विश्वाराध्यस्य संभवः ।
स्थानं श्रीकाशिकाक्षेत्रे शृणु पार्वति सादरम् ॥ १९ ॥
कृताद्युगचतुष्के ते पञ्चाराध्या यथाविधि ।
मम पञ्चमुखोद्भूताः संस्थाप्य सकलान् भुवि ॥ २० ॥
दीक्षां कृत्वा क्रमादेव पञ्चकानां नगात्मजे ।
कलौ तद्वंशजातानां दीक्षानुग्रहकारणात् ।
निधाय निजशिष्यांश्च पुनस्ते मां समागताः ॥ २१ ॥

इत्यादिना पंचाचार्यावतरणस्य तच्छिष्यगोत्रसूत्रप्रवरादीनां स्वयं-भुवागमे घण्टाघोषमुक्तत्वात् इदानीमपि तेषां पीठपंचकस्य हिमालयादिषु सुप्रसिद्धतया स्थितत्वाच्च । ब्राह्मणोऽस्य मुखमासीदिति

---

ಎಲೈ ಪಾರ್ವತಿಯೆ ಕಾಶೀಕ್ಷೇತ್ರದಲ್ಲಿ ವಿಶ್ವನಾಥ ಲಿಂಗದೊಳಗೆ ವಿಶ್ವಾರಾಧ್ಯರ ಅವತಾರವು ಮತ್ತು ಆ ಕಾಶೀ ಪಟ್ಟಣದಲ್ಲಿಯೇ ಅವರ ವಾಸವು ಇರುವದೆಂದು ತಿಳಿದುಕೊ ॥ ೧೯ ॥ ಎಲೈ ಗಿರಿಜೆಯೆ ಕೃತಯುಗವೇ ಮೊದಲಾದ ನಾಲ್ಕು ಯುಗಗಳಲ್ಲಿ ನನ್ನ ಪಂಚಮುಖಗಳಿಂದ ಉದ್ಭವರಾದ ಈ ಪಂಚಾಚಾರ್ಯರು ಭೂಲೋಕದೊಳಗೆ ಆಯಾಯ ಲಿಂಗಗಳಲ್ಲಿ ಪ್ರಕಟವಾಗಿ ದ್ವೈತಾದ್ವೈತಾದಿ ಮತಗಳನ್ನು ಖಂಡಿಸಿ ಶಾಸ್ತ್ರ ಪ್ರಮಾಣಾನುಸಾರವಾಗಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾದಿ ಎಲ್ಲವನ್ನು ಸ್ಥಾಪಿಸಿ ॥ ೨೦ ॥ ಐದುಜನ ಆಚಾರ್ಯರು ಕ್ರಮವಾಗಿ ವೀರ, ನಂದಿ ಭೃಂಗಿ, ವೃಷಭ, ಸ್ಕಂದ ಎಂಬ ಐದು ಗೋತ್ರಗಳ ಮತ್ತು ಪಡ್ವಿಡಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ, ಪಂಚವರ್ಣ ಎಂಬ ಐದು ಮಹಾ ಸೂತ್ರಗಳ ಸಂಬಂಧಿಕರಿಗೆ ದೀಕ್ಷಾ ಅನುಗ್ರಹಾದಿಗಳನ್ನುಮಾಡಿ ಮುಂದೆ ಆ ಐದು ಗೋತ್ರ ಸೂತ್ರದವರಲ್ಲಿ ಹುಟ್ಟುವಂತಹ ಆಯಾಯ ವಂಶದವರಿಗೆ ಕಲಿಯುಗದಲ್ಲಿ ದೀಕ್ಷಾ ಅನುಗ್ರಹಾದಿಗಳನ್ನು ಉತ್ತರೋತ್ತರ ಮಾಡುವದಕ್ಕಾಗಿ ತಮ್ಮ ತಮ್ಮ ಪೀಠದಲ್ಲಿ ತಮ್ಮ ಶಿಷ್ಯರಾದ ಆ ಐದು ಗೋತ್ರ ಸೂತ್ರದವರನ್ನು ಉತ್ತರಾಧಿಕಾರಿ-ಗಳನ್ನಾಗಿ ನೇಮಿಸಿ ಆ ಪಂಚಾಚಾರ್ಯರು ಪುನಃ ನನ್ನನ್ನು ಹೊಂದಿರುವರು ॥ ೨೧ ॥

ಇತ್ಯಾದಿ ವಾಕ್ಯಗಳಿಂದ ಪಂಚಾಚಾರ್ಯರ ಅವತಾರವೂ ಮತ್ತು ಆ ಪಂಚಾಚಾರ್ಯರ ಶಿಷ್ಯರ ಗೋತ್ರ–ಸೂತ್ರ ಪ್ರವರಾದಿಗಳೂ ಸ್ವಯಂಭುವಾಗಮದಲ್ಲಿ ಸುಪ್ರಸಿದ್ಧವಾಗಿ ಹೇಳಿರುವದರಿಂದಲೂ, ಇಂದಿಗೂ ಆ ಪಂಚಾಚಾರ್ಯರ ಪಂಚ

ब्राह्मणपदवाच्यशिवमुखोद्भूतेषु घंटाकर्णादिष्वाचार्येषु ब्राह्मण्यस्य निसर्गसिद्धत्वाच्च। तद्वंशीयानामपि ब्राह्मण्यं सिद्धमेवेत्यलं मणिबंधबद्धकंकणदर्शनस्यादर्शान्वेषणेन। अथैवमपि। जन्मना जायते शूद्रः कर्मणा जायते द्विजः। वेदाभ्यासेन विप्रःस्याद्ब्रह्मविद्ब्राह्मणो भवेत् ॥ २२ ॥
इति महाभारतवचनानुसारिणः प्राकृतब्राह्मणाः।
एतेषां तु तदभाववत्त्वाद्द्विजत्वं वेदाधिकारित्वादिकं कथं युज्यत इतिचेच्छृणु। तेषामवश्यकर्तव्यायाः शिवदीक्षायाः। "रुद्रो

---

ಪೀಠಗಳು ಹಿಮಾಲಯುವೇ ಮೊದಲಾದ ಸುಪ್ರಸಿದ್ಧ ಸ್ಥಾನಗಳಲ್ಲಿ ಜಾಜ್ವಲ್ಯ ಮಾನವಾಗಿ ಇರುವದರಿಂದಲೂ "ಬ್ರಾಹ್ಮಣೋಽಸ್ಯ ಮುಖಮಾಸೀತ್" ಬ್ರಾಹ್ಮಣನು ಈಶ್ವರನ ಮುಖದಿಂದ ಹುಟ್ಟಿರುವನು ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಬಾಹ್ಮಣ ಪದ ವಾಚ್ಯಗಳಾದ ಶಿವನ ಮುಖಗಳಲ್ಲಿ ಉದ್ಭವರಾದ ಘಂಟಾಕರ್ಣಾದಿ ಪಂಚಾ ಚಾರ್ಯರಲ್ಲಿ ಬ್ರಾಹ್ಮಣ್ಯವು ಸಹಜವಾಗಿ ಇರುವದರಿಂದಲೂ. ಆ ಆಚಾರ್ಯ ವಂಶೀಯರಿಗೂಸಹ ಬ್ರಾಹ್ಮಣ್ಯವು ಸಹಜವಾಗಿ ಸಿದ್ಧವಾಗಿರುವದು. ಇದರಿಂದ ಮುಂಗೈಯಲ್ಲಿ ಕಟ್ಟಿಕೊಂಡ ಕಂಕಣವನ್ನು ನೋಡಲಿಕ್ಕೆ ಕನ್ನಡಿಯ ಆವಶ್ಯಕತೆ ಹೇಗೆ ಇಲ್ಲವೋ ಅದರಂತೆ ಆಚಾರ್ಯ ವಂಶೀಯರ ಬ್ರಾಹ್ಮಣ್ಯ ಪ್ರದರ್ಶನಕ್ಕೆ ಬೇರೆ ಪ್ರಮಾಣಗಳ ಅನ್ವೇಷಣದ ಆವಶ್ಯಕತೆ ಇಲ್ಲ ವೆಂಬುದು ಸ್ಫುಟವಾಗಿತೋರುತ್ತಿದೆ. ಇದರ ಮೇಲಿಯೂ "ಜನ್ಮನಾಜಾಯತೆ ಶೂದ್ರಃ ಕರ್ಮಣಾಜಾಯತೆದ್ವಿಜಃ। ವೇದಾ ಭ್ಯಾಸೇನ ವಿಪ್ರಃ ಸ್ಯಾದ್ಬ್ರಹ್ಮವಿದ್ಬ್ರಾಹ್ಮಣೋಭವೇತ್॥" ಮನುಷ್ಯನು ಜನ್ಮದಿಂದ ಶೂದ್ರನಿರುತ್ತಾನೆ. ಕರ್ಮ (ಉಪನಯನ)ದಿಂದ ದ್ವಿಜನಾಗುತ್ತಾನೆ. ವೇದಾಭ್ಯಾಸ ದಿಂದ ವಿಪ್ರನೂ ಬ್ರಹ್ಮಜ್ಞಾನದಿಂದ ಬ್ರಾಹ್ಮಣನೂ ಆಗುತ್ತಾನೆ. ಎಂಬ ಮಹಾಭಾರತ ವಚನಾನು ಸಾರವಾಗಿ ವರ್ತಿಸುವವರು ಪ್ರಾಕೃತ ಬ್ರಾಹ್ಮಣರು. ವೀರಶೈವರಿಗೆ ಉಪ ನಯನಾದಿ ಸಂಸ್ಕಾರಗಳು ಆಗದಿರುವದರಿಂದ ಇವರಿಗೆ ಬ್ರಾಹ್ಮಣ್ಯವೂ. ಮತ್ತು ವೇದಾಧಿಕಾರವೂ ಹೇಗೆ ಸಿದ್ಧಿಸುವದು ಎಂದು ಯಾರಾದರೂ ಸಂಶಯ ಗ್ರಸ್ತರಾದರೆ ಅವರು ಉತ್ತರವನ್ನು ಕೇಳಬೇಕು. ಪ್ರಾಕೃತ ಬ್ರಾಹ್ಮಣಾದಿಗಳಿಗೆ. ಉಪನಯನ ದಿಂದ ಕೇಲವ ಕರ್ಮಾಧಿಕಾರವು ಪ್ರಾಪ್ತವಾಗುತ್ತದೆಯಲ್ಲದೆ ಅಂತಿಮ ಪದವಿಯು. (ಮೋಕ್ಷವು) ಸಾಕ್ಷಾತ್ತಾಗಿ ದೊರೆಯಲಾರದು. ಅಪ್ರಾಕೃತರಾದ ವೀರಶೈವರ ದೀಕ್ಷಾ ಸಂಸ್ಕಾರವು ಸಂಚಿತ ಪ್ರಾರಬ್ಧ ದಿಗಳಿಂದ ಪ್ರಾಪ್ತಗಳಾದ. ಆಣವ, ಮಾಯಾ,

भूत्वा यजेद्रुद्रं नारुद्रो रुद्रमर्चयेत्'' इति शंकरसंहितोक्तप्रमाण-परिप्राप्तरुद्राराधनयोग्यताफलकपूर्वनिष्ठ जीवत्वनिरासपूर्वकशिवत्वप्र-तिष्ठापनप्रयोजकत्वात्तादृशशिवदीक्षावतामुपनयनं विनापि तेषां तद्बलेनैव द्विजत्वद्वारा रुद्राध्ययनरुद्राराधनादिष्वधिकारित्वसिद्धेश्च। तथाहि ॥ गरुडपुराणे। वंशावलिप्रयातानां लिंगधारणशालिनाम्
ज्ञानिनां शिवभक्तानां शूद्रत्वं नैव विद्यते ॥ २३ ॥

नमके चमके पंचब्रह्ममंत्रादिवैदिके।
तेषामेवाधिकारोऽस्ति शिवदीक्षाप्रभावतः ॥ २४ ॥

---

ಕಾರ್ಮಿಕ, ಎಂಬ ಮೂರು ಮಲಗಳ ನಿವೃತ್ತಿ ಪೂರ್ವಕವಾಗಿ ಮಾತಾ-ಪಿತೃಜನ್ಯವಾದ ಮಾಂಸ ಪಿಂಡವನ್ನು ಕಳೆದು ಮಂತ್ರ ಪಿಂಡವನ್ನಾಗಿಯೂ. ಆತ್ಮನಲ್ಲಿರುವ ಜೀವ ಭಾವವನ್ನು ಹೋಗಲಾಡಿಸಿ ಶಿವ ಭಾವವನ್ನು ಮಾಡುವದರಿಂದ ಉಪನಯನಕ್ಕಿಂತಲೂ ನೂರಾರು ಪಟ್ಟು ಶ್ರೇಷ್ಠವಾಗಿರುವದು ಈ ದೀಕ್ಷಾ ಸಂಸ್ಕಾರದಿಂದ ವೀರಶೈವರು ಗುರು ಕರಜಾತ ರಾಗುವದರಿಂದ ದ್ವಿಜತ್ವವು ಸಹಜವಾಗಿ ಪ್ರಾಪ್ತವಾಗುತ್ತದೆ. ''ರುದ್ರನಾಗಿ ರುದ್ರನ್ನನ್ನು ಪೂಜಿಸಬೇಕು. ರುದ್ರನಾಗದೆ ರುದ್ರನನ್ನು ಪೂಜಿಸಬಾರದು" ಎಂಬ ಶಂಕರಸಂಹಿತಾವಚನಾನುಸಾರವಾಗಿ ಶಿವಪೂಜಕರಾದ ವೀರಶೈವರಿಗೆ ದೀಕ್ಷಾ ಸಂಸ್ಕಾರವು ಅವಶ್ಯವಾಗಿ ಆಗಲೇಬೇಕು. ಈ ದೀಕ್ಷಾ ಸಂಸ್ಕಾರದಿಂದಲೇ ವೀರ ಶೈವರು ರುದ್ರಾಧ್ಯಾಯಾದಿ ವೇದಾಧ್ಯಯನದಲ್ಲಿ ಹಾಗು ಶಿವ ಪೂಜಾನಿ ನಿಷ್ಕಾಮ ಕರ್ಮದಲ್ಲಿ ಅಧಿಕಾರಿಗಳಾಗಿರುತ್ತಾರೆ॥ ಇದಲ್ಲದೆ ಗರುಡಪುರಾಣದಲ್ಲಿ ''ಗರ್ಭಧಾರ ಣೆಯಾದ ಎಂಟನೆಯ ತಿಂಗಳು ಮುಂತಾದ ಕಾಲದಲ್ಲಿ ಲಿಂಗಧಾರಣವನ್ನು ಮಾಡಿ ಕೊಳ್ಳುವಂಥಾ ವಂಶದಲ್ಲಿ ಹುಟ್ಟಿದಂಥಾ ಶಿವಜ್ಞಾನಿಗಳು ಶಿವಭಕ್ತಿ ಸಂಪನ್ನರೂ ಆದ ವೀರಶೈವರಿಗೆ ಶೂದ್ರತ್ವವು ಇಲ್ಲವೇ ಇಲ್ಲ ॥ ೨೩॥

ನಮಕ ಚಮಕ ಪಂಚಬ್ರಹ್ಮ ಮಂತ್ರ ಮೊದಲಾಗಿ ವೈದಿಕ ಮಂತ್ರಗಳಲ್ಲಿ ಶಿವ ದೀಕ್ಷಾ ಪ್ರಭಾವದಿಂದ ಅವರಿಗೆ ಅಧಿಕಾರವಿರುತ್ತದೆ. ಅರ್ಥಾತ್ ಪ್ರಾಕೃತ ಬ್ರಾಹ್ಮಣ ಕುಮಾರನಿಗೆ, ಉಪನಯನವಾದರೆ, ಬ್ರಾಹ್ಮಣ್ಯವು, ಉಪನಯನ ವಾಗ ದಿದ್ದರೆ ಶೂದ್ರತ್ವ ಇರುತ್ತದೆ. ಅಪ್ರಾಕೃತ ವೀರಶೈವ ಬ್ರಾಹ್ಮಣನಿಗೆ ಉಪನಯನ ವಾಗದಿದ್ದರೂ ಅದಕ್ಕಿಂತಲೂ ಶ್ರೇಷ್ಠವಾದ ಕರ್ಮಮಾರ್ಗ ನಿವೃತ್ತಿಪೂರ್ವಕ ಜ್ಞಾನ ಮಾರ್ಗ ಪ್ರವರ್ತಕವಾದ ಶಿವದೀಕ್ಷಾ ಪ್ರಭಾವದಿಂದಲೇ ಬ್ರಾಹ್ಮಣ್ಯವು ಸಹಜವಾಗಿ ಸಿದ್ಧವಾಗಿರುವದು ॥ ೨೪ ॥ ಈ ಮಾತನ್ನೇ ಪಾರಮೇಶ್ವರಾಗಮವು ಹೇಳುತ್ತದೆ.

इति । वस्तुतस्त्वलिंगिब्राह्मणकुमारस्यानुपनीतत्वे शूद्रत्वं ।
वीरशैवब्राह्मणस्यानुपनीतत्वेऽपि शिवदीक्षयैव ब्राह्मण्यमिति परमार्थः।
पारमेश्वरे ॥ दीयते लिंगसंबंधः क्षीयते च मलत्रयं ।
दीयते क्षीयते यस्मात्तस्माद्दीक्षेति कथ्यते ॥ २५ ॥
गर्भाष्टमे कृता दीक्षा मुख्या, सा षोडशावधि ।
गौणा, तदूर्ध्वमधमा दीक्षा वीरान्वयायिनाम् ॥ २६ ॥
इति दीक्षाकालं निरूप्य ।
कुण्डमण्डपहोमाद्यैर्न्यासैरध्वकलादिभिः ।
मंत्रोपदेशसहिता क्रियादीक्षेति गीयते ॥ २७ ॥
इत्यारभ्य कृच्छ्रपुण्याहनांदीसमाराधनांकुरार्पणमंटपदेवताप्रतिष्ठापंच-
ब्रह्मकलशार्चनषडध्वशोधनधान्याधिवासजलाधिवासपंचगव्यप्राशन--
षट्त्रिंशत्कलान्यासरूपांगसंस्कारलिंगसंस्कारपूर्वका आज्ञा—उपमा-

---

ಯಾವ ಕ್ರಿಯೆಯಿಂದ ಲಿಂಗದ ಸಂಬಂಧವು ಉಂಟಾಗುತ್ತದೋ ಮತ್ತು ಆ ಕೂಡಲೇ ಮೂರು ಮಲಗಳ ನಿವೃತ್ತಿಯಾಗುತ್ತದೋ ಇಂಥಾ ಎಕ ಕಾಲದಲ್ಲಿ ಲಿಂಗದ ಸಂಬಂಧ ವನ್ನು ಮಲತ್ರಯಗಳ ನಿವೃತ್ತಿಯನ್ನು ಮಾಡುವಂಥಾ ಕ್ರಿಯೆಗೆ ದೀಕ್ಷೆ ಎನ್ನುತ್ತಾರೆ ॥ ೨೫ ॥ ವೀರಶೈವರು ಈ ದೀಕ್ಷೆಯನ್ನು ಎಂಟನೇ ವರ್ಷದ ವಯಸ್ಸಿನಲ್ಲಿ ಮಾಡು ವದು ಶ್ರೇಷ್ಠವಾದುದು. ಮುಂದೆ ಹದಿನಾರು ವರ್ಷ ವಯಸ್ಸಿನೊಳಗೆ ಮಾಡುವದು ಮಧ್ಯಮವೆನಿಸುವದು ಹದಿನಾರು ವರ್ಷಗಳ ನಂತರ ಮಾಡುವದು ಕನಿಷ್ಠ ವೆನಿಸುವದು ॥ ೨೬ ॥

ದೀಕ್ಷಾಕಾಲವನ್ನು ಹೇಳಿ ಕುಂಡ ಮಂಟಪ ಹೋಮ ಮೊದಲಾದವುಗಳಿಂದ ಅಧ್ವ, ಕಲಾ ಮುಂತಾದ ನ್ಯಾಸಗಳಿಂದ ಮಂತ್ರೋಪದೇಶಸಹಿತವಾಗಿ ಮಾಡುವದೇ ಕ್ರಿಯಾದೀಕ್ಷೆಯು. ಎಂದು ಆರಂಭಿಸಿ, ಕೃಚ್ಛ್ರ ಪುಣ್ಯಾಹವಾಚನ. ನಾಂದೀ ಸಮಾ- ರಾಧಣ ಅಂಕುರಾರ್ಪಣ ಮಂಟಪದೇವತಾಪ್ರತಿಷ್ಠಾಪನ ಪಂಚಬ್ರಹ್ಮ ಕಲಶಾರ್ಚನ ಷಡಧ್ವಶೋಧನ ಧಾನ್ಯಾಧಿವಾಸ. ಜಲಾಧಿವಾಸ. ಪಂಚಗವ್ಯಪ್ರಾಶನ

स्वस्तिकारोहण–कलशभिषेक–विभूतिपट्ट–लिंगायत्त–लिंगस्वायत्ता--ख्यसप्तविधदीक्षाविधानस्य वातुलागमादिषूक्तत्वात्तत्प्रकारकदीक्षैवास्माकं संप्रदायसिद्धतया प्रतिभाति। तत्सर्वं विस्तरभयान्न लिखितम्।

तथा च। अष्टावरणसंपन्नः पंचाचारपरायणः।
वैदिकं कर्म कुर्वीत ज्ञानैकफलसाधनम् ॥ २८ ॥

शिवभक्तोऽपि विप्रोऽपि वेदाध्यायपरायणः।
स एव शिव इत्युक्तः सत्यमेव न संशयः ॥ २९ ॥

अदीक्षितानां विप्राणां शिवागमविलोकनम्।
पापमेतन्महादेवि सत्यमेव न संशयः ॥ ३० ॥

इति वीरागमादिवचनप्रामाण्यात्।

---

ಮತ್ತು ಕಲಾನ್ಯಾಸರೂಪ, ಅಂಗಸಂಸ್ಕಾರ, ಲಿಂಗಸಂಸ್ಕಾರ ಪೂರ್ವಕವಾಗಿ ಆಜ್ಞಾ ಉಪಮಾ, ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ ಲಿಂಗಾಯತ್ತ, ಲಿಂಗಸ್ವಾಯತ್ತ ಎಂಬುವ ಏಳುವಿಧವಾದ ದೀಕ್ಷಾಕ್ರಮವು. ವಾತುಲಾಗಮಾದಿಗಳಲ್ಲಿ ಉಕ್ತವಾಗಿರುತ್ತದೆ. ಈ ಪ್ರಕಾರವಾದ ದೀಕ್ಷೆಯೇ ನಮ್ಮ ಸಂಪ್ರದಾಯಕ್ಕೆ ಅನುಕೂಲವಾದುದಾಗಿತೋರುತ್ತದೆ. ವಿಸ್ತಾರವಾಗುವದರಿಂದ ಅದೆಲ್ಲವನ್ನು ಇಲ್ಲಿ ವಿಸ್ತರಿಸುವದಿಲ್ಲ. ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಎಂಬ ಅಷ್ಟಾವರಣಗಳಿಂದ ಕೂಡಿಕೊಂಡಂಥಾ. ಲಿಂಗಾಚಾರ, ಶಿವಾಚಾರ. ಸದಾಚಾರ, ಗಣಾಚಾರ, ಭೃತ್ಯಾಚಾರ ಎಂಬ ಐದು ಆಚಾರಗಳನ್ನು ಆಚರಿಸುವಂಥಾ ವೀರ ಶೈವನು ಜ್ಞಾನಸಾಧನವಾದ ವೈದಿಕವಾದ ಕರ್ಮವನ್ನು ಆಚರಿಸಬೇಕು. ॥ ೨೮ ॥

ಶಿವನಲ್ಲಿ ಭಕ್ತಿಯುಳ್ಳವನಾಗಲಿ ಅಥವಾ ಬ್ರಾಹ್ಮಣನಾಗಲಿ ಯಾವನು ವೇದವನ್ನು ಅಭ್ಯಾಸ ಮಾಡುವನೋ ಅವನು ನಿಜವಾಗಿಯೂ ಶಿವನು ಇದರಲ್ಲಿ ಎಷ್ಟೂ ಸಂಶಯವಿಲ್ಲ. ॥ ೨೯ ॥ ಎಲೈ ಪಾರ್ವತಿಯೇ. ಶಿವದೀಕ್ಷಾ ಸಂಸ್ಕಾರವನ್ನು ಹೊಂದದೇ ಇದ್ದ ಬ್ರಾಹ್ಮಣರು ಶಿವಾಗಮಗಳನ್ನು ಓದುವದು ನಿಶ್ಚಯವಾಗಿ ಪಾಪಕರವಾದುದು ಇದರಲ್ಲಿ ಸಂಶಯವಿಲ್ಲ. ॥ ೩೦ ॥

ಈ ರೀತಿಯಾಗಿ ವೀರಾಗಮ ಮೊದಲಾದ ಆಗಮಗಳ ಪ್ರಮಾಣವಿರುವದರಿಂದಲೂ. ಮತ್ತು ಭಸ್ಮ ರುದ್ರಾಕ್ಷೆಗಳಿಂದ ಸಹಿತನಾದ ಲಿಂಗಧಾರಿಯಾದವನು.

भूतिरुद्राक्षसंयुक्तो लिंगधारी सदा शुचिः ।
पंचाक्षरं जपन्योगी शिवभक्त इति स्मृतः ॥ ३१ ॥
इति सिद्धान्तशिखामणिवचनप्रामाण्याच्च ।
शिवदीक्षाभिजातानां शिवैकभक्तानां वीरशैवानां शिवप्रतिपादकवेदागमाध्ययनज्ञानैकफलसाधनवैदिककर्मानुष्ठानाधिकारित्वं स्पष्टं ।
अन्यच्च । आचारभेदाच्छैवस्य भेदः संकथ्यतेऽधुना ।
सामान्यशैवं प्रथमं मिश्रशैवं ततः परम् ॥ ३२ ॥
शुद्धशैवं तथा ज्ञेयं वीरशैवं ततः परम् ।
एतेषां लक्षणं वक्ष्ये शृणु देवि यथा क्रमम् ॥ ३३ ॥
सामान्यभेदः पूजादि शिवस्य परमात्मनः ।
सर्वत्र शिवभावश्च सामान्यमिति गीयते ॥ ३४ ॥

---

ಯಾವಾಗಲೂ ಶುಚಿಯಾಗಿರುವನು. ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿರುವಂತಹ ಯೋಗಿಯು. ಶಿವಭಕ್ತನೆನಿಸಿಕೊಳ್ಳುವನು ॥ ೩೧ ॥ ಹೀಗೆ ಸಿದ್ಧಾಂತ ಶಿಖಾಮಣಿಯ ಪ್ರಮಾಣವಿರುವದರಿಂದಲೂ ಶಿವದೀಕ್ಷಾ ಸಂಸ್ಕಾರದಿಂದ ಗುರುಕರ ಜಾತರಾದವರು. ಕೇವಲ ಶಿವಭಕ್ತಿಯುಳ್ಳವರೂ. ಆದ ವೀರಶೈವರಿಗೆ ಶಿವನನ್ನು ಪ್ರತಿಪಾದನ ಮಾಡುವ ವೇದ ಮತ್ತು ಆಗಮ. ಇವುಗಳ ಅಧ್ಯಯನ ಮಾಡುವ. ಮತ್ತು ಅಂಥ ವೇದಾಗಮಾದಿಗಳಲ್ಲಿ ಹೇಳಿದ ಕೇವಲ ಜ್ಞಾನಪ್ರತಿಪಾದಕಗಳಾದ ವೈದಿಕ ಕರ್ಮಗಳನ್ನು ಆಚರಿಸುವ ಅಧಿಕಾರವು ಇದ್ದೇ ಇರುತ್ತದೆ. ಎಂಬುದು ಸ್ಪಷ್ಟವಾಗಿದೆ. ಇನ್ನು ಮುಂದೆ ಆಚಾರ ಭೇದದಿಂದ ಶೈವದಲ್ಲಿ ಉಂಟಾಗುವ ಭೇದವು ಈಗ ಹೇಳಲ್ಪಡುತ್ತದೆ. "ಸಾಮಾನ್ಯ ಶೈವ" ಎಂಬುದು ಮೊದಲನೆಯದು. "ಮಿಶ್ರ ಶೈವ" ಎರಡನೆಯದು. "ಶುದ್ಧ ಶೈವ" ಮೂರನೆಯದು. "ವೀರಶೈವ" ನಾಲ್ಕನೆಯದು. ಎಲೈ ದೇವಿಯೇ ಈ ನಾಲ್ಕರ ಲಕ್ಷಣವನ್ನು ಕ್ರಮವಾಗಿ ಹೇಳುವೆನು ಕೇಳು ॥ ೩೩ ॥ ಸಾಮಾನ್ಯಶೈವಲಕ್ಷಣವು, ಪರಬ್ರಹ್ಮನಾದ ಶಿವನ ಪೂಜಾದಿಗಳನ್ನು ಮಾಡುವದು. ಎಲ್ಲ ಕಡೆಯಲ್ಲಿ ಶಿವಭಾವನೆಯುನ್ನಿಡುವದು. ಯಾವ ಯಾವ ಸಮಯದಲ್ಲಿ ಶಿವಲಿಂಗದರ್ಶನವಾಗುವದೋ ಆಗಾಗ ಶಿವಲಿಂಗದ

यदा यदा शिवं पश्येत्तदा कुर्याच्छिवार्चनम् ।
प्रदक्षिणनमस्कारौ दर्शनं वा समाचरेत् ॥ ३५ ॥
शिवचिन्हेषु भक्तेषु शिवकार्येषु पार्वति ।
भक्तिं कुर्वीत सततं मनोवाक्कायकर्मभिः ॥ ३६ ॥
सामान्यशैवमाख्यातं मिश्रशैवमतः शृणु ।
शिवं विष्णुं च ब्रह्माणं कुमारं गणनायकम् । ॥ ३७ ॥
आदित्यमंबिकां चैव मिश्रीकृत्य समर्चनम्
सर्वत्र देवताबुद्धिर्माहात्म्यं शिव एव च ॥ ३८ ॥
शिवधर्मान्यधर्माणां समाचरणमादरात्
अन्यपूजामिश्रितत्वान्मिश्रशैवमुदाहृतम् । ॥ ३९ ॥
अतः परं शुद्धशैवं वक्ष्यामि शृणु पार्वति

---

ಪೂಜಾ ಮಾಡುವದು. ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುವದು. ಪೂಜಾ ಮಾಡಲು ಅನುಕೂಲವಿಲ್ಲದಿದ್ದರೆ ದರ್ಶನವನ್ನು ಮಾಡಿಕೊಳ್ಳುವದು. ||೩೪-೩೫||

ಎಲೈ ಪಾರ್ವತಿಯೇ ಶಿವನ ಚಿನ್ಹಗಳಾದ ಭಸ್ಮರುದ್ರಾಕ್ಷಾದಿಗಳಲ್ಲಿ, ಶಿವನ ಭಕ್ತರಲ್ಲಿ, ಶಿವನ ಸಂಬಂಧಗಳಾದ ಕಾರ್ಯಗಳಲ್ಲಿ ಮನಸ್ಸಿನಿಂದಲೂ, ಶರೀರದಿಂದಲೂ ಮತ್ತು ಆಚರಣೆಯಿಂದಲೂ ಯಾವಾಗಲೂ ಭಕ್ತಿಯನ್ನಿಡುವದು. ॥ ೩೬ ॥ ಇದೆಲ್ಲವು ಸಾಮಾನ್ಯ ಶೈವನ ಲಕ್ಷಣವು. ಮುಂದೆ ಮಿಶ್ರ ಶೈವನ ಲಕ್ಷಣವನ್ನು ಹೇಳುವೆನು ಕೇಳು॥

ಶಿವ, ವಿಷ್ಣು, ಬ್ರಹ್ಮ, ಷಣ್ಮುಖ, ಗಣಪತಿ, ಸೂರ್ಯ ಮತ್ತು ದೇವಿ ಇವರೆಲ್ಲರ ಪೂಜೆಯನ್ನು ಮಿಶ್ರವಾಗಿ ಮಾಡುವದು ಎಲ್ಲ ಕಡೆಯಲ್ಲಿ ಈಶ್ವರಭಾವನೆ-ಯನ್ನಿಡುವದು. ಶಿವನಲ್ಲಿ ಮಾತ್ರ ಆಧಿಕ್ಯವನ್ನು ಹೇಳುವದು. ॥ ೩೭ ॥ ॥ ೩೮ ॥ ಶಿವಧರ್ಮಸಹಿತವಾಗಿ ಅನ್ಯಧರ್ಮಗಳನ್ನು ಭಕ್ತಿಯಿಂದ ಆಚರಿಸುವದು. ಹೀಗೆ ಅನ್ಯ ದೇವತಾ ಪೂಜೆಯಿಂದ ಶಿವನ ಪೂಜೆಯು ಮಿಶ್ರವಾಗಿರುವದರಿಂದ ಇದಕ್ಕೆ ಮಿಶ್ರ ಶೈವ ಎಂಬ ಹೆಸರು ಪ್ರಾಪ್ತವಾಗಿದೆ. ॥ ೩೯ ॥ ಎಲೈ ಗಿರಿಜೆಯೇ ಮುಂದೆ ಶುದ್ಧ ಶೈವದ ಲಕ್ಷಣವನ್ನು ಹೇಳುವೆನು ಕೇಳು. ಶುದ್ಧ ಶೈವನೆಂದು ಯಾರಿಗೆ ಹೇಳುವರೋ ಅವರಿಂದ ಉದ್ಭವರಾದ ಮಾನವರಿಗೆ ಶೈವ ಎಂತಲೂ ಹೇಳುವರು. ॥ ೪೦ ॥ ಸತ್, ಚಿತ್,

शुद्धशैवमिति प्रोक्तं तद्भवं शैवमुच्यते । ॥ ४० ॥

एक एव महादेवः सांबः सत्यादिलक्षणः

तदन्यदेवास्तद्भक्तास्तदुद्भूतास्तदाश्रिताः ॥ ४१ ॥

लिङ्गस्य पूजावेलायां ये चान्ये देवसत्तमाः ।

तेषामावरणत्वेन पूजां कृत्वा न चान्यथा ॥ ४२ ॥

गुरुणा दत्तलिंगं तु करपीठेऽपि वा यजेत् ।

गुरूपदिष्टनियमात्सावधानं समाचरेत् ॥ ४३ ॥

प्रमादात्पतिते लिंगे नष्टे दग्धे हृतेऽपि वा ।

विनिर्गते ततः पीठाद्येन केन च दूषिते ॥ ४४ ॥

गुरुपादांबुजं स्मृत्वा जप्त्वाऽघोरं तदाज्ञया ।

तल्लिंगमेव वान्यद्वा धारयेत्पूजयेत्पुनः ॥ ४५ ॥

---

ಆನಂದ ಸ್ವರೂಪನಾದ, ಪಾರ್ವತೀ ಸಹಿತವಾಗಿ ಯಾವಾಗಲೂ ಇರತಕ್ಕಂಥ, ಮಹಾದೇವನೊಬ್ಬನೇ ಮುಖ್ಯ ದೇವರು ಈ ಮಹಾದೇವನಿಗಿಂತಲೂ ಭಿನ್ನರಾದ ವಿಷ್ಣು ಬ್ರಹ್ಮಾದಿಗಳು ಆ ಮಹಾದೇವನ ಭಕ್ತರು. ಆ ಮಹಾದೇವನಿಂದ ಉತ್ಪನ್ನ ರಾದವರು ಮತ್ತು ಆ ಮಹಾದೇವನನ್ನೇ ಆಶ್ರಯಿಸಿದವರು ಎಂದು ತಿಳಿದುಕೊಳ್ಳು ವರು. ॥ ೪೧ ॥ ಲಿಂಗಪೂಜಾ ಕಾಲದಲ್ಲಿ ಇತರ ದೇವತೆಗಳನ್ನು ಆವರಣ ರೂಪದಿಂದ ಪೂಜಿಸುವರಲ್ಲದೆ ಮುಖ್ಯತ್ವದಿಂದ ಪೂಜಿಸುವದಿಲ್ಲ. ॥ ೪೨ ॥ ಅಥವಾ ಗುರುವಿನಿಂದ ಕೊಡಲ್ಪಟ್ಟ ಲಿಂಗವನ್ನು ಕರಪೀಠದಲ್ಲಿ ಪೂಜಿಸುವದು. ಗುರುವಿನಿಂದ ಉಪದೇಶ ಮಾಡಲ್ಪಟ್ಟ ನಿಯಮಾನುಸಾರವಾಗಿ ಒಳ್ಳೆ ಎಚ್ಚರಿಕೆಯಿಂದ ಆಚರಿಸುವದು. ಆಕಸ್ಮಾತ್ ಅವಧಾನತೆಯಿಲ್ಲದೆ ಕೈಯಲ್ಲಿಯ ಲಿಂಗವು ಕೆಳಗೆ ಬೀಳಲಿ. ನಷ್ಟವಾಗಲಿ ಬೆಂಕಿಯಲ್ಲಿ ಸುಡಲ್ಪಡಲಿ ಅನ್ಯರಿಂದ ಅಪಹರಿಸಲ್ಪಡಲಿ. ಪೀಠದಿಂದ ಕಡೆಗೆಯಾಗಲಿ ಹಾಗು ಯಾವದೋ ಒಂದು ಕಾರಣದಿಂದ ದೂಷಿತವಾಗಲಿ. ॥ ೪೪ ॥ ಆಗ ಗುರುವಿನ ಪಾದಕಮಲವನ್ನು ಸ್ಮರಿಸಿ ಆ ಗುರುವಿನ ಆಜ್ಞಾನುಸಾರವಾಗಿ ಅಘೋರ ಮಂತ್ರವನ್ನು ಜಪಿಸಿ ಅದೇ ಲಿಂಗವನ್ನೇ ಅಥವಾ ಮತ್ತೊಂದು ಲಿಂಗವನ್ನೇ ಆಗಲಿ. ಪೂಜಿಸುವದು ಅಥವಾ ಧರಿಸಿಕೊಂಡು ಪುನಃ ಪೂಜಿಸುವದು ॥ ೪೫ ॥ ಯಾವುದಾ-

प्रमादान्नियमे लुप्ते मूलपंचाक्षरीं जपेत् ।
प्रायश्चित्तमिदं देवि व्रतजातादिलोपने ॥ ४६ ॥

शुद्धशैवमिति प्रोक्तं वीरशैवमतः शृणु ।
सर्वेषामपि शैवानां वीरशैवं महत्तरम् ॥ ४७ ॥

सुलभा देवपूजा च सुलभं च क्रियावहम् ।
अल्पक्रियं बहुफलं वीरशैवं महेश्वरि ॥ ४८ ॥

अन्येषामपि शैवानां मुक्तिर्जन्मत्रयेण च ।
अन्यशैवं तु तत्सर्वं फलाल्पं च बहुक्रियम् ॥ ४९ ॥

वेदान्तजन्यं यज्ज्ञानं विद्येति परिगीयते ।
विद्यायां रमते यस्माद्वीर इत्यभिधीयते ॥ ५० ॥

---

ದರೊಂದು ತಪ್ಪಿನಿಂದ ನಿಯಮಕ್ಕೆ ಲೋಪ ಬಂದರೆ ಮೂಲ ಪಂಚಾಕ್ಷರೀ ಮಂತ್ರವನ್ನು ಜಪಿಸಬೇಕು. ಎಲೈ ದೇವಿಯೇ ಯಾವುದಾದರೊಂದು ವ್ರತಾದಿಗಳ ಲೋಪವಾದಾಗ ಹೀಗೆ ಮಾಡುವದು ಪ್ರಾಯಶ್ಚಿತ್ತವೆನಿಸಿಕೊಳ್ಳುತ್ತದೆ. ॥ ೪೬ ॥ ಇದೆಲ್ಲವೂ ಶುದ್ಧ ಶೈವದ ಲಕ್ಷಣವು ಇನ್ನು ಮುಂದೆ ವೀರಶೈವವನ್ನು ಹೇಳುವೆನು ಕೇಳು. ಇದುವರೆಗೂ ಹೇಳಿದ ಶೈವಗಳೆಲ್ಲವಕ್ಕಿಂತಲೂ ವೀರಶೈವವು ಅತ್ಯಂತ ಶ್ರೇಷ್ಠವಾದುದು. ॥ ೪೭ ॥

ಈ ವೀರಶೈವ ಧರ್ಮದಲ್ಲಿ ದೇವರ ಪೂಜೆ ಬಹಳ ಸುಲಭವಾದುದು ಮತ್ತು ಈ ಧರ್ಮದ ಕಾರ್ಯಕಲಾಪವು ಸುಲಭವಾದುದು. ಎಲೈ ಪಾರ್ವತಿಯೇ ವೀರಶೈವ ಧರ್ಮವು ಸ್ವಲ್ಪ ಕ್ರಿಯೆಯುಳ್ಳದ್ದಾದರೂ ಮಹಾಫಲವನ್ನು ಕೊಡತಕ್ಕದ್ದು ಇರುತ್ತದೆ. ॥ ೪೮ ॥ ಹೇಗೆಂದರೆ ವೀರಶೈವ ಧರ್ಮಾತಿರಿಕ್ತ ಶೈವ ಧರ್ಮದವರಿಗೆ ಮೂರು ಜನ್ಮದಲ್ಲಿ ಮುಕ್ತಿಯಾಗುತ್ತದೆ. (ವೀರಶೈವರಿಗೆ ಮಾತ್ರ ಒಂದೇ ಜನ್ಮದಲ್ಲಿ ಮುಕ್ತಿಯಾಗುತ್ತದೆ. ವೀರಶೈವನು ಚರಮ ಶರೀರಿಯೆನಿಸಿಕೊಳ್ಳುವನು) ಉಳಿದ ಎಲ್ಲಾ ಶೈವ ಧರ್ಮದಲ್ಲಿ ಬಹು ವಿಧವಾದ ಕಾರ್ಯಕಲಾಪವಿದ್ದರೂ ಫಲವು ಸ್ವಲ್ಪೇ ಇರುತ್ತದೆ. ॥ ೪೯ ॥

ವೀರಶೈವದ ನಿರ್ವಚನವು ಹೇಗೆಂದರೆ? ವೇದಾಂತ ಉಪನಿಷತ್ತುಗಳಿಂದ ಯಾವ ಜ್ಞಾನ ಉಂಟಾಗುತ್ತದೋ ಆ ಜ್ಞಾನಕ್ಕೆ ವಿದ್ಯಾ ಎಂದು ಹೇಳುವರು. ಇಂತಹ ವಿದ್ಯೆಯಲ್ಲಿ ಯಾರು ಯಾವಾಗಲೂ ಆನಂದ ಪಡುವರೋ ಅವರು ವೀರಶೈವರೆನಿಸಿ

एक एवायमेतस्मिन्सर्वस्मिन्जगतीत्रये ।
विशिष्ट ईर्यते यस्माद्वीर इत्यभिधीयते ॥ ५१ ॥
वीरशैवलक्षणं तु । वृत्तम् ।
यो हस्तपीठे निजलिङ्गमिष्टं विन्यस्य तल्लीनमनःप्रचारः ।
बाह्यक्रियासंकुलनिस्पृहात्मा संपूजयत्यंग स वीरशैवः ॥ ५२ ॥
अत्र निजेष्टलिंगमिति ।
सा कला परमा सूक्ष्मा तत्वानां बोधिनी परा ।
तामाकृष्य यथान्यायं लिंगे सम्प्रवेशयेत् ॥ ५३ ॥
"इत्यागमवाक्यात्" स्वनाभिहृदयकण्ठभ्रूमध्यब्रह्मरंध्रेषु दिव्यस्थानेषु स्थितं ब्रह्मशिवरुद्रादिसंज्ञकं परमात्मरूपशिवलिंगमेव श्रीगुरुणा

---

ಕೊಳ್ಳುವರು. ॥ ೫೦ ॥ ಅಥವಾ ವಿಶಿಷ್ಟಃ ಈರ್ಯತೇ ಇತಿವೀರಃ ಎಂದು ವಿಗ್ರಹ ಮಾಡಿದರೆಸ್ವರ್ಗ ಮರ್ತ್ಯ ಪಾತಾಳವೆಂಬ ಮೂರು ಲೋಕದಲ್ಲಿಯೂ ಶಿವನೊಬ್ಬನೇ ಸರ್ವಶ್ರೇಷ್ಠನು ಎಂದು ಯಾರು ಹೇಳುವರೋ ಅವರು ವೀರರು. ॥ ೫೧ ॥

ವೀರಶೈವ ಲಕ್ಷಣವು ಹೇ ಅಂಗ ಎಲೋ ಮುಕ್ತಜೀವಿಯೇ? ಯಾವನು ತನ್ನ ಕರಪೀಠದ (ಅಂಗೈಯ)ಲ್ಲಿ ತನ್ನ ಇಷ್ಟಲಿಂಗವನ್ನು ಇಟ್ಟುಕೊಂಡು ಆ ಲಿಂಗದಲ್ಲಿ ಲೀನವಾದ ಮನಸ್ಸಿನ ಸಂಚಾರ ಉಳ್ಳವನಾಗಿ ಬಹಿರಂಗದ ಕ್ರಿಯೆಗಳ ಗುಂಪಿನಲ್ಲಿ ಸೇರದವನಾಗಿ ಅದನ್ನು ಚನ್ನಾಗಿ ಪೂಜಿಸುವನೋ ಅವನೇ ವೀರಶೈವನು ॥ ೫೨ ॥

—: ವಿಶೇಷ ವಿಚಾರ :—

ಇಲ್ಲಿ "ನಿಜೇಷ್ಟಲಿಂಗಂ" ಎಂದು ಹೇಳಿರುವದೇಕೆ? ಎಂದರೆ ಯಾವದು ತತ್ವಗಳ ಬೋಧ ಮಾಡಿಕೊಡುವದೊ ಯಾವದು ಅತ್ಯಂತ ಸೂಕ್ಷ್ಮವಾಗಿರುವದೋ ಅಂಥಾ ಕಲೆಯನ್ನು ಹೊರಗೆ ತೆಗೆದು ವಿಧಿ ಪ್ರಕಾರವಾಗಿ ಲಿಂಗದಲ್ಲಿ ಸಮಾವೇಶಗೊಳಿಸಬೇಕು. ॥ ೫೩ ॥ ಎಂಬ ಆಗಮ ವಾಕ್ಯಾನುಸಾರವಾಗಿ ತನ್ನ ನಾಭಿ, ಹೃದಯ, ಕಂಠ, ಭ್ರೂಮಧ್ಯ (ಎರಡು ಹುಬ್ಬಿನ ನಡುವೆ) ಬ್ರಹ್ಮರಂಧ್ರ ಎಂಬ ದಿವ್ಯ ಸ್ಥಾನಗಳಲ್ಲಿ ಇರತಕ್ಕ ಬ್ರಹ್ಮ, ಶಿವ, ರುದ್ರ ಇತ್ಯಾದಿ ಸಂಜ್ಞೆಯುಳ್ಳ ಪರಶಿವರೂಪ ಶಿವಲಿಂಗವೇ ಶ್ರೀ ಗುರುವಿನಿಂದ ವಿಧ್ಯುಕ್ತವಾಗಿ ಶರಣಾಗತನಾದ, ಯೋಗ್ಯನಾದ ವೀರಶೈವ ಶಿಷ್ಯನಿಗೆ ಪೂರ್ವದಲ್ಲಿ ಹೇಳಿದ ಪ್ರಕಾರ ಕರಪೀಠದಲ್ಲಿ ಸ್ಥಾಪಿತವಾದ ಲಿಂಗವೇ

विधिवदुपसन्नाय सच्छिष्याय वीरशैवाय पूर्वोक्तप्रकारेण करपीठे प्रतिष्ठितं तल्लिंगं वीरशैवस्य स्वीयप्राणलिङ्गम् ।
स्थावरलिंगमनुपदिष्टत्वात्परकीयम् ।
तस्मादनुपदिष्टस्थावरलिंगपूजाव्यावृत्त्यर्थं निजमिति विशेषणं कृतम् ।
तस्माद्गुरूपदिष्टप्राणलिंगादन्यलिंगस्य पूजनं वीरशैवैर्नकर्तव्यमित्यर्थः ।
बाह्यक्रियासंकुलनिस्पृहात्मेति तत्रैव करपीठकथनाध्याये ।

सिंहासने शुद्धदेशे सुरम्ये रत्नचित्रिते ।
शिवलिंगस्य पूजा या सा बाह्या भक्तिरुच्यते ॥ ५४ ॥
लिंगे प्राणं समाधाय प्राणलिंगं तु शांभवम् ।
सशरीरं मनः कृत्वा न किंचिच्चिन्तयेद्धृदि ।
साऽ न्तरा भक्तिरिति प्रोच्यते शिवयोगिभिः ॥ ५५ ॥

---

ವೀರಶೈವನ ಸ್ವೀಯ ಪ್ರಾಣಲಿಂಗವು. ಸ್ಥಾವರಲಿಂಗವು ಗುರುವಿನಿಂದ ಸ್ಥಾಪಿಸಲ್ಪಡುವದಿಲ್ಲವಾದುದರಿಂದ ಪರಕೀಯ ಲಿಂಗವೆಂದು ಹೇಳಲ್ಪಡುತ್ತದೆ. ಅರ್ಥಾತ್ ಗುರುವು ಯಾವ ಲಿಂಗದ ಪೂಜೆಯನ್ನು ಮಾಡಬೇಕೆಂದು ಉಪದೇಶ ಮಾಡಿರುವನೋ ಅದನ್ನೇ ಪೂಜಿಸಬೇಕು; ಗುರುವಿನಿಂದ ಉಪದೇಶ ಮಾಡಲ್ಪಡದಿದ್ದ ಸ್ಥಾವರಲಿಂಗ ಪೂಜೆಯನ್ನು ವೀರಶೈವನು ಮಾಡಬಾರದೆಂಬುದನ್ನು ಸ್ಪಷ್ಟ ತಿಳಿಸುವದಕ್ಕಾಗಿ "ನಿಜ" ಎಂಬ ವಿಶೇಷಣವು ಹೇಳಲ್ಪಟ್ಟಿರುವದು. ಆದುದರಿಂದ ಗುರುವಿನಿಂದ ಪ್ರಾಪ್ತವಾದ ಪ್ರಾಣಲಿಂಗಕ್ಕಿಂತಲೂ ಭಿನ್ನವಾದ ಸ್ಥಾವರಲಿಂಗದ ಪೂಜೆಯು ವೀರಶೈವರಿಂದ ಮಾಡಲ್ಪಡತಕ್ಕದ್ದಲ್ಲವೆಂದು ಸಾರಾಂಶವು.

ಇದರಂತೆ ಈ ಶ್ಲೋಕದಲ್ಲಿ "ಬಾಹ್ಯಕ್ರಿಯಾ ಸಂಕುಲ ನಿಸ್ಪೃಹಾತ್ಮಾ" ಎಂಬ ಸಮಾಸ ಪದದ ಅರ್ಥವೇನಂದರೆ ಅದೇ ಶಂಕರ ಸಂಹಿತೆಯ "ಕರಪೀಠ ಕಥನಾಧ್ಯಾಯ" ಇದರಲ್ಲಿ, ಪವಿತ್ರ ಸ್ಥಾನದಲ್ಲಿ ರತ್ನಖಚಿತವಾದ ಮತ್ತು ಸುಂದರವಾದ ಸಿಂಹಾಸನದ ಮೇಲೆ ಶಿವಲಿಂಗವನ್ನಿಟ್ಟು ಯಾವ ಪೂಜೆಯು ಮಾಡಲ್ಪಡುವದೋ ಅದು ಬಾಹ್ಯಭಕ್ತಿ ಎಂದು ಹೇಳಲ್ಪಡುತ್ತದೆ. ॥ ೫೪ ॥ ಲಿಂಗದಲ್ಲಿ ಪ್ರಾಣವನ್ನು ಪ್ರಾಣದಲ್ಲಿ ಶಿವಲಿಂಗವನ್ನು ಇರಿಸಿ, ಶರೀರ ಸಹಿತವಾದ ಮನಸ್ಸನ್ನು ಪ್ರಾಣಲಿಂಗವನ್ನಾಗಿ ಮಾಡಿ ಹೃದಯದಲ್ಲಿ ಯಾವುದೊಂದನ್ನು ಚಿಂತಿಸ (ಧ್ಯಾನಿಸ)ಬಾರದು. ಹೀಗೆ ಇರುವದಕ್ಕೆ ಶಿವಯೋಗಿಗಳು ಅಭ್ಯಂತರ ಭಕ್ತಿ ಎಂದು ಹೇಳುತ್ತಾರೆ. ॥ ೫೫ ॥

इत्युक्तत्वात् बाह्यभक्तौ सिंहासनपूजायां कारिताः याः क्रियाः आत्मशुद्धिः स्थानशुद्धिः द्रव्यशुद्धिः मंत्रशुद्धिः लिंगशुद्धिः शोषण–दाहन–प्लावनांगन्यासाव्हानविसर्जननासिकाग्रहणरेचकपूरक-कुंभकप्राणायामजठराकुंचनप्राचीवीक्षणमौनमुद्राद्दगुन्मेलनादिकाः बाह्य क्रियास्तासां संकुलं तस्मान्निस्पृहात्मा निवृत्तचित्तः सन् संपूजयति सम्यक्पूजयतीत्यर्थः । पूजायाः समीचीनत्वं कथमितिचेदुच्यते ।

मन एव मनुष्याणां कारणं बंधमोक्षयोः ।
यथा चालिंगितः पुत्रस्तथा चालिंगितः पतिः ॥५६॥

इति वचनादन्तराराधनमेवालमिति केचन वदन्ति ।

---

ಹೀಗೆ ಹೇಳಿರುವದರಿಂದ ಬಾಹ್ಯಭಕ್ತಿಯ ಸಿಂಹಾಸನ ಪೂಜೆಯಲ್ಲಿ ಯಾವ ಆತ್ಮಶುದ್ಧಿ, ಸ್ಥಾನಶುದ್ಧಿ, ದ್ರವ್ಯಶುದ್ಧಿ, ಮಂತ್ರಶುದ್ಧಿ, ಲಿಂಗಶುದ್ಧಿ, ಶೋಷಣ, ದಾಹನ, ಪ್ಲಾವನ, ಅಂಗನ್ಯಾಸ, ಆಹ್ವಾನ, ವಿಸರ್ಜನ, ನಾಶಿಕಾಗ್ರಹಣ, ರೇಚಕ, ಪೂರಕ, ಕುಂಭಕ, ಪ್ರಾಣಾಯಾಮ, ಜಠರಾಕುಂಚನ (ಹೊಟ್ಟೆಯನ್ನು ಒಳಗೆಳೆಯುವದು) ಪ್ರಾಚೀವೀಕ್ಷಣ (ನಾಸಿಕಾಗ್ರದೃಷ್ಟಿ) ಮೌನ, ದೃಗುನ್ಮೇಲನ (ದೃಷ್ಟಿಯನ್ನು ಅರ್ಧ ತೆರೆದು ಅರ್ಧ ಮುಚ್ಚುವದು) ಎಂಬ ಬಾಹ್ಯಕ್ರಿಯೆಗಳುಂಟೊ ಇವುಗಳಿಂದ ನಿವೃತ್ತವಾದ ಮನಸ್ಸುಳ್ಳವನಾಗಿ ಒಳ್ಳೇ ರೀತಿಯಿಂದ ಪೂಜಿಸುತ್ತಾನೆ ಎಂದು ಅರ್ಥವು.

ಈ ಶ್ಲೋಕದಲ್ಲಿ ಪೂಜ ಧಾತುವಿಗೆ ಸಮ್ ಎಂಬ ಉಪಸರ್ಗವನ್ನು ಹಚ್ಚಿ ಸಂಪೂಜಯತಿ ಎಂದು ಹೇಳಿರುವನು. ಇಲ್ಲಿ ಪೂಜೆಯೊಳಗೆ ಸಮೀಚೀನತ್ವವೇನಿದೆ ಎಂದು ಪ್ರಶ್ನೆಯುಂಟಾದರೆ ಅದಕ್ಕೆ ಉತ್ತರವು ಹೇಳಲ್ಪಡುವದು.

ಪೂಜಾ ಮಾಡುವ ಕಾರ್ಯದಲ್ಲಿ ಎರಡು ವಿಧಾನಗಳಿರುತ್ತವೆ. ೧) ಬಾಹ್ಯ ಪೂಜಾ ೨) ಅಭ್ಯಂತರ ಪೂಜಾ ಇಲ್ಲಿ ಕೆಲವರು ಮಾನವನ ಬಂಧನಕ್ಕು ಅಥವಾ ಮೋಕ್ಷಕ್ಕು ಮನಸ್ಸೇ ಕಾರಣವಾಗಿರುವದು. ಸ್ತ್ರೀಯಳು ಮಗನನ್ನು ಹೇಗೆ ಆಲಿಂಗಿಸುವಳೋ ಹಾಗೆಯೇ ಪತಿಯನ್ನು ಆಲಿಂಗಿಸುವಳು. ॥ ೫೬ ॥ ಆದರೆ ಮಗನನ್ನು ಆಲಿಂಗಿಸುವಾಗ ಇರುವ ಮನೋಭಾವವು ಬೇರೆ. ಪತಿಯನ್ನು ಆಲಿಂಗಿಸುವಾಗ ಇರುವ ಮನೋಭಾವವು ಬೇರೆ ಇರುತ್ತದೆ. ಅಪರಿಚಿತನಾದವನೊಬ್ಬನು ಆ ಸ್ತ್ರೀಯಳು

गवां सर्पिः शरीरस्थं न करोत्यात्मपोषणम् ।
निःसृतं कर्मरचितं पुनस्तासां तु भेषजम् ॥ ५७ ॥
एवमन्तः शरीरस्थसर्पिवत्परमेश्वरः ।
विना चोपासनां देवो न करोति हितं नृणाम् ॥ ५८ ॥
इति वचनाद्बाह्याराधनमेवालमिति केचन वदन्ति ।
तस्माल्लिंगपूजनं तथैकविधमेव न भवति ।

---

ಮಗನನ್ನು ಆಲಿಂಗಿಸುವದನ್ನು ನೋಡಿ ಅವಳಲ್ಲಿ ದೋಷವನ್ನು ಕಲ್ಪಿಸಿಕೊಳ್ಳಬಹುದು. ಆದರೆ ಆ ಸ್ತ್ರೀ ದೋಷಕ್ಕೆ ಪಾತ್ರಳಲ್ಲ ಅವಳ ಮನೋಭಾವವೇ ಭಿನ್ನವಾಗಿದೆ ಪರಿಶುದ್ಧ ಭಾವವು ಮಗನಲ್ಲಿರುತ್ತದೆ. ಇತ್ಯಾದಿ ಪ್ರಮಾಣ ವಾಕ್ಯದಿಂದ ಅಂತರಾರಾಧನೆಯೇ ಮುಖ್ಯವಾದುದೆಂದು ಹೇಳುವರು ॥೫೬॥ ಇದಕ್ಕೆ ಪ್ರತಿಯಾಗಿ ಬೇರೆ ಕೆಲವರು ಹೇಳುವದೇನಂದರೆ ಬಹಿರಾರಾಧನೆ, ಇಲ್ಲದೆ ಕೇವಲ ಅಂತರಾರಾಧನೆಯು. ಜನರಿಗೆ ಹಿತಕಾರಿಯಾಗಲಾರದು. ಇದಕ್ಕೆ ಲೌಕಿಕವಾದ ಒಂದು ದೃಷ್ಟಾಂತವನ್ನು ನೋಡಿರಿ.

ಹಾಲು ಕರೆಯುತ್ತಿರುವ ಆಕಳಿಗೆ ಒಮ್ಮೆ ರೋಗ ಬಂದಿತೆಂದು ಕಲ್ಪಿಸುವಾ । ಆಗ ಪಶುವೈದ್ಯನು ಬಂದು ಔಷಧವನ್ನು ಕೊಟ್ಟು ಇದನ್ನು ಆಕಳ ತುಪ್ಪದಲ್ಲಿ ಹಾಕಿರೆಂದು ಹೇಳಿದನು. ಆಗ ಆಕಳದ ಯಜಮಾನನು ಆಲೋಚನೆ ಮಾಡುತ್ತಾನೆ. ಎರಡೂ ಹೊತ್ತು ಹಿಂಡುವ ಆಕಳಿನ ಕೆಚ್ಚಲಲ್ಲಿ ಹಾಲು ಇರುತ್ತವೆ. ಆ ಹಾಲಿನಲ್ಲಿ ತುಪ್ಪವು ಇದ್ದೇ ಇರುತ್ತದೆ. ಔಷಧ ಒಂದನ್ನು ಹಾಕಿದರೆ ತೀರಿತು. ಎಂದು ತಿಳಿದುಕೊಂಡು ಹಾಗೆ ಮಾಡಿದನು ಇದರಿಂದ ರೋಗವು ಹೋಗಲಿಲ್ಲ. ಪುನಃ ವೈದ್ಯನ ಕಡೆಗೆ ಹೋದನು. ನಡೆದ ಸಮಾಚಾರವನ್ನೆಲ್ಲ ಹೇಳಿದ ಆಗ ಡಾಕ್ಟರನು— ಎಲೈ ಮೂರ್ಖನೆ ಆಕಳದ ಹೊಟ್ಟೆಯಲ್ಲಿ ಹಾಲಿದ್ದರೇನಾಯಿತು. ಹಾಲನ್ನು ಹಿಂಡಿ, ಕಡಿಗೆ ತೆಗೆದು, ಕಾಸಿ, ಹೆಪ್ಪುಹಾಕಿ, ಮೊಸರು ಮಾಡಿ, ಕಡೆದು, ಬೆಣ್ಣೆ ತೆಗೆದು ಪುನಃ ಕಾಸಿದಾಗ ತುಪ್ಪವು ಪ್ರಾಪ್ತವಾಗುತ್ತದೆ. ಆ ತುಪ್ಪದಲ್ಲಿ ಔಷಧ ಕೂಡಿಸಿ ಹಾಕಿದ್ದರೆ ರೋಗವು ಗುಣವಾಗುತ್ತಿತ್ತು. ನೀನು ಹಾಗೆ ಮಾಡಿಲ್ಲವಾದುದರಿಂದ ರೋಗ ಗುಣವಾಗಿಲ್ಲ ಎಂದು ಉತ್ತರ ಕೊಡುವನು. ॥೫೭॥ ಗೋವಿನ ಹೊಟ್ಟೆಯೊಳಗಿನ ಹಾಲಿನಲ್ಲಿರುವ ತುಪ್ಪದಂತೆ ಅಂತರ್ಗತನಾದ ಪರಮಾತ್ಮನು ಉಪಾಸನೆ ಮಾಡದಿದ್ದರೆ ಜನರಿಗೆ ಹಿತವನ್ನು ಮಾಡಲಾರನು. ॥೫೮॥ ಈ ಪ್ರಮಾಣ ವಚನಾನುಸಾರವಾಗಿ ಬಾಹ್ಯಾರಾಧನೆಯೇ ಮುಖ್ಯವಾದುದೆಂದು ಕೆಲವರು ಹೇಳುವರು, ಆದುದರಿಂದ

किंतु ॥ बाह्ये जाग्रदवस्थायामनुभूतार्थ एव हि ।
अन्तः स्वप्नदशायां तु यथेह परिदृश्यते ॥ ५९ ॥
तथान्तर्यजनं नित्यं बहिर्यजनपूर्वकम् ।
कर्तव्यं स्वेष्टलिंगस्य चार्चनं तन्मनीषिभिः ॥ ६० ॥
इत्यागमवचनाच्छिवरहस्ये ।
इष्टलिंगं प्राणलिङ्गमेकीकृत्य समर्चयेत् ।
मणिमालां मंत्रमालामेकीकृत्य जपेत्सदा ।
मातृका प्राणलिंगस्य मणिमालेष्टरूपिणः ॥ ६१ ॥
इत्युक्तत्वाद्बाह्यान्तरयोरिष्टलिंगप्राणलिङ्गयोरर्चनं वीरशैवैः कर्तव्यम् । तस्मादिष्टलिङ्गार्चनपुरःसरं प्राणलिङ्गपूजने कृते सति तत्पूजनमेव सम्यक्पूजनम् तथा पूजयितारो वीरशैवा इत्यर्थः ।
शंकरसंहितायामुपरिभागे ।

---

ಲಿಂಗಪೂಜೆಯು ಒಂದೇ ವಿಧವಾಗಿರುವದಿಲ್ಲ ಆದರೆ ಬಹಿರಂಗದಲ್ಲಿ ಜಾಗ್ರದವಸ್ಥೆಯಲ್ಲಿ ಅನುಭವಿಸಲ್ಪಟ್ಟ ಪದಾರ್ಥವೇ ಸ್ವಪ್ನಾವಸ್ಥೆಯಲ್ಲಿ ಒಳಗೆ ಕಾಣುತ್ತದೆ. ॥೫೯॥ ಇದೇ ರೀತಿಯಾಗಿ ಇಷ್ಟಲಿಂಗಭಕ್ತರು ತಮ್ಮ ಇಷ್ಟಲಿಂಗ ಪೂಜೆ ಮಾಡುವಾಗ ಬಾಹ್ಯಪೂಜೆಯನ್ನು ಮಾಡಿ ಅಂತರಂಗದ ಪ್ರಾಣಲಿಂಗ ಪೂಜೆಯನ್ನು ಮಾಡಬೇಕು. ॥ ೬೦ ॥

ಹೀಗೆ ಆಗಮ ಪ್ರಮಾಣವಿರುವದು. **ಶಿವರಹಸ್ಯದಲ್ಲಿ**= ಇಷ್ಟಲಿಂಗ ಮತ್ತು ಪ್ರಾಣಲಿಂಗ ಈ ಎರಡನ್ನು ಏಕೀಕರಿಸಿಕೊಂಡುಪೂಜಾ ಮಾಡಬೇಕು. ಇದರಂತೆ ಜಪ ಮಾಡುವಾಗ್ಗೆ ರುದ್ರಾಕ್ಷಿ ಮಾಲೆಯನ್ನು ಮತ್ತು ಮಂತ್ರಾಕ್ಷರಗಳನ್ನು ಏಕ ಮಾಡಿಕೊಂಡು ನಿಯಮದಿಂದ ಜಪ ಮಾಡಬೇಕು. ಮಂತ್ರಾಕ್ಷರಗಳು ಪ್ರಾಣಲಿಂಗ ಸಂಬಂಧಿಗಳು ರುದ್ರಾಕ್ಷಿಗಳು ಇಷ್ಟಲಿಂಗಕ್ಕೆ ಸಂಬಂಧವಾದವು. ॥ ೬೧ ॥

ಹೀಗೆ ಹೇಳಿರುವುದರಿಂದ ಬಾಹ್ಯವಾದ ಇಷ್ಟಲಿಂಗದ ಆಂತರವಾದ ಪ್ರಾಣಲಿಂಗದ ಎರಡರ ಪೂಜೆಯೂ ವೀರಶೈವರಿಂದ ಮಾಡಲ್ಪಡತಕ್ಕದ್ದು. ಆದುದರಿಂದ ಇಷ್ಟಲಿಂಗ ಪೂಜಾ ಪುರಸ್ಸರವಾಗಿ ಪ್ರಾಣಲಿಂಗ ಪೂಜಾ ಮಾಡುವದೇ ಸಮ್ಯಕ್ ಪೂಜೆಯೆನಿಸಿಕೊಳ್ಳುವದು. ಇಂಥ ಸಮ್ಯಕ್‌ಪೂಜೆಯನ್ನು ಮಾಡುವವರೇ ವೀರಶೈವರು "ಎಂದು

तदेव हस्तांबुजपीठमध्ये निधाय लिङ्गं परमात्मचिन्हम् ।
समर्चयेदेकधियोपचारैर्नरस्तु बाह्यान्तरभेदवर्जितैः ॥ ६२ ॥
इत्युक्तत्वात् तत्रैव करपीठकथनाध्याये शिष्यं प्रति गुरोर्वाक्यम् ।
वत्स लिङ्गार्चनं नित्यं त्रिकालं कुरु भक्तितः ।
पूजाद्रव्याणि संशोध्य शुचिस्तद्गतमानसः ॥ ६३ ॥
कुरुष्व वत्सोपचारान् षोडशस्नानपूर्वकान् ।
बाह्यांस्तथाभ्यन्तरांश्च समाहितमनाः सदा ॥ ६४ ॥
वृत्तम् । स्नानं सुचित्तसलिलेन हि पूर्णभावं वस्त्रं त्रिशक्तिगुण-
संयुतयज्ञसूत्रं विद्यासुगंधमिव भूतदयाक्षतांश्च शब्दादिपुष्पचयमर्पय
नित्यमंग ॥ ६५ ॥

---

೬೧. ಶ್ಲೋಕದಲ್ಲಿ ಹೇಳಿದ ವೀರಶೈವನ ಲಕ್ಷಣವು. ಶಂಕರಸಂಹಿತೆಯ ಉತ್ತರ ಭಾಗದಲ್ಲಿ "ಪರಮಾತ್ಮನ ಸ್ವರೂಪವಾದ ಲಿಂಗವನ್ನು ಕರಪೀಠದ (ಅಂಗೈಯ)ಲ್ಲಿಟ್ಟು ಏಕಾಗ್ರ ಮನಸ್ಸಿನಿಂದ ಬಾಹ್ಯ ಮತ್ತು ಅಂತರಂಗ ಎಂಬ ಭೇದರಹಿತವಾದ ಉಪಚಾರಗಳಿಂದ ಪೂಜಾ ಮಾಡುವದು." ॥೬೨॥ ಎಂದು ಹೇಳಿರುವುದರಿಂದ ಮತ್ತು ಅದೇ ಶಂಕರ ಸಂಹಿತೆಯೊಳಗಿನ ಕರಪೀಠ ಕಥನಾಧ್ಯಾಯದಲ್ಲಿ ಶಿಷ್ಯನನ್ನು ಕುರಿತು ಗುರುವು ಹೇಳಿದ್ದು= ಎಲೈ ಶಿಷ್ಯನೇ ಪ್ರತಿದಿವಸ ಮೂರು ಸಾರೆ ಇಷ್ಟಲಿಂಗವನ್ನು ಭಕ್ತಿಯಿಂದ ಪೂಜಾ ಮಾಡುತ್ತ ಹೋಗು. ಲಿಂಗಧ್ಯಾನವನ್ನು ಮಾಡುತ್ತ ಪೂಜಾ ಸಾಮಾನಗಳನ್ನು ಶುದ್ಧ ಮಾಡಿಕೋ ॥ ೬೩ ॥ ಎಲೈ ಶಿಷ್ಯನೇ ಸ್ನಾನವೇ ಮೊದಲಾದ ಹದಿನಾರು ಬಾಹ್ಯ ಮತ್ತು ಅಂತರಂಗ (ಮಾನಸಿಕ) ಉಪಚಾರಗಳನ್ನು ನಿಶ್ಚಲ ಮನಸ್ಸಿನಿಂದ ಲಿಂಗಕ್ಕೆ ಅರ್ಪಿಸುತ್ತ ಹೋಗು ಎಂದು ಬೋಧಿಸಿರುವನು. ॥ ೬೪ ॥ ಎಲೈ ಶಿಷ್ಯನೇ ಮಾನಸಿಕವಾದ ಪ್ರಾಣಲಿಂಗ ಪೂಜೆಯಲ್ಲಿ ಉಪಚಾರಗಳು ಯಾವೆಂದರೆ– ಶುದ್ಧವಾದ ಮನಸ್ಸೇ ನೀರು. ಇದರಿಂದ ಪ್ರಾಣಲಿಂಗದ ಸ್ನಾನ. ಪರಿಪೂರ್ಣವಾದ ಭಾವನೇ ವಸ್ತ್ರ. ಇಚ್ಛಾಶಕ್ತಿ ಜ್ಞಾನಶಕ್ತಿ, ಕ್ರಿಯಾಶಕ್ತಿಯೆಂಬ ಮೂರು ಶಕ್ತಿಗಳು ಮೂರು ಗುಣಗಳು (ಮುಪ್ಪುರಿ-ದಾರ) ಎಂಬ ಯಜ್ಞೋಪವೀತ(ರುದ್ರಾಕ್ಷಮಾಲಿಕೆ) ವಿದ್ಯಾರೂಪ ಗಂಧವು, ಭೂತದಯೆ ಎಂಬ ಅಕ್ಷತೆಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧರೂಪ ಪಂಚೇಂದ್ರಿಯ ವಿಷಯಗಳೆಂಬಪತ್ರಿ ಪುಷ್ಪಗಳು. ॥ ೬೫ ॥ ಮನ, ಬುದ್ಧಿ, ಚಿತ್ತ, ಅಹಂಕಾರರೂಪ ಧೂಪವು.

प्रज्ञामनोहंकृतिचित्तधूपं श्रोत्रादिपंचेंद्रियदीपजालम् ।
तद्वासनातैलयुतं च देहि जीवोपहारं सुखदुःखबाह्यम् ॥ ६६ ॥
गुणत्रयाख्यतांबूलं प्राणार्पणनमस्कृतिम् ।
शान्तिपुष्पांजलिं देहि चैकभावविसर्जनम् ॥ ६७ ॥
एवमभ्यन्तरद्रव्यसंभृतं शिवपूजनम् ।
कृत्वा निधेहि सततं लिङ्गं वस्त्रेण वेष्टितम् ॥ ६८ ॥
मस्तके कंधरे कक्षे वक्षस्यथ करस्थले ।
नाभेरधस्तात्सततं प्रमादान्नैव धारयेत् ॥ ६९ ॥
लिङ्गं तु त्रिविधं प्रोक्तं स्थूलं सूक्ष्मं परात्परम् ।
इष्टलिङ्गमिदं स्थूलं यद्बहिर्धार्यते तनौ ॥ ७० ॥
प्राणलिङ्गं तु यत्सूक्ष्मं तदन्तर्भावनामयम् ।
परात्परं तु यत्प्रोक्तं तृप्तिलिङ्गं तदुच्यते ॥ ७१ ॥

---

ಶ್ರೋತ್ರ, ತ್ವಕ್, ನೇತ್ರ, ರಸನಾ, ಘ್ರಾಣರೂಪ ಪಂಚಜ್ಞಾನೇಂದ್ರಿಯಗಳೆಂಬ ದೀಪವು ಈ ಇಂದ್ರಿಯಗಳ ವಾಸನೆಯೆಂಬ ಎಣ್ಣೆಯನ್ನು ಉರಿಸಿ, ಸುಖದುಃಖರಹಿತವಾದ ಜೀವನೆಂಬ ನೈವೆದ್ಯವು. ॥ ೬೬ ॥

ಸತ್ವ, ರಜ, ತಮವೆಂಬ ಮೂರು ಗುಣಗಳೇ ತಾಂಬೂಲವು. ಪ್ರಾಣಾರ್ಪಣವೇ ನಮಸ್ಕಾರವು. ಶಾಂತಿಯೇ ಪುಷ್ಪಾಂಜಲಿಯು. ಲಿಂಗಾಂಗಗಳ ಏಕಭಾವವೇ ವಿಸರ್ಜನೆಯು ॥ ೬೭ ॥ ಈ ಪ್ರಕಾರವಾಗಿ ಅಂತರಂಗ ಪೂಜೆಯ ಉಪಚಾರಗಳಿಂದ ಪ್ರಾಣಲಿಂಗದ ಪೂಜಾ ಮಾಡಿ ಆ ಲಿಂಗವನ್ನು ವಸ್ತ್ರದಲ್ಲಿ ಕಟ್ಟಿಕೊಂಡು ॥ ೬೮ ॥ ಮಸ್ತಕ(ತಲೆ), ಕಂಠ, ಬಗಲು ಎದೆ ಕೈ ಇವುಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿ ಸದಾ ಧರಿಸಿಕೊಳ್ಳಬೇಕು. ಆದರೆ ಹೊಕ್ಕಳದ ಕೆಳಗೆ ಬೆನ್ನಿನ ಕಡೆಗೆ ಯಾವಾಗಲೂ ಧರಿಸಬಾರದು. ॥ ಇದು ಮಹಾಪಾಪವು ॥ ೬೯ ॥ ಲಿಂಗವು ಸ್ಥೂಲ, ಸೂಕ್ಷ್ಮ, ಪರಾತ್ಪರ ಎಂದು ಮೂರು ಪ್ರಕಾರವಾಗಿರುತ್ತದೆ. ಹೊರಗೆ ಶರೀರದ ಮೇಲೆ ಧರಿಸಲ್ಪಡುವ ಇಷ್ಟಲಿಂಗವು ಸ್ಥೂಲ ಲಿಂಗವೆನಿಸಿಕೊಳ್ಳುವದು. ॥ ೭೦ ॥ ಮನಸ್ಸಿನಲ್ಲಿ ಭಾವಿಸಲ್ಪಟ್ಟ ಭಾವನಾಮಯವಾದ ಪ್ರಾಣಲಿಂಗವು ಸೂಕ್ಷ್ಮಲಿಂಗವೆನಿಸಿಕೊಳ್ಳುವದು. ತೃಪ್ತಿಲಿಂಗವೇ ಪರಾತ್ಪರಲಿಂಗವೆನಿಸಿಕೊಳ್ಳುವದು. ॥ ೭೧ ॥ ಸರ್ವವಿಧವಾದ ಅಷ್ಟ

इष्टलिङ्गमिदं साक्षादरिष्टपरिहारकम् ।
धारयेदवधानेन शरीरे सर्वदा बुधः ॥ ७२ ॥

ब्राह्यपीठार्चनादेतत्करपीठार्चनं वरम् ।
सर्वेषां वीरशैवानां मुमुक्षूणां निरंतरम् ॥ ७३ ॥

इत्युक्तत्वाच्च वीरशैवेषु ब्राह्मण्यं वैष्णवादिष्विव सामानाधिकरण्येन प्रतिभाति । तथा च स्कांदे ।

क्रिमिकीटपतंगेभ्यः पशवः प्रज्ञयाधिकाः ।
पशुभ्योऽपि नराःश्रेष्ठास्तेषु श्रेष्ठा द्विजातयः ॥ ७४ ॥

द्विजातिष्वधिका विप्रा विप्रेषु क्रतुबुद्धयः ।
क्रतुबुद्धिषु कर्तारस्तेभ्यः सन्यासिनोऽधिकाः ॥ ७५ ॥

तेभ्यो विज्ञानिनः श्रेष्ठास्तेषु शङ्करपूजकाः ।
तेषु श्रेष्ठा महाभागा मम लिंगांगसंगिनः ॥ ७६ ॥

---

ಗಳನ್ನು ಪರಿಹರಿಸಲು ಸಮರ್ಥವಾದ ಇಷ್ಟಲಿಂಗವನ್ನು ಜ್ಞಾನಿಯಾದವನು ಶರೀರದ ಮೇಲೆ ಒಳ್ಳೇ ಎಚ್ಚರಿಕೆಯಿಂದ ಯಾವಾಗಲೂ ಧರಿಸತಕ್ಕದ್ದು. ॥ ೭೨ ॥ ಚರಮ ಶರೀರಿಗಳಾದ (ಮುಮುಕ್ಷುಗಳಾದ) ಸರ್ವ ವೀರಶೈವರಿಗೆ ಬೇರೇ ಪೀಠದಲ್ಲಿಟ್ಟು ಈ ಇಷ್ಟಲಿಂಗವನ್ನು ಪೂಜಿಸುವದಕ್ಕಿಂತಲೂ ಅಂಗೈಯಲ್ಲಿಟ್ಟು ಪೂಜಿಸುವದೇ ಸರ್ವ ಶ್ರೇಷ್ಠವು. ॥ ೭೩ ॥ ಹೀಗೆ ಹೇಳಿರುವದರಿಂದ ವೈಷ್ಣವರಂತೆ ವೀರಶೈವರಲ್ಲಿಯೂ ಬ್ರಾಹ್ಮಣ್ಯವು ಸಹಜವಾಗಿ ಸಿದ್ಧವಾಗುತ್ತದೆ. ಇದನ್ನೇ ಸ್ಕಾಂದಪುರಾಣದಲ್ಲಿ ಹೇಳಿರುವನು. ಏನಂದರೆ ಸಣ್ಣ ಹುಳಗಳು, ದ್ವಾಮಿ, ಪಕ್ಷಿ ಇವುಗಳಿಗಿಂತಲೂ ಪಶುಗಳು ಬುದ್ಧಿಯಿಂದ ಅಧಿಕವಾದವುಗಳು, ಈ ಪಶುಗಳಿಗಿಂತಲೂ ಮನುಷ್ಯರು ಶ್ರೇಷ್ಠರು. ಮನುಷ್ಯರಲ್ಲಿ ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಇವರು ಶ್ರೇಷ್ಠರು. ॥ ೭೪ ॥ ಈ ದ್ವಿಜರಲ್ಲಿ ವಿಪ್ರರು ಶ್ರೇಷ್ಠರು. ಈ ವಿಪ್ರರಲ್ಲಿ ಯಜ್ಞಯಾಗಾದಿಗಳನ್ನು ಮಾಡಬೇಕೆಂಬ ಬುದ್ಧಿಯುಳ್ಳವರು ಶ್ರೇಷ್ಠರು. ಇಂಥ ಇಚ್ಛೇಯುಳ್ಳವರಿಗಿಂತಲೂ ಯಜ್ಞಯಾಗಾದಿಗಳನ್ನು ಮಾಡುವವರು ಶ್ರೇಷ್ಠರು ಯಜ್ಞ ಮಾಡುವವರಿಗಿಂತಲೂ ಸನ್ಯಾಸಿಗಳು ಶ್ರೇಷ್ಠರು. ॥ ೭೫ ॥

ಈ ಸಾಮಾನ್ಯ ಸನ್ಯಾಸಿಗಳಿಗಿಂತಲೂ ಜ್ಞಾನಿಗಳು ಶ್ರೇಷ್ಠರು. ಜ್ಞಾನಿಗಳಲ್ಲಿ ಶಿವನನ್ನು ಪೂಜಿಸುವವರು ಶ್ರೇಷ್ಠರು. ಈ ಶಿವೋಪಾಸಕರಲ್ಲಿ ಅಂಗದ ಮೇಲೆ ಲಿಂಗವನ್ನು ಧರಿಸಿದವರು ಶ್ರೇಷ್ಠರು. ಈ ಲಿಂಗಧಾರಿಗಳಲ್ಲಿ ಷಟ್‌ಸ್ಥಲ ಜ್ಞಾನ

लिंगांगसंगिष्वधिकः षट्स्थलज्ञानवान्भवेत् ।
स वंद्यः सर्वदा पूज्यः संसारविजिगीषुभिः ।
बहुनोक्तेन किं वत्स स एवाहं न संशयः ॥ ७७ ॥
"इत्युक्तत्वात्" । अष्टादशानां वर्णानां श्रेष्ठो माहेश्वरोजनः ।
इत्यादिवचनप्रामाण्याच्च प्राणिवर्गतारतम्येऽपि माहेश्वरादिपद-
वाच्यानां वीरशैवानामेव वर्णोत्कृष्टत्वं निर्णीत भवति ।

इति श्रीमद्वीरशैवसदाचारसंग्रहे वीरशैवाधिक्यशैवभेदादि-
विवरणनिरूपणं नाम सप्तमप्रकरणं समाप्तम् ।

---

ಸಂಪನ್ನನು ಶ್ರೇಷ್ಠನು. ಸಂಸಾರದಿಂದ ಪಾರಾಗಬೇಕೆಂಬ ಇಚ್ಛೆಯುಳ್ಳ ಮಾನವರಿಂದ ಈ ಷಟ್‌ಸ್ಥಲ ಬ್ರಹ್ಮಿಯು ಯಾವಾಗಲೂ ವಂದ್ಯನೂ, ಪೂಜ್ಯನೂ ಆಗಿರುತ್ತಾನೆ. ಬಹಳ ಹೇಳುವದರಿಂದ ಫಲವೇನು. ಈ ಷಟ್‌ಸ್ಥಲ ಜ್ಞಾನಸಂಪನ್ನನೇ ನಾನು (ಶಿವನು) ಇದರಲ್ಲಿ ಎಷ್ಟೂ ಸಂಶಯವಿಲ್ಲ. ॥ ೭೭ ॥ ಎಂದು ಶಿವನು ಹೇಳಿರುವುದರಿಂದಲೂ ಮತ್ತು "ಹದಿನೆಂಟು ತರದ ಜಾತಿಗಳಲ್ಲಿ ಮಾಹೇಶ್ವರನೇ ಶ್ರೇಷ್ಠನು." ಎಂಬ ಪ್ರಮಾಣವಿರುವದರಿಂದಲೂ ಪ್ರಾಣಿವರ್ಗಗಳ ತರತಮ ಭಾವದಲ್ಲಿಯೂ ಸಹ ಮಾಹೇಶ್ವರ ಪದ ವಾಚ್ಯರಾದ ವೀರಶೈವರೇ ಶ್ರೇಷ್ಠವೆಂಬುದು ನಿರ್ಣಯಿಸಲ್ಪಡುತ್ತದೆ.

ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವಾಧಿಕ್ಯ ಶೈವಭೇದ ನಿರೂಪಣವೆಂಬ ಏಳನೆಯ ಪ್ರಕರಣದ ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

---

## ॥ अथ अष्टमप्रकरणम् ॥

पार्वत्युवाच

भगवन् श्रोतुमिच्छामि शैवानां भेदमादरात् ।
तेषां तेषां लक्षणानि तैस्तैःकार्यं च मे वद ।
इति संप्रार्थितः शंभुस्तत्प्रभेदं प्रचक्रमे ॥ १ ॥

ईश्वर उवाच

शैवं च वीरशैवं च द्विविधं शैवमीरितम्
शैवं सप्तविधं ज्ञेयं वीरशैवं चतुर्विधम् ॥ २ ॥

अनादिशैवं प्रथममादिशैवं द्वितीयकम् ।
महाशैवं तृतीयं स्यादनुशैवं चतुर्थकम् ॥ ३ ॥

अनन्तरं पञ्चमं च षष्ठं प्रवरशैवकम् ।
अंत्यशैवमिति प्रोक्तं सप्तमं शृणु मत्प्रिये ॥ ४ ॥

---

## ಎಂಟನೆಯ ಪ್ರಕರಣ

ವೀರಶೈವ ಪ್ರಕಾಶಿಕೆಯಲ್ಲಿ ಪಾರ್ವತಿಯು ಪ್ರಶ್ನೆ ಮಾಡುತ್ತಾಳೆ— ಎಲೈ ಭಗವಂತನೇ. ಶೈವರ ಭೇದವನ್ನು ಆದರದಿಂದ ಕೇಳಬೇಕೆಂಬ ಇಚ್ಛೆಯು ನನಗಾಗಿರುತ್ತದೆ. ಅವರವರ ಲಕ್ಷಣಗಳನ್ನು ಮತ್ತು ಅವರವರಿಂದ ಆಚರಿಸಲ್ಪಡತಕ್ಕ ಕಾರ್ಯವನ್ನು ನನಗೆ ತಿಳಿಸಿಕೊಡು ಎಂದು ಪ್ರಾರ್ಥಿಸಲ್ಪಟ್ಟ ಪರಮಾತ್ಮನು ಶೈವರ ಭೇದವನ್ನು ಹೇಳಲಿಕ್ಕೆ ಪ್ರಾರಂಭಿಸಿದನು ॥೧॥

ಪರಮಾತ್ಮನು ಹೇಳಿದನು— ಶೈವವು ಮೊದಲಿಗೆ ಶೈವ, ವೀರಶೈವ ಎಂದು ಎರಡು ವಿಧವಾಗಿರುತ್ತದೆ. ಈ ಶೈವವು ಪುನಃ ಏಳುವಿಧವಾಗಿಯೂ, ವೀರಶೈವವು ನಾಲ್ಕು ವಿಧವಾಗಿಯೂ ಇರುತ್ತದೆ. ॥೨॥ ನನ್ನ ಪ್ರಿಯಳಾದ ಎಲೈ ಪಾರ್ವತಿಯೇ ಕೇಳು— ಶೈವದಲ್ಲಿ ಅನಾದಿ ಶೈವ ಮೊದಲನೆಯದು, ಆದಿ ಶೈವ ಎರಡನೆಯದು, ಮಹಾಶೈವ ಮೂರನೆಯದು, ಅನುಶೈವ ನಾಲ್ಕನೆಯದು, ಅನಂತರ ಶೈವ ಐದನೆಯದು, ಪ್ರವರಶೈವ ಆರನೆಯದು, ಅಂತ್ಯಶೈವ ಏಳನೆಯದು. ಈ ಏಳುವಿಧ ಶೈವರ ಲಕ್ಷಣಗಳನ್ನು ನಿನಗೆ ಹೇಳುವೆನು ಕೇಳು. ನಾನೇ (ಶಿವನೇ) ಪರಬ್ರಹ್ಮ, ಶಿವನಿಗಿಂ

एतेषां सप्तशैवानां वच्मि ते लक्षणानि वै ।
अहमेव परं ब्रह्म मत्तः सर्वोत्तमो न हि ।
इति निश्चितवान् योऽसौ सोऽनादिशैवमुच्यते ॥ ५ ॥
पञ्चाक्षरीदीक्षितो यः स आदिशैवमुच्यते ।
शिवस्य मुखरूपं यो ध्यात्वा मनसि पूजयेत् ॥ ६ ॥
महाशैवमिति प्रोक्तं परसंज्ञकलिङ्गकम् ।
योऽसौ समर्चयेन्नित्यमनुशैवमिति स्मृतम् ॥ ७ ॥
परेशस्य स्वरूपे यो भेदाभेदविवर्जितः ।
योऽसौ समर्चयेन्नित्यमनन्तरमितीरितम् ॥ ८ ॥
परस्य मूर्तिमावाह्य विसर्जनपरश्च यः ।
प्रोक्तः प्रवरशैवश्च सर्वतन्त्रेषु तत्वतः ॥ ९ ॥
परस्य लांछनं दृष्ट्वा नमस्कृत्य सुनिश्चितः ।
अंत्यशैवमिति प्रोक्तं सप्तानां लक्षणं त्विदम् ॥ १० ॥
पुनरेव हि शैवं तु चतुर्विधमनंतरम् ।

---

ತಲೂ ಶ್ರೇಷ್ಠವಾದ ಮತ್ತೊಂದು ವಸ್ತುವು ಇರುವದಿಲ್ಲ. ಹೀಗೆ ದೃಢವಾದ ನಂಬಿಕೆಯುಳ್ಳವನು ಯಾವನೋ ಅವನು ಅನಾದಿಶೈವನು, ||೩-೫|| ಪಂಚಾಕ್ಷರೀ ಮಂತ್ರದ ದೀಕ್ಷೆಯನ್ನು ಯಾವನು ಪಡೆದುಕೊಂಡಿರುವನೋ ಅವನು ಆದಿಶೈವನು.

ಶಿವನ ಪಂಚಮುಖಗಳ ಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ, ಯಾವನು ಪೂಜಿಸುವನೋ ಅವನು ಮಹಾಶೈವನು ||೬|| ಪರಮಾತ್ಮನ ಸ್ವರೂಪವಾದ ಲಿಂಗವನ್ನು ಯಾವನು ಪ್ರತಿದಿವಸ ಪೂಜಿಸುವನೋ ಅವನು ಅನುಶೈವನು ||೭|| ಪರಮಾತ್ಮನ ಸ್ವರೂಪದಲ್ಲಿ ಯಾವನು ಭೇದಾಭೇದ ರಹಿತನಾಗಿ ನಿತ್ಯಪೂಜಿಸುವನೋ ಅವನು ಅನಂತರಶೈವನು ||೮||

ಪರಮೇಶ್ವರನ ಮೂರ್ತಿಯನ್ನು ಆವಾಹನದಿಂದ ವಿಸರ್ಜನದವರೆಗೆ ವಿಧಾನೋಕ್ತವಾಗಿ ಯಾವನು ಪೂಜಿಸುವನೋ ಅವನು ಪ್ರವರಶೈವನು ಇವನು ಸರ್ವತಂತ್ರಗಳಲ್ಲಿ ಪ್ರಸಿದ್ಧನು. ||೯|| ಪರಮಾತ್ಮನ ಚಿನ್ಹವನ್ನು ಕಂಡು ನಮಸ್ಕರಿಸಿ ಯಾವನು ನಿಶ್ಚಿಂತನಾಗಿರುವನೋ ಅವನು ಅನಂತರ ಶೈವನು || ಹೀಗೆ ಏಳುಜನರ ಸಾಮಾನ್ಯ ಲಕ್ಷಣವು ಹೇಳಲ್ಪಟ್ಟಿತು ||೧೦||

वामदक्षिणमिश्राणि सिद्धान्तं तत्ववेदिभिः ॥ ११ ॥
शक्तिः सर्वोत्तमा यत्र तद्वाममिति कथ्यते ॥
यत्रोत्तमो भैरवोऽभूद्दक्षिणः परिकीर्तितः ॥ १२ ॥
सप्तमातृपरो यस्तु मिश्रमित्यभिधीयते ।
शिवः सर्वोत्तमो यत्र सिद्धान्तो वीरशैवकः ॥ १३ ॥
स एव मुक्तेः सोपानं शैवतंत्रेषु निश्चितम् ।
शापदग्धदुराचारदुर्बुद्धीनां च दुर्लभम् ॥ १४ ॥
सिद्धान्तो वीरशैवश्च पुनश्चापि चतुर्विधः ।
धर्मार्थकाममोक्षेति पुरुषार्थो यथा तथा ॥ १५ ॥
सामान्यवीरशैवेति वीरशैवमतः परम् ।
विशेषवीरशैवेति निराभारी तथैव च ॥ १६ ॥
यथा क्षीरे दधितक्रनवनीतघृतादिकम् ।
एकैकस्याधिको भूत्वा एकैकस्य गुणः पृथक् ॥ १७ ॥

---

ಮತ್ತು ಈ ಶೈವವು ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂದು ನಾಲ್ಕು ಭೇದವಾಗಿರುವದೆಂದು ತತ್ವಬಲ್ಲವರು ಹೇಳುವರು. ಯಾವ ಶೈವದಲ್ಲಿ ಶಕ್ತಿಯು ಸರ್ವಶ್ರೇಷ್ಠವಾದುದಾಗಿ ಮಾನಿಸಲ್ಪಡುವದೋ ಅದು ವಾಮಶೈವವು, ಯಾವ ಶೈವದಲ್ಲಿ ಭೈರವನೇ ಮುಖ್ಯವಾಗಿ ಮಾನಿಸಲ್ಪಡುವನೋ ಅದು ದಕ್ಷಿಣ ಶೈವವು ॥೧೨॥

ಯಾವ ಶೈವದಲ್ಲಿ ಸಪ್ತಮಾತೃಕೆಯರು ಮುಖ್ಯರಾಗಿ ಮಾನಿಸಲ್ಪಡುತ್ತಾರೋ ಅದು ಮಿಶ್ರಶೈವವು. ಯಾವ ಶೈವದಲ್ಲಿ ಶಿವನೇ ಸರ್ವೋತ್ತಮನೆಂದು ಮಾನಿಸಲ್ಪಡುತ್ತಾನೆಯೋ ಅದು ಸಿದ್ಧಾಂತಶೈವವು ಇದೇ ವೀರಶೈವವು।೧೩। ಈ ಸಿದ್ಧಾಂತ ವೀರಶೈವವು ಚತುರ್ವಿಧಮುಕ್ತಿಗೆ ಸೋಪಾನವಾಗಿರುವದೆಂದು ಶೈವತಂತ್ರದಲ್ಲಿ ಹೇಳಲ್ಪಟ್ಟಿದೆ. ಈ ವೀರಶೈವವು, ಶಾಪದಿಂದ ಭ್ರಷ್ಟರಾದವರಿಗೂ, ದುರಾಚಾರಿಗಳಿಗೂ, ದುಷ್ಟಬುದ್ಧಿಯುಳ್ಳವರಿಗೂ ದುರ್ಲಭವಾದುದು ॥೧೪॥ ಈ ಸಿದ್ಧಾಂತ ವೀರಶೈವವು ಪುನಃ ನಾಲ್ಕು ವಿಧವಾಗಿರುತ್ತದೆ. ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ಹೇಗೆ ನಾಲ್ಕು ಭೇದವಿರುವದೊ ಅದರಂತೆ ॥೧೫॥ ೧. ಸಾಮಾನ್ಯ ವೀರಶೈವ, ೨. ವೀರಶೈವ, ೩. ವಿಶೇಷ ವೀರಶೈವ, ೪. ನಿರಾಭಾರಿ ವೀರಶೈವ ಎಂದು ನಾಲ್ಕುವಿಧ ॥೧೬॥

ಹಾಲಿನಲ್ಲಿ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಎಂಬ ನಾಲ್ಕು ಹೇಗೆ ಒಂದೆಕ್ಕಿಂತಲೂ ಮತ್ತೊಂದು ಶ್ರೇಷ್ಠವಾಗಿ ಭಿನ್ನ ಭಿನ್ನ ಗುಣವುಳ್ಳದ್ದಾಗಿದ್ದು ಸರ್ವರಿಗೂ

प्रदर्शयित्वा तृप्यन्ते सर्वे एकीभवन्ति हि ।
तथैव वीरशैवोऽसौ व्यावहारिकभेदवान् ॥ १८ ॥

एकस्य कर्म चैकस्य न चेदपि तथैव च ।
एकस्मिन्नपि चैकस्य मिश्रीभावो न चेदपि ॥ १९ ॥

चतुर्णामपि मुक्तौ तु गतिरेका न संशयः ।
तस्माच्च वीरशैवोऽसो सर्वोत्कृष्टो न संशयः ॥ २० ॥

---

ತೃಪ್ತಿಯನ್ನು ಉಂಟುಮಾಡುತ್ತಾ ಎಲ್ಲವೂ ಹಾಲಿನಲ್ಲಿ ಏಕವಾಗಿರುವವೋ ಅದರಂತೆ ವೀರಶೈವವು ವ್ಯಾವಹಾರಿಕ ಭೇದ ಉಳ್ಳದ್ದಾಗಿರುವದು ||೧೭-೧೮|| ವ್ಯವಹಾರದಲ್ಲಿ ಒಬ್ಬನ ಕಾರ್ಯವನ್ನು ಮತ್ತೊಬ್ಬನು ಮಾಡಲಿಕ್ಕೆ ಬರುವದಿಲ್ಲ ಮತ್ತು ಒಬ್ಬನಲ್ಲಿ ಮತ್ತೊಬ್ಬನು ಮಿಶ್ರವಾಗಲಿಕ್ಕೂ ಬರುವದಿಲ್ಲ ಉತ್ತರೋತ್ತರ ಶ್ರೇಷ್ಠವಾಗಿರುವದು. ||೧೯|| ಆದರೂ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯಲ್ಲಿ (ಪಾರಮಾರ್ಥದಲ್ಲಿ) ನಾಲ್ಕುವಿಧ ವೀರಶೈವರಿಗೂ ಒಂದೇ ರೀತಿಯಾದ ಮಾರ್ಗವಿರುತ್ತದೆ. ಇದರಲ್ಲಿ ಸಂದೇಹವಿಲ್ಲ. ಆದುದರಿಂದ ವೀರಶೈವವು ಸರ್ವೋತ್ಕೃಷ್ಟವಾದುದು ಸಂಶಯವಿಲ್ಲ ||೨೦||

## —: ವಿಶೇಷ ವಿಚಾರ :—

ಹಾಲಿನಿಂದ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಇವು ನಾಲ್ಕು ಹೊರಬೀಳುತ್ತವೆ. ಒಂದರಿಂದಲೇ ನಾಲ್ಕು ಹೊರಬಿದ್ದಿದ್ದರೂ ಆ ನಾಲ್ಕರ ರುಚಿ, ಗುಣ ಇವುಗಳು ಭಿನ್ನಭಿನ್ನವಾಗಿರುತ್ತವೆ ಮತ್ತು ಉತ್ತರೋತ್ತರ ಶ್ರೇಷ್ಠಗಳಾಗಿರುತ್ತವೆ. ಆದುದರಿಂದಲೇ ಇವು ವ್ಯವಹಾರದಲ್ಲಿ ಸ್ವತಂತ್ರವಾದ ಇರುವಿಕೆ (ಸತ್ತೆ) ಯುಳ್ಳವುಗಳಾಗಿರುತ್ತವೆ. ಒಂದರ ಕಾರ್ಯವನ್ನು ಮತ್ತೊಂದು ಮಾಡಲಾರದು. ಹೀಗಿದ್ದರೂ ಮಾನವನನ್ನು ತೃಪ್ತಿಪಡಿಸುವ ಕಾರ್ಯದಲ್ಲಿ ಹೇಗೆ ನಾಲ್ಕು ಏಕೀಭವಿಸುವವೊ ಅದರಂತೆ ವೀರಶೈವ ಒಂದರಲ್ಲಿ ಸಾಮಾನ್ಯ ವೀರಶೈವ, ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ನಾಲ್ಕು ಭೇದಗಳಿರುತ್ತವೆ. ಈ ಭೇದಗಳು ವ್ಯವಹಾರದಲ್ಲಿ ಮಾತ್ರ ಅವಶ್ಯವಾದವುಗಳು ಹಾಗೂ ಒಂದಕ್ಕಿಂತಲೂ ಮತ್ತೊಂದು ಶ್ರೇಷ್ಠವಾದುದಾಗಿಯೂ ಇರುತ್ತವೆ. ಒಂದರಲ್ಲಿ ಮತ್ತೊಂದು ಸಮಾವೇಶವಾಗುವದಿಲ್ಲ, ಒಂದರ ಕಾರ್ಯವನ್ನು ಮತ್ತೊಂದು ಮಾಡಲಿಕ್ಕೆ ಬರುವದಿಲ್ಲ. ಹೀಗಿದ್ದರೂ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯಲ್ಲಿ ಮಾತ್ರ ನಾಲ್ಕೂ ಸಮಾನಾಧಿಕಾರವುಳ್ಳವುಗಳಾಗಿರುತ್ತವೆ. ಅಂದರೆ ನಿರಾಭಾರಿ ವೀರಶೈವನಿಗೆ ಹೆಚ್ಚಿನ ಮುಕ್ತಿಯೂ, ಸಾಮಾನ್ಯ

परब्रह्ममुखोद्भूतपंचऋत्विग्भिरेव च ।
प्राप्य दीक्षां यथाशास्त्रं गुरुजंगमलिंगकान् ॥ २१ ॥
सेवयित्वा यथा शक्तिरयाचनपरो भवेत् ।
स्वयं दानपरो यस्तु सामान्यो वीरशैवकः ॥ २२ ॥
परब्रह्मस्वरूपेषु सद्योजातादिपंचसु ।
मुखेषु जनिताचार्यैर्दीक्षितोऽत्याश्रमी च सः ॥ २३ ॥
लिंगं प्राणमिति ज्ञात्वा पाशुपत्यादिकर्मसु ।
सुनिष्ठितं परं ब्रह्म पूजायां तत्परश्च यः ॥ २४ ॥

---

ವೀರಶೈವನಿಗೆ ಕಡಿಮೆ ಮುಕ್ತಿಯು ಎಂದಾಗಲಿ. ನಿರಾಭಾರಿಗೆ ತೀವ್ರವಾಗಿ ಮುಕ್ತಿಯೂ ಸಾಮಾನ್ಯನಿಗೆ ತಡವಾಗಿ ಮುಕ್ತಿಯು ಎಂದಾಗಲಿ ಭೇದವಿರುವದಿಲ್ಲ. ಅವರವರು ತಮ್ಮತಮ್ಮ ಸ್ಥಾನ ಮಾನ ಸ್ಥಲಕಟ್ಟಿಗೆ ತಕ್ಕಂತೆ ನಡೆಯುತ್ತಿದ್ದರೆ ವ್ಯವಹಾರಕ್ಕಾಗಿ ನಾಲ್ಕು ಭೇದಗಳಾಗಿದ್ದರೂ ನಾಲ್ವರಿಗೂ ಸಮಾನವಾದ ಮತ್ತು ಸಮಕಾಲಿಕವಾದ ಮುಕ್ತಿಯು ದೊರೆಯುತ್ತದೆ ಎಂಬುದೇ ಮುಖ್ಯ ಸಾರವು—ಅರ್ಥಾತ್ ವ್ಯವಹಾರದಲ್ಲಿ ಪರಸ್ಪರಭೇದವೂ ಪಾರಮಾರ್ಥಿಕದಲ್ಲಿ ಅಭೇದವೂ ಉಂಟು. ವೀರಶೈವರೆಲ್ಲರೂ ಒಂದೇ ಎಂಬ ಮಾತು ಪಾರಮಾರ್ಥಿಕದಲ್ಲಿ ಮಾತ್ರ ಅನ್ವಯಿಸುವದಲ್ಲದೆ ವ್ಯವಹಾರದಲ್ಲಿ ಅನ್ವಯಿಸುವದಿಲ್ಲ. ಎಂಬುದೇ ಮಥಿತಾರ್ಥವು ಈ ನಾಲ್ಕು ವಿಧ ವೀರಶೈವರ ವಿಶೇಷ ಲಕ್ಷಣವನ್ನು ಮುಂದೆ ಹೇಳುತ್ತಿರುವದರಿಂದ ಇಲ್ಲಿ ನಾಲ್ವರ ಸಾಮಾನ್ಯ ಸ್ವರೂಪವನ್ನು ವಿವರಿಸುವೆನು. ಪರಶಿವನ ಪಂಚಮುಖಗಳಿಂದ ಉದ್ಭೂತರಾದ ಪಂಚಾಚಾರ್ಯರಿಂದ ಶಾಸ್ತ್ರೋಕ್ತ ಪ್ರಕಾರವಾಗಿ ದೀಕ್ಷಾಸಂಸ್ಕಾರವನ್ನು ಹೊಂದಿ ಗುರು, ಲಿಂಗ, ಜಂಗಮ ಈ ಮೂರನ್ನು ॥೨೧॥ ತನ್ನ ಶಕ್ತಿಗೆ ಅನುಗುಣವಾಗಿ ಪೂಜಿಸುತ್ತ ಅನ್ಯರನ್ನು ತಾನು ಬೇಡದವನಾಗಿ ತಾನೇ ಅನ್ಯರಿಗೆ ದಾನಮಾಡುವವನು. ಸಾಮಾನ್ಯ ವೀರಶೈವನು॥೨೨॥ ಪರಬ್ರಹ್ಮ ಸ್ವರೂಪಗಳಾದ ಸದ್ಯೋಜಾತಾದಿ ಪಂಚಮುಖಗಳಲ್ಲಿ ಉದ್ಭೂತರಾದ ಪಂಚಾಚಾರ್ಯರಿಂದ ದೀಕ್ಷಾ ಸಂಸ್ಕಾರವನ್ನು ಹೊಂದಿದಂಥ ಮತ್ತು ಅತ್ಯಾಶ್ರಮಿ ಯೆನಿಸಿಕೊಂಡಂಥ. ಲಿಂಗವೇ ಪ್ರಾಣವೆಂದು ತಿಳಿದುಕೊಂಡಂಥ, ಪಾಶುಪತ್ಯಾದಿ ಕರ್ಮ ಗಳನ್ನು ನಿಷ್ಠೆಯಿಂದ ಮಾಡುತ್ತ, ಪರಬ್ರಹ್ಮ ಸ್ವರೂಪವಾದ ಇಷ್ಟಲಿಂಗದ ಪೂಜೆಯಲ್ಲಿ ಯಾವನು ನಿರತನಾಗಿರುವನೋ ಅವನೇ ವೀರಶೈವನೆಂದು ನಿಷ್ಠೆಯುಳ್ಳವರಿಂದ ಹೇಳ ಲ್ಪಡುವನು ॥೨೩॥೨೪॥ ಪರಶಿವನ ಪಂಚಮುಖಗಳಿಂದ ಉದ್ಭೂತರಾದ ಪಂಚಾ

स एव वीरशैवेति प्रथितस्तत्र निष्ठितैः ।
परस्य ब्रह्मणः पंचमुखेषूद्भूतपंचभिः ॥ २५ ॥
आचार्यैर्दीक्षितो भूत्वा पंचमुद्रांकितश्च यः ।
महावैराग्यशाली च संप्राप्तमनुभूय च ॥ २६ ॥
अप्राप्ते निरपेक्षः सन् सोऽहं ब्रह्मेति निश्चितः ।
त्यक्त्वा च लौकिकाचारान्विशेषो वीरशैवकः ॥ २७ ॥
विराट्स्वरूपभगवद्ब्रह्मणो मुखपंचकात् ।
समुद्भूतैर्दीक्षितो यो दूरीकृतमलत्रयः ॥ २८ ॥
षट्स्थलान्ते परब्रह्म सोऽहमेवेति निश्चितः
मुक्तिमार्गं समाश्रित्य लौकिकाचारवर्जितः ॥ २९ ॥
स एव च निराभारी वीरशैव इतीरितः ।
इतस्तत्तत्प्रभेदं च तत्तल्लक्षणमेव च ॥ ३० ॥
तैस्तैः कार्यं प्रवक्ष्यामि सावधानमनाः शृणु ।
सामान्यवीरशैवानां लक्षणं वक्ष्यते मया ॥ ३१ ॥

---

ಚಾರ್ಯರಿಂದ ದೀಕ್ಷಾಸಂಸ್ಕಾರವನ್ನು ಹೊಂದಿದಂಥ ಮತ್ತು ಪಂಚಮುದ್ರೆಗಳನ್ನು ಧರಿಸಿದಂಥ ಮಹಾವೈರಾಗ್ಯಶಾಲಿಯೂ, ಲಿಂಗಧಾರಣತೆಯಿಂದ ಬಂದುದರಲ್ಲಿ ಸಂತೋಷ ಪಡುತ್ತ, ಪ್ರಾಪ್ತವಾಗದಿದ್ದುದರಲ್ಲಿ ನಿರಪೇಕ್ಷನಾಗಿ, ಲೌಕಿಕಾಚಾರಗಳನ್ನು ತ್ಯಾಗ ಮಾಡಿ ನಾನು ಶಿವಸ್ವರೂಪನು ಎಂಬ ದೃಢವಾದ ನಂಬಿಕೆಯುಳ್ಳವನು ವಿಶೇಷ ವೀರಶೈವನು ||೨೫ ರಿಂದ ೨೭||

ವಿರಾಟ್‌ಸ್ವರೂಪನೂ, ಭಗವಂತನೂ, ಪರಬ್ರಹ್ಮನೂ ಆದ ಪರಶಿವನ ಪಂಚ ಮುಖಗಳಿಂದ ಆವಿರ್ಭವಿಸಿದ ಪಂಚಾಚಾರ್ಯರಿಂದ ದೀಕ್ಷಾ ಸಂಸ್ಕಾರವನ್ನು ಹೊಂದಿ ಆಣವ, ಮಾಯಾ, ಕಾರ್ಮಿಕ ಎಂಬ ಮಲತ್ರಯಗಳನ್ನು ಕಳೆದುಕೊಂಡು ಷಟ್‌ಸ್ಥಲ ಜ್ಞಾನಸಂಪನ್ನನಾಗಿ ನಾನೇ ಪರಬ್ರಹ್ಮನು ಎಂಬ ನಿಶ್ಚಿತ ಜ್ಞಾನವುಳ್ಳ, ಲೌಕಿಕಾಚಾರ ಗಳನ್ನು ಮತ್ತು ಪೂರ್ವಾಶ್ರಮದ ಗೋತ್ರ ಸೂತ್ರಾದಿಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿ ಲಿಂಗಾಂಗ ಸಾಮರಸ್ಯರೂಪ ಮುಕ್ತಿಯಲ್ಲಿ ನಿರತನಾದವನೇ ನಿರಾಭಾರಿ ವೀರಶೈವನು ||೨೮||೨೯||

ಇನ್ನುಮುಂದೆ ಅವರವರ ಭೇದವನ್ನು, ಲಕ್ಷಣವನ್ನು, ಅವರವರಿಂದ ಮಾಡ ಲ್ಪಡುವ ಕಾರ್ಯಗಳನ್ನು ಹೇಳುವೆನು ಸಾವಧಾನವಾಗಿ ಕೇಳು. ಮೊದಲಿಗೆ ಸಾಮಾನ್ಯ ವೀರಶೈವ ಲಕ್ಷಣವು ಹೇಳಲ್ಪಡುವದು ||೩೦||೩೧|| ಗುರುವಿನಿಂದ ಪ್ರಾಪ್ತ

पञ्चाक्षरीमंत्रयुतो भस्मरुद्राक्षचिन्हितः ।
शुद्धान्तःकरणश्चैव गुरुदत्तेष्टलिंगकः ॥ ३२ ॥
तदन्यलिंगविष्ण्वादिदेवतास्वप्यनादरः ।
स्वगोत्रप्रवरे निष्ठो गुरौ तनुसमर्पकः ॥ ३३ ॥
भूरुद्रेषु धनं चैव स्वेष्टलिंगे मनस्तथा ।
यथानुसारतो दत्वा निर्वंचनपरो भवेत् ॥३४ ॥

---

ವಾದ ಇಷ್ಟಲಿಂಗವನ್ನು ಯಾವಾಗಲೂ ಧಾರಣಮಾಡಿಕೊಂಡು ಭಸ್ಮ ರುದ್ರಾಕ್ಷಿ ಗಳನ್ನು ಧರಿಸುತ್ತ ಪಂಚಾಕ್ಷರೀ ಮಂತ್ರದ ಜಪ ಮತ್ತು ಧ್ಯಾನದಲ್ಲಿ ನಿರತನಾಗಿ ಶುದ್ಧಮನಸ್ಸಿನಿಂದಿರುವವನೂ ॥೩೨॥ ಇಷ್ಟಲಿಂಗಕ್ಕಿಂತಲೂ ಭಿನ್ನವಾದ ಸ್ಥಾವರ ಲಿಂಗದಲ್ಲಿ ಮತ್ತು ವಿಷ್ಣು ಮೊದಲಾದ ದೇವತೆಗಳಲ್ಲಿ ಭಕ್ತಿಯನ್ನಿಡದೆ ತನ್ನ ಗುರುವಿನ ಗೋತ್ರ ಸೂತ್ರಾದಿಗಳೇ ತನ್ನ ಗೋತ್ರ ಸೂತ್ರ ಪ್ರವರಗಳೆಂದು ತಿಳಿದುಕೊಂಡು ಅವುಗಳಲ್ಲಿ ನಿಷ್ಠೆಯುಳ್ಳವನೂ, ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಭೂರುದ್ರರೆನಿಸಿಕೊಂಡ ಮಾಹೇಶ್ವರ (ಜಂಗಮ) ರಿಗೆ ಧನವನ್ನು, ತನ್ನ ಶಕ್ತಿಗನು ಗುಣವಾಗಿ ಸಮರ್ಪಿಸಿ ವಂಚನಾರಹಿತನಾಗಿರುವವನೂ ॥೩೩॥ ಅಂದರೆ ಗುರು ಲಿಂಗ ಜಂಗಮಕ್ಕೆ ಸಮರ್ಪಣೆ ಮಾಡಿದಂಥ ತನು, ಮನ, ಧನ ಇವುಗಳು ನನ್ನವೆಂಬ ಅಭಿಮಾನ ರಹಿತನಾಗಿರುವವನು. ತನ್ನದಾದ ಶರೀರವನ್ನು ಗುರುವಿಗೆ ಅರ್ಪಣ ಮಾಡಿದ ಬಳಿಕ ಆ ಶರೀರವು ಗುರುವಿನದೇ ಆಗುವದು, ತನ್ನದಾಗುವದಿಲ್ಲ ಎಂದು ತಿಳಿದುಕೊಂಡು ನಡೆಯಬೇಕು. ಹಾಗೆ ಮಾಡದೇ ಬಾಯಿಯಿಂದ ತನುವನ್ನು ಗುರು ವಿಗೆ ಅರ್ಪಿಸಿರುವೆನೆಂದು ಹೇಳುತ್ತ ಆ ಶರೀರಾಭಿಮಾನವನ್ನು ಬಿಡದಿದ್ದರೆ ಗುರುವಿಗೆ ವಂಚನೆ ಮಾಡಿದಂತಾಗುತ್ತದೆ. ಮನವನ್ನು ಇಷ್ಟಲಿಂಗಕ್ಕೆ ಅರ್ಪಣ ಮಾಡಿದಬಳಿಕ ಅದು ಲಿಂಗ ಸಂಬಂಧಿ ಯಾಗುವದು, ತನ್ನದಾಗಿ ಉಳಿಯುವದಿಲ್ಲ. ಅದರ ಮೇಲೆ ತನ್ನ ಅಧಿಕಾರವಿರುವದಿಲ್ಲ. ಹೀಗೆ ತಿಳಿಯಬೇಕು. ಹಾಗೆ ತಿಳಿಯದಿದ್ದರೆ ಲಿಂಗಕ್ಕೆ ವಂಚನೆ ಮಾಡಿದಂತಾಗುತ್ತದೆ. ಧನವನ್ನು ಜಂಗಮಕ್ಕೆ ಅರ್ಪಿಸಿದಬಳಿಕ ಆ ಧನವು ಜಂಗಮನ ದಾಗುವದು. ತನ್ನದಾಗಿ ಉಳಿಯುವದಿಲ್ಲ. ಅದರ ಮೇಲೆ ತನ್ನ ಅಧಿಕಾರವಿರುವದಿಲ್ಲ. ಜಂಗಮನ ಆಜ್ಞಾನುಸಾರವಾಗಿ ಆ ಧನವನ್ನು ಉಪಯೋಗಿಸಿಕೊಳ್ಳಬೇಕು. ಹಾಗೆ ಮಾಡದಿದ್ದರೆ ಜಂಗಮಕ್ಕೆ ವಂಚನೆ ಮಾಡಿದಂತಾಗುವದು. ಕಾರಣ ನಿರ್ವಂಚಕ ನಾಗಿರಬೇಕು. ॥೩೪॥ ದೃಢವಾದ ಭಕ್ತಿಯೂ, ಶಿವನಲ್ಲಿ ನಿಷ್ಠೆಯೂ, ಯಾವಾಗಲೂ ಶಿವಧ್ಯಾನ ತತ್ಪರತೆಯೂ ಶಿವನಿಗೆ ಅನುಕೂಲವಾದ ಕ್ರಿಯೆಯೂ, ಯಾವಾಗಲೂ

सद्भक्तिश्च शिवे वांछा शिवध्यानपरायणः ।
शिवानुकूलव्यापारी शैवश्रवणतत्परः ॥ ३५ ॥

इत्यष्टविधभक्त्या च संयुतः सात्विकः सदा ।
शिवः सर्वात्मकः सर्वेऽप्यन्तरात्मान एव च ॥ ३६ ॥

इति बुध्वा पुराणादौ स्वमतानुगुणेषु च ।
आचार्योदितधर्मेषु रममाणः शिवानुगः ॥ ३७ ॥

इष्टलिंङ्गं पतिश्चैव गुरुरेव पिता मम ।
भूरुद्रास्तु स्वदेवाश्च इत्थं मनसि निश्चितः ॥ ३८ ॥

स्वगोत्रादन्यगोत्रेषु चतुर्ष्वेव विवाहवान् ।
प्रमादादिष्टलिङ्गं तु चोरादपहृतं भवेत् ॥ ३९ ॥

तदात्वघोरमंत्रं तु लक्षं जप्त्वा ततः शुचिः ।
ततश्चतुर्भिराचार्यैर्युक्तेन गुरुणा ततः ॥ ४० ॥

दत्तं लिङ्गं गले धृत्वा पुनरष्टोत्तरं शतम् ।
जप्त्वा तु शैवगायत्रीं शुचिर्भूत्वा ततः परम् ॥ ४१ ॥

---

ಶಿವನ ಸಂಬಂಧವಾದ ಗುಣಗಾನಾದಿಗಳನ್ನೇ ಕೇಳುತ್ತಿರುವದೂ ॥೩೫॥ ಈ ಪ್ರಕಾರ ಎಂಟು ವಿಧ ಭಕ್ತಿಯಿಂದ ಕೂಡಿದವನೂ, ಸದಾಕಾಲ ಸಾತ್ವಿಕ ರೀತಿಯಿಂದ ವರ್ತನ ಮಾಡುವವನೂ, ಶಿವನು ಸರ್ವಾಂತರ್ಯಾಮಿಯಾಗಿರುವದರಿಂದ ಸರ್ವವೂ ಶಿವಮಯ ವಾಗಿದೆ ಎಂಬ ದೃಢವಾದ ನಂಬಿಗೆಯುಳ್ಳವನೂ ತನ್ನ ಧರ್ಮಕ್ಕೆ ಅನುಗುಣಗಳಾದ ಪುರಾಣಾದಿಗಳನ್ನು ಕೇಳುತ್ತ ಗುರುವಿನಿಂದ ನಿರೂಪಿಸಲ್ಪಟ್ಟ ಧರ್ಮದಲ್ಲಿ ಆನಂದ ದಿಂದ ವರ್ತಿಸುತ್ತ ಶಿವನನ್ನು ಅನುಸರಿಸುವವನೂ ॥೩೬-೩೭॥ ಇಷ್ಟಲಿಂಗವೇ ತನಗೆ ಪತಿಯು ಗುರುವು ತಂದೆಯು ಜಂಗಮವೇ ತನಗೆ ಅಧಿದೇವತೆಯು ಎಂಬ ನಂಬಿಗೆ ಯುಳ್ಳವನೂ ॥೩೮॥ ತನ್ನ ಗೋತ್ರಕ್ಕಿಂತಲೂ ಭಿನ್ನಗಳಾದ ನಾಲ್ಕು ಗೋತ್ರ ಗಳಲ್ಲಿಯೇ ವಿವಾಹವನ್ನು ಮಾಡಿಕೊಳ್ಳುವವನೂ, ಪ್ರಮಾದದಿಂದ ಇಷ್ಟಲಿಂಗವು ಕಳೆಯಲಿ ಅಥವಾ ಕಳ್ಳರು ಅಪಹರಿಸಲಿ, ಆಗ ಅಘೋರ ಮಂತ್ರವನ್ನು ಒಂದು ಲಕ್ಷ ಜಪಮಾಡಿದರೆ ಶುದ್ಧನಾಗುವನು ತರುವಾಯ ಶ್ರೀಗುರುವು ನಾಲ್ಕುಜನ ಋತ್ವಿಕ್ಕುಗ

वृत्तम् । आचार्यपादोदकतत्प्रसादौ स्वीकृत्य निर्माल्यधरः स्वशीर्षे ।
तुर्याश्रमाणामयमेव धर्मस्तथापरेषां न हि नास्तिकानाम् ॥ ४२ ॥
पापात्मपाषण्डकवेदबाह्याः संस्कारहीना अपि शापदग्धाः ।
तेषामिदं कर्म न चोदितं मुदा सदाशिवेनोदितमत्र मानम् ॥४३॥
इति बुध्वा पूर्वरीत्या शुद्धान्तकरणो भवेत् ।
हस्तमस्तकसंयोगाद्गुरुणा भस्मधारिणा ॥ ४४ ॥
शिवमंत्रोपदेशेन लिंगांगी चाभवत्तदा ।
भविस्त्रीसंगरहितः कंठवक्षःस्थलादिषु ।
लिङ्गं बध्वा त्रिकालेषु जपस्नानपरायणः वृत्तम् । ॥ ४५ ॥
प्रसूतिदीक्षासु तथा विवाहे श्राद्धे महापर्वणि पुण्यकाले ।

---

ಳಿಂದ ಕೂಡಿಕೊಂಡು ಪುನಃ ಧರಿಸಿದಂಥ ಇಷ್ಟಲಿಂಗವನ್ನು ಕಂಠದಲ್ಲಿ ಧರಿಸಿಕೊಂಡು ಶಿವಗಾಯತ್ರೀ ಮಂತ್ರವನ್ನು ೧೦೮ ಸಾರೆ ಜಪಮಾಡಿ ಪರಿಶುದ್ಧನಾಗಬೇಕು ॥೩೯-೪೦-೪೧॥ ನಂತರ ಆಚಾರ್ಯನ ಪಾದೋದಕ ಪ್ರಸಾದಗಳನ್ನು ಸೇವಿಸಿ, ನಿರ್ಮಾಲ್ಯವನ್ನು (ಹೂಪತ್ರಿಗಳನ್ನು) ತಲೆಯಲ್ಲಿ ಧರಿಸಿಕೊಂಡು ಎಚ್ಚರಿಕೆಯಿಂದ ವರ್ತಿಸುವವನಾಗಬೇಕು. ಇದೇ ವೀರಶೈವರ (ಅತ್ಯಾಶ್ರಮಿಗಳ) ಧರ್ಮವು. ನಾಸ್ತಿಕರಾದ ಉಳಿದವರಿಗೆ ಇದು ಸಾಧ್ಯವಿರುವದಿಲ್ಲ ॥೪೨॥

ಪಾಪಿಷ್ಠರೂ, ಪಾಖಂಡಿಗಳೂ. ವೇದವಿರುದ್ಧವಾದ ಆಚರಣೆಯುಳ್ಳವರೂ, ಸಂಸ್ಕಾರ ರಹಿತರಾದವರೂ ಮತ್ತು ಶಾಪದಿಂದ ಭ್ರಷ್ಟರಾದವರೂ ಇಂಥವರೆಲ್ಲರಿಗೂ ಈ ಕ್ರಿಯೆಯು ಹೇಳಲ್ಪಟ್ಟಿರುವದಿಲ್ಲ. ಈ ಮಾತು ಸದಾಶಿವನಿಂದ ಒಳ್ಳೇ ಆನಂದದಿಂದ ಹೇಳಲ್ಪಟ್ಟಿತು ॥ ಹೀಗೆ ತಿಳಿದುಕೊಂಡು ಸರ್ವರೀತಿಯಿಂದಲೂ, ಪರಿಶುದ್ಧವಾದ ಮನಸ್ಸುಳ್ಳವನು, ಭಸ್ಮಧಾರಿಯಾದ ಗುರುವು ತನ್ನ ಬಲಹಸ್ತಕ್ಕೆ ಭಸ್ಮವನ್ನು ಧರಿಸಿಕೊಂಡು ಶಿಷ್ಯನ ಮಸ್ತಕದ ಮೇಲೆ ಇಟ್ಟು, ಶಿವಮಂತ್ರವನ್ನು ಉಪದೇಶ ಮಾಡಿದ ಬಳಿಕ ಲಿಂಗಾಂಗಿಯಾದವನು, ಭವಿಸ್ತ್ರೀ ಸಂಗರಹಿತನೂ, ಕಂಠ, ಎದೆ, ಮುಂತಾದ ಸ್ಥಾನಗಳಲ್ಲಿ ಲಿಂಗವನ್ನು ಧರಿಸಿಕೊಂಡವನಾಗಿ ಉದಯ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಶಕ್ಯವಾದ ಹಾಗೆ ಸ್ನಾನ ಪೂಜಾ ಜಪಾದಿಗಳನ್ನು ಮಾಡುವವನು ॥೪೪-೪೫॥

ಮನೆಯಲ್ಲಿ ಯಾರಾದರೂ ಹಡೆದ ಸಮಯದಲ್ಲಿ ಜಾತಕರ್ಮ (ಲಿಂಗಧಾರಣ) ದೀಕ್ಷಾ, ವಿವಾಹ, ಶ್ರಾದ್ಧ (ಹಿರಿಯರ ಪುಣ್ಯತಿಥಿ) ದೊಡ್ಡ ದೊಡ್ಡ ಹಬ್ಬ, ಹುಣ್ಣಿವೆ

शवादिसंस्थापनमुख्यकार्यें हित्वा स पञ्चार्यसमुद्भवांश्च ।
न कर्मकर्ता गुरुलिंगजङ्गमे तथाष्टवर्णेष्वपि भक्तियुक्तः ॥ ४६ ॥
स्वगृहे गर्भिणी जाता भार्या पुत्री तथा स्नुषा ।
तासामाचार्यमुख्यैश्च मंत्रोक्तविधिना ततः ॥ ४७ ॥
कुक्षिं भस्मांचितं कृत्वा रेखात्रयसमन्वितम् ।
त्रिमासेऽपि च षण्मासे नवमासे तथैव च ॥ ४८ ॥
शीर्षोदये तथा लिङ्गं बध्वा नालं समाच्छिदेत् ।
पञ्चवर्षे तथा दीक्षां कुर्याच्छास्त्रोक्तमार्गतः ॥ ४९ ॥
दंपत्योरेकनिष्ठात्वमेकदेवार्चनं तथा ।
उभयोरेककर्मत्वमेकमेव व्रतादिकम् ॥ ५० ॥

---

ಅಮಾವಾಸಿ, ಸಂಕ್ರಾಂತಿ, ಅಂತೇಷ್ಟಿವಿಧಿ ಮುಂತಾದ ಮುಖ್ಯ ಕಾರ್ಯಗಳಲ್ಲಿ ಪಂಚಾಚಾರ್ಯರ ಗೋತ್ರೋದ್ಭವರಾದ ಮಾಹೇಶ್ವರರನ್ನು ಬಿಟ್ಟು ಯಾವ ಕಾರ್ಯವನ್ನು ಮಾಡದೆ ಇರತಕ್ಕವನು (ಮಠಾಧಿಕಾರಿಗಳಿಂದಲೇ ಸರ್ವ ಕಾರ್ಯವನ್ನು ಮಾಡಿಸುವವನು), ಗುರು ಲಿಂಗ ಜಂಗಮ ಮುಂತಾದ ಅಷ್ಟಾವರಣಗಳಲ್ಲಿ ಭಕ್ತಿಯುಳ್ಳವನೂ ||೪೬|| ಮನೆಯಲ್ಲಿ ಹೆಂಡತಿ, ಮಗಳು, ಸೊಸಿ ಮುಂತಾದವರಲ್ಲಿ ಯಾರೇ ಗರ್ಭಿಣಿಯಾದರೆ ಮಠಸ್ಥರಾದ ಪಂಚಾಚಾರ್ಯಾನುಯಾಯಿಗಳನ್ನು ಮನೆಗೆ ಬರಮಾಡಿಕೊಂಡು ಅವರಿಂದ ವಿಧಾನಕ್ಕೆ ಅನುಗುಣವಾಗಿ ಗರ್ಭಕ್ಕೆ ಮಂತ್ರಪೂರ್ವಕ ಭಸ್ಮಸಂಸ್ಕಾರವನ್ನು ಮಾಡಿಸಬೇಕು. ಈ ತ್ರಿಪುಂಡ್ರ ಧಾರಣ ಸಂಸ್ಕಾರವನ್ನು ಮೂರನೆಯ, ಆರನೆಯ ಮತ್ತು ಒಂಭತ್ತನೆಯ ತಿಂಗಳಲ್ಲಿ ಮಾಡಬೇಕು ||೪೭-೪೮|| ಮತ್ತು

ಎಂಟನೆಯ ತಿಂಗಳಲ್ಲಿ ಅಥವಾ ಜನನವಾದಕೂಡಲೇ (ಹುರಿಕೊಯ್ಯುವದಕ್ಕಿಂತಲೂ ಪೂರ್ವದಲ್ಲಿ) ಲಿಂಗವನ್ನು ಧರಿಸಬೇಕು. ಲಿಂಗಧಾರಣ ಮಾಡಿದ ಬಳಿಕ ಹುರಿ ಕೊಯ್ಯಬೇಕು. ಐದನೆಯ ಅಥವಾ ಎಂಟನೆಯ ವರ್ಷದಲ್ಲಿ ದೀಕ್ಷಾ ಸಂಸ್ಕಾರವನ್ನು ಶಾಸ್ತ್ರೋಕ್ತ ರೀತಿಯಿಂದ ಗುರುಗಳಿಂದ ಮಾಡಿಸತಕ್ಕವನು ||೪೯|| ಮನೆಯಲ್ಲಿ ದಂಪತಿಗಳು ಒಂದೇ ದೇವರಲ್ಲಿ ನಿಷ್ಠೆಯುಳ್ಳವರೂ ಒಂದೇ ದೇವರನ್ನು ಪೂಜಿಸುವವರೂ ಒಂದೇ ವಿಧವಾದ ವ್ರತನಿಯಮಾದಿಗಳನ್ನು ಮಾಡುವವರೂ, ಪ್ರತಿಯೊಂದು ಕಾರ್ಯದಲ್ಲಿ ಐಕಮತ್ತ್ಯ ಉಳ್ಳವರೂ ||೫೦||

उभयोरेकवर्णत्वमेकमंत्रे च निष्ठता ।
अविभक्तेषु भिन्नत्वं तेष्वसंपर्कमाचरेत् ॥ ५१ ॥
भूरुद्रसेवासंकल्पयुक्तो भवति निष्ठितः ।
पञ्चसूत्यादिरहितो गुरौ जङ्गमलिंगके ॥ ५२ ॥
गुणं कुलं शिलाभावं तीर्थे संदेहमेव च ।
प्रसादेऽपि च संकल्पं रुद्राक्षेऽपि च नूतनताम् ॥ ५३ ॥
मंत्रेष्वशुचिताभावमकल्प्य च समाहितः ।
अत्याश्रमी कर्मकाण्डी सामान्यो वीरशैवकः ॥ ५४ ॥

इति सामान्यवीरशैवलक्षणम् ॥

अथ वक्ष्ये वीरशैवलक्षणम् मोक्षदायकम् ॥
ललाटे भस्मरेखाभिस्तिसृभिः संविराजितः ॥ ५५ ॥

---

ದಂಪತಿಗಳಿಬ್ಬರೂ ಒಂದೇ ಜಾತಿಯವರಿರಬೇಕು. ಇಬ್ಬರಿಗೂ ಒಂದೇ ಮಂತ್ರ ದಲ್ಲಿ ನಿಷ್ಠೆಯಿರಬೇಕು. (ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿ ಮಸಣೆಯ ಭಕ್ತೆ ಯಾಗಬಾರದು) ಶಿವನಲ್ಲಿ ಭಕ್ತಿಯುಳ್ಳವರಾಗಿದ್ದರೂಅಲಿಂಗಿಗಳಾದವರಲ್ಲಿ ಭಿನ್ನತ್ವ ಉಳ್ಳವನು, ಅಂಥವರ ಸಂಪರ್ಕವನ್ನು ಯಾವಾಗಲೂ ಮಾಡದೇ ಇರತಕ್ಕ ವನು ॥೫೧॥

ಒಳ್ಳೇ ನಿಷ್ಠೆಯಿಂದ ಭೂರುದ್ರರೆನಿಸಿಕೊಂಡ ಮಾಹೇಶ್ವರ (ಜಂಗಮರ) ಸೇವಾ ಮಾಡುವ ಸಂಕಲ್ಪವುಳ್ಳವನು, ಪಂಚಸೂತಕ (ಜನನ, ಮರಣ, ರಜಸ್ಸು, ಜಾತಿ, ಉಚ್ಛಿಷ್ಟ) ಎಂಬ ಸೂತಕರಹಿತನೂ, ಗುರು, ಲಿಂಗ, ಜಂಗಮ ಈ ಮೂರರಲ್ಲಿ ಕ್ರಮ ವಾಗಿ ಗುಣ, ಕುಲ, ಶಿಲಾಭಾವ ಇವನ್ನು, ಪಾದತೀರ್ಥದಲ್ಲಿ ಸಂಶಯವನ್ನು, ಪ್ರಸಾದ ದಲ್ಲಿ ಸಂಕಲ್ಪ ವಿಕಲ್ಪವನ್ನು, ರುದ್ರಾಕ್ಷಿಯಲ್ಲಿ ನೂತನತೆಯನ್ನು ॥೫೩॥ ಮಂತ್ರದಲ್ಲಿ ಅಶುಚಿ ಭಾವವನ್ನು ಕಲ್ಪನೆ ಮಾಡದೇ ಇರತಕ್ಕವನು. ಶಾಂತಮನಸ್ಸುಳ್ಳವನು, ನಿಷ್ಕಾಮಕರ್ಮಿಯೂ, ಅತ್ಯಾಶ್ರಮಿಯೂ ಆದವನು ಸಾಮಾನ್ಯ ವೀರಶೈವನೆನಿಸಿ ಕೊಳ್ಳುವನು ॥ ಇಲ್ಲಿಗೆ ಸಾಮಾನ್ಯ ವೀರಶೈವನ ಲಕ್ಷಣ ಮುಗಿದುದು ॥೫೪॥

ಅನಂತರ ಮೋಕ್ಷವನ್ನು ಕೊಡತಕ್ಕ ವೀರಶೈವನ ಲಕ್ಷಣವನ್ನು ಹೇಳುವೆನು ॥ ಹಣೆಯಲ್ಲಿ ಭಸ್ಮದ ಮೂರು ರೇಖೆಗಳಿಂದ ಶೋಭಿಸುತ್ತಿರುವಂಥ॥ ಪಂಚಾಕ್ಷರೀ

पञ्चाक्षरीमंत्रजपः षड्विधस्नानतत्परः ।
पीठाचार्यैः संधृतेष्टलिंगब्रह्मसमायुतः ॥ ५६ ॥
शिखासूत्रजटाभस्मशिवलांछनलांछितः ।
गोत्रप्रवरसूत्रादिवर्णशाखाविनिर्णयी ॥ ५७ ॥
अन्यगोत्रपरित्यागी स्वगोत्रे चैव तत्परः ।
खेटखट्वादिसहितः स्वदारादिव्रतान्वितः ॥ ५८ ॥
पाशुपत्यागमे चैव सर्वदा मुख्यजीवनः ।
ये शिवाचारसंपन्नास्तेष्वेवाभिरतस्सदा ॥ ५९ ॥
शिवाचारविहीना ये हित्वा तेष्वप्रवर्तकः ।
दुष्टान्निगृह्य शिष्टानां परिपालनतत्परः ॥ ६० ॥
गुरुरेव शरीरं मे लिङ्गं मे मन एव च ।
धनं मे जङ्गमा एव प्राणस्त्वाचार एव सः ॥ ६१ ॥
एवं मनसि निश्चित्य वर्तमानश्च नित्यशः ।
निषिद्धार्थान्परित्यागी अन್यदेवालयानि च ॥ ६२ ॥

---

ಮಂತ್ರದ ಜಪದಲ್ಲಿ ತತ್ಪರನಾದಂಥ, ಆರುವಿಧವಾದ ಸ್ನಾನದಲ್ಲಿ ನಿರತನಾದ, ಸಿಂಹಾಸನಾಧಿಪತಿಗಳಾದ ಮಹಾಚಾರ್ಯರಿಂದ ಧರಿಸಲ್ಪಟ್ಟ ಬ್ರಹ್ಮಸ್ವರೂಪ ಇಷ್ಟಲಿಂಗದಿಂದ ಕೂಡಿಕೊಂಡಿರುವಂಥ ॥ ಶಿಖಾ ಸೂತ್ರ ಜಟಾ ಭಸ್ಮ ರುದ್ರಾಕ್ಷಾದಿ ಶಿವಲಾಂಛನದಿಂದ ಭೂಷಿತನಾದಂಥ ತನ್ನ ಗೋತ್ರ, ಸೂತ್ರ, ಪ್ರವರ, ವರ್ಣ, ಶಾಖಾ ಇವುಗಳ ಜ್ಞಾನವುಳ್ಳವನಾಗಿರುವಂಥ ॥೫೫-೫೬-೫೭

ಅನ್ಯರ ಗೋತ್ರದ ಹೆಸರು ಹೇಳದೆ ತನ್ನ ಗೋತ್ರಾದಿಗಳ ಸ್ಮರಣೆಯುಳ್ಳವನಾದಂಥ॥ ಗ್ರಾಮ,ಸೀಮೆ, ಮನೆ ಮಠ ಮುಂತಾದವುಗಳಿಂದ ಸಹಿತನಾದಂಥ,ಏಕಪತ್ನೀ ವ್ರತಸ್ಥನಾದ ॥೫೮॥ ಪಾಶುಪತ್ಯಾಗಮದಮೇಲೆ ಬಹಳ ಪ್ರೀತಿಯುಳ್ಳ ಯಾರು ಶಿವಾಚಾರ ಸಂಪನ್ನರಾಗಿರುವರೋ ಅವರ ಮೇಲೆ ಬಹಳ ಪ್ರೀತಿಯುಳ್ಳ ॥೫೯॥ ಶಿವಾಚಾರವಿಲ್ಲದವರನ್ನು ತ್ಯಾಗಮಾಡಿದಂಥ (ಅವರ ಸಂಪರ್ಕ ಮಾಡದಿರುವಂಥ) ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡುವವನಾದಂಥ ॥೬೦॥ ಗುರುವೇ ನನ್ನ ಶರೀರ, ಲಿಂಗವೇ ನನ್ನ ಮನಸ್ಸು, ಜಂಗಮನೇ ನನ್ನ ಧನವು, ಆಚಾರವೇ ನನ್ನ ಪ್ರಾಣ ಎಂದು ಮನಸ್ಸಿನಲ್ಲಿ ನಿರ್ಣಯಮಾಡಿಕೊಂಡು ಯಾವಾಗಲೂ ವರ್ತಿಸುತ್ತಿರುವಂಥ ನಿಷಿದ್ಧವಾದ ಆಚಾರಗಳನ್ನು ಮತ್ತು ಅನ್ಯ ದೇವಾಲಯಗಳನ್ನು ತ್ಯಾಗ ಮಾಡಿದಂಥ ॥೬೧-೬೨॥

भविसंबंधयुक्ता ये हित्वा तांश्च प्रवर्तकः ।
ब्रह्मण्येव सदा कामी क्रोधवान्करणादिषु ॥ ६३ ॥
लोभी प्रसादमुख्येषु भूरुद्रेषु च मोहवान् ।
अन्यव्रतेषु मदवान्मात्सर्यं च शिवद्विषि ॥ ६४ ॥
अष्टाविंशतिसंख्याकपाशुपत्यागमादिषु ।
स्वमतानुगुणेष्वेव सत्कर्मसु सदा रतः ॥ ६५ ॥
स्वगोत्रादन्यगोत्रेषु चतुर्ष्वेव विवाहवान् ।
हित्वा स्नानजपादीनि न गृहीतान्नपानवान् ॥ ६६ ॥
मलमूत्रोत्सर्जनान्ते शुचिर्भूतः सदा व्रती ।
दीक्षिताभिर्दंपतीभिः कृतनैवेद्यभोजनः ॥ ६७ ॥

---

ಯಾರು ಭವಿಗಳ ಸಂಬಂಧವುಳ್ಳವರಾಗಿರುವರೋ ಅಂಥ ಜನರನ್ನು ಸಹ ತ್ಯಾಗಮಾಡಿ ವರ್ತನೆಮಾಡುವಂಥ ಯಾವಾಗಲೂ ಬ್ರಹ್ಮಚಿಂತನೆಯಲ್ಲಿಯೇ ಕಾಮ(ಇಚ್ಛೆ)ವುಳ್ಳಂಥ ಇಂದ್ರಿಯಗಳ ವಿಷಯದಲ್ಲಿ ಕ್ರೋಧವುಳ್ಳಂಥ ॥೬೩॥ ಪ್ರಸಾದ ಮೊದಲಾದವುಗಳಲ್ಲಿ ಲೋಭವುಳ್ಳಂಥ, ಭೂರುದ್ರರಾದ ಮಾಹೇಶ್ವರ (ಜಂಗಮ) ರಲ್ಲಿ ಮೋಹವುಳ್ಳಂಥ (ಜಂಗಮರ ಮೇಲೆ ಪ್ರೀತಿಯುಳ್ಳ) ಬೇರೆ ವ್ರತಗಳ ವಿಷಯದಲ್ಲಿ ಮದವುಳ್ಳ ಅಂದರೆ ಶಿವವ್ರತವನ್ನು ಬಿಟ್ಟು ಅನ್ಯವ್ರತಗಳನ್ನು ನಾನು ಎಂದೂ ಮಾಡುವದಿಲ್ಲವೆಂಬ ಅಹಂಕಾರವುಳ್ಳ ಶಿವನ ವಿಷಯದಲ್ಲಿ ದ್ವೇಷವುಳ್ಳವರ ಮೇಲೆ ಮಾತ್ಸರ್ಯವುಳ್ಳಂಥ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬವು ಅಂತಃಶತ್ರುಗಳೆಂದು ಪರಿಗಣಿಸುವದರಿಂದ ಸಾಮಾನ್ಯವಾಗಿ ತ್ಯಾಜ್ಯಗಳಾಗಿದ್ದರೂ, ಮೇಲೆ ವಿವರಿಸಿದ ರೀತಿಯಂತೆ ಆ ಕಾಮಾದಿಗಳು ಗ್ರಾಹ್ಯಗಳೂ ಆಗುತ್ತವೆ ಎಂದು ಭಾವವು ॥೬೪॥

ಪಾಶುಪತ್ಯವೇ ಮೊದಲಾದ ೨೮ ಶಿವಾಗಮಗಳಲ್ಲಿ ಪರಿಶ್ರಮ ಪಡುತ್ತ ತನ್ನ ಮತಕ್ಕೆ (ವೀರಶೈವಕ್ಕೆ) ಅನುಗುಣಗಳಾದ ಒಳ್ಳೇ ಕರ್ಮಗಳಲ್ಲಿ ಯಾವಾಗಲೂ ತತ್ಪರನಾದಂಥ ॥೬೫॥ ತನ್ನ ಗೋತ್ರಕ್ಕಿಂತಲೂ ಭಿನ್ನಗಳಾದ ನಾಲ್ಕು ಗೋತ್ರಗಳಲ್ಲಿಯೇ ವಿವಾಹವನ್ನು ಮಾಡಿಕೊಳ್ಳುವಂಥ, ಪ್ರತಿದಿನ ಸ್ನಾನ, ಪೂಜಾ, ಜಪಾದಿಗಳನ್ನು ಮಾಡದೇ ಆಹಾರಾದಿಗಳನ್ನು ತೆಗೆದುಕೊಳ್ಳದಿರುವಂಥ ॥೬೬॥ ಮಲ ಮೂತ್ರ ವಿಸರ್ಜನಾನಂತರ ಶೌಚಾಚಮನವನ್ನು ಮಾಡುವಂಥ, ಶಿವವ್ರತವುಳ್ಳ ದೀಕ್ಷಿತರಾದ ದಂಪತಿಗಳಿಂದ ತಯಾರ ಮಾಡಲ್ಪಟ್ಟ ಪಾಕವನ್ನು ಭೋಜನ ಮಾಡುವಂಥ ॥೬೭॥

सामान्यवीरशैवेषु दीक्षाश्राद्धादिकर्मसु ।
विरागकृतवाणिज्यव्यवहारेषु सर्वदा ।
शवस्थापनकर्मादावधिष्ठाता न संशयः ॥ ६८ ॥
द्रव्याशया हीनजातौ जातिभ्रष्टकुलेषु च ।
अगृहीतान्नपानादिदीक्षाकर्मसु निष्ठितः ॥ ६९ ॥
सत्यवाग्मी सदाचारी स्वधर्मनिरतस्सदा ।
जितेंद्रियपरो भूत्वा जगद्भरितकीर्तिमान् ॥ ७० ॥
अतिथींश्च निराभारान्दृष्ट्वा संरक्षणापरः ।
लुप्तव्रतशिवाचारे दंडशिक्षादितत्परः ॥ ७१ ॥
इष्टलिङ्गयुतानां तु पितृवत्परिपालकः ।
बहुलक्रियया नाल्पफलभोगी भवेच्च सः ।
अत्यल्पक्रिययानल्पफलभोगी न संशयः ॥ ७२ ॥

---

ಸಾಮಾನ್ಯವೀರಶೈವರಲ್ಲಿ ದೀಕ್ಷಾ ಶ್ರಾದ್ಧ ಮೊದಲಾದ ಕಾರ್ಯಗಳಲ್ಲಿ ಶವಸಂಸ್ಕಾರ ಮಾಡುವದರಲ್ಲಿ ಮುಖ್ಯಾಧಿಕಾರಿಯಾದಂಥ ॥ ೬೮ ॥ ದುಡ್ಡಿನ ಆಶೆಯಿಂದ ಹೀನ ಜಾತಿಯವರಲ್ಲಿ ಮತ್ತು ಜಾತಿಭ್ರಷ್ಟರಾದವರಲ್ಲಿ ಆಹಾರಾದಿಗಳನ್ನು ತೆಗೆದುಕೊಳ್ಳದೇ ಇರುವಂಥ. ದೀಕ್ಷಾ ಮಾಡುವ ಕಾರ್ಯದಲ್ಲಿ ನಿಷ್ಠೆಯುಳ್ಳಂಥ ॥ ೬೯ ॥ ಸತ್ಯ ಮಾತಾಡುವಂಥ ಸದಾಚಾರಿಯಾದಂಥ ತನ್ನ ಧರ್ಮದಲ್ಲಿ ನಿರತನಾದಂಥ ಇಂದ್ರಿಯ ಗಳನ್ನು ನಿಗ್ರಹಿಸಿದಂಥವನಾಗಿ ಜಗತ್ತಿನ ತುಂಬಾ ಹರಡಿದ ಕೀರ್ತಿಯುಳ್ಳಂಥ ॥ ೭೦ ॥ ಅತಿಥಿಗಳಾದ ನಿರಾಭಾರಿಗಳನ್ನು ನೋಡಿ ಅವರ ಸಂರಕ್ಷಣೆ ಮಾಡುವದರಲ್ಲಿ ತತ್ಪರ ನಾದಂಥ ಶಿವವ್ರತವನ್ನು, ಶಿವಾಚಾರವನ್ನೂ, ಲೋಪ ಮಾಡಿದವರಿಗೆ ದಂಡ ಶಿಕ್ಷೆ ಮೊದಲಾದವುಗಳನ್ನು ಮಾಡುವದರಲ್ಲಿ ಸಮರ್ಥನಾದಂಥ ॥ ೭೧ ॥ ಇಷ್ಟಲಿಂಗವನ್ನು ಧರಿಸಿದವರಿಗೆ ತಂದೆಯಂತೆ ಸಂರಕ್ಷಕನಾದಂಥ, ಬಹಳ ಕ್ರಿಯೇಯನ್ನು ಮಾಡಿ ಅಲ್ಪವಾದ ಫಲವನ್ನು ಭೋಗಿಸುವವನು ಅಲ್ಲದಂಥ, ಮತ್ತು ಸ್ವಲ್ಪೇಕ್ರಿಯೆಯಿಂದ ಅಧಿಕವಾದ ಫಲವನ್ನು ಭೋಗಿಸುವವನಾದಂಥ ॥ ೭೨ ॥ ಯಾವಾಗಲೂ ಲಿಂಗವನ್ನು

सदा लिंगांगसंबंधी लिंगभोगोपभोगवान् ।
इष्टलिंगे न चाह्वानविसर्जनपरो भवेत् ॥ ७३ ॥
लिङ्गव्रतादिलोपेषु प्राणत्यागी न संशयः ।
एतस्मिन्विषये चान्यप्रायश्चित्तविवर्जितः ॥ ७४ ॥
शिवस्य जङ्गमस्यापि प्रसादस्य तथैव च ।
पादोदकस्य मंत्रस्य तथा वै भस्मधारणे ॥ ७५ ॥
शिवागमशिवक्षेत्रशिवाचारे तथैव च ।
यो निंदां कुरुते तस्मिन्नसहिष्णुर्भवेच्च सः ॥ ७६ ॥
विष्ण्वादिदेवतास्सर्वा अगणय्य प्रवर्तकः ।
लिंगलांछनहीनैश्च न शय्या सहभोजनम् ॥ ७७ ॥
अनृतास्थिरवाक्येषु विप्रलंभे च निर्दये ।
पङ्क्तिभेदेऽप्युदासीने न मनोधारकस्सदा ॥ ७८ ॥

---

ಅಂಗದ ಮೇಲೆ ಧರಿಸಿದಂಥ ಲಿಂಗಭೋಗೋ..ಭೋಗಿಯಾದಂಥ ಅಂದರೆ ಯಾವುದಾದರೊಂದು ಪದಾರ್ಥವನ್ನು ತಾನು ಅನುಭೋಗಿಸಬೇಕಾದ ಪ್ರಸಂಗದಲ್ಲಿ ಆ ಪದಾರ್ಥವನ್ನು ಮೊದಲು ಲಿಂಗಕ್ಕೆ ಅರ್ಪಣ ಮಾಡಿ ಅನಂತರ ಆ ಲಿಂಗಪ್ರಸಾದವನ್ನು ತಾನು ಅನುಭೋಗಿಸುವಂಥ (ಲಿಂಗಕ್ಕೆ ಅರ್ಪಿಸದೇ ಯಾವುದನ್ನೂ ತಾನು ಸೇವಿಸದೇ ಇರುವ ಥ) ಇಷ್ಟಲಿಂಗದಲ್ಲಿ ಆಹ್ವಾನವಿಸರ್ಜನೆಗಳನ್ನು ಮಾಡದೇ ಇರುವಂಥ ॥೭೩॥ ಲಿಂಗದ ಮತ್ತು ವ್ರತದ ಲೋಪವಾದಲ್ಲಿ ನಿಸ್ಸಂಶಯವಾಗಿ ಪ್ರಾಣವನ್ನು ತ್ಯಾಗ ಮಾಡುವಂಥ ಈ ವಿಷಯದಲ್ಲಿ (ಲಿಂಗಾದಿ ಲೋಪವಾದಲ್ಲಿ) ಬೇರೇ ಪ್ರಾಯಶ್ಚಿತ್ತವಿಲ್ಲದೇ ಇರತಕ್ಕಂಥ ॥ ೭೪ ॥ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಮಂತ್ರ, ರುದ್ರಾಕ್ಷಿ, ಭಸ್ಮ ಈ ಎಂಟರಲ್ಲಿ ॥ ೭೫ ॥ ಮತ್ತು ಶಿವಾಗಮ, ಶಿವಕ್ಷೇತ್ರ, ಶಿವಾಚಾರ ಇತ್ಯಾದಿಗಳಲ್ಲಿ ಯಾವನು ನಿಂದೆಯನ್ನು ಮಾಡುವನೋ ಅವನಲ್ಲಿ ಅಸಹಿಷ್ಣುವಾದ ॥೭೬॥ ವಿಷ್ಣು ಮೊದಲಾದ ಯಾವತ್ತೂ ದೇವತೆಗಳನ್ನು ಗಣನೆಗೆ ತರದೇ ಕಾರ್ಯಪ್ರವರ್ತಕನಾದ ಶಿವಲಿಂಗ ಮತ್ತು ಶಿವಲಾಂಛನಗಳನ್ನು ಧರಿಸದೇ ಇದ್ದಂಥವರೊಡನೆ ಕೂಡಿ ಇರುವಿಕೆ, ಕೂಡಿ ಮಲಗುವಿಕೆ, ಸಹಭೋಜನ ಮೊದಲಾದವುಗಳನ್ನು ಮಾಡದೇ ಇದ್ದಂಥ ॥ ೭೭ ॥ ಸುಳ್ಳು ಹೇಳುವದು, ಅಸ್ಥಿರವಾದ ಮಾತು, ವಂಚನೆ, ನಿರ್ದಯ, ಪಂಕ್ತಿಭೇದ ಇತ್ಯಾದಿಗಳಲ್ಲಿ ಯಾವಾಗಲೂ ಮನಸ್ಸನ್ನು ಇಡದೇ ಇರತಕ್ಕಂಥ ॥ ೭೮ ॥ ಶಿವಯೋಗಿಗಳನ್ನು ನೋಡಿದ ಕೂಡಲೇ ಎದ್ದು

दृष्ट्वा च शिवयोगींस्तान्प्रत्युत्थानपरायणः ।
तैः साकं प्रियवाक्यादीनुक्त्वा दत्तासनः शुचिः ॥ ७९ ॥
अन्न पानादिकं दत्वा मुक्तेः सोपानसंमतैः ।
संयुक्तः पञ्चसूत्यादिवर्जितश्च शिवव्रती ॥ ८० ॥
लिङ्गार्चनाख्ययजनं कर्ता कारयिता च सः ।
शैवशास्त्रोक्तपूजाया उपदेष्टा तथैव च ॥ ८१ ॥
शिवप्रसाददानी च पादोदकग्रही तथा ।
लिंगाचारे सदाचारे शिवाचारे तथैव च ॥ ८२ ॥
भृत्याचारे गणाचारे पञ्चाचारेषु निष्ठितः ।
निष्ठावान्वीरदासत्वे दासत्वादौ च षड्विधे ॥ ८३ ॥
निष्ठितः परया भक्त्या वर्तमानः सुनिष्ठितः ।
सुतीर्त्वा सकलाचारान् स्वतंत्रः शिवधर्मवित् ॥ ८४ ॥
व्यावहारिकभेदस्तु संसारे चेति निष्ठितः ।
मुक्तौ त्वभेद एवेति सुनिश्चितमुदान्वितः ॥ ८५ ॥

---

ನಿಲ್ಲುವವನಾಗಿ ಮುಂದಕ್ಕೆ ಹೋಗಿ ಅವರೊಡನೆ ಪ್ರೇಮದ ಮಾತುಗಳನ್ನಾಡಿ ಬರಮಾಡಿಕೊಂಡು ಆಸನಾದಿಗಳಲ್ಲಿ ಕೂಡ್ರಿಸಿ ॥ ೭೯ ॥ ನಂತರ ಶುಚಿಯಾಗಿ ಆಹಾರಾದಿಗಳನ್ನು ಕೊಟ್ಟು ಮುಕ್ತಿಗೆ ಸೋಪಾನಗಳಂತಿರುವ ಈ ಕಾರ್ಯಗಳಿಂದ ಕೂಡಿದವನಾಗಿ ಪಂಚಸೂತಕ ರಹಿತನೂ, ಶಿವವ್ರತಿಯೂ ಆದಂಥ ॥ ೮೦ ॥ ಲಿಂಗ ಪೂಜಾರೂಪ ಯಜನಕರ್ಮವನ್ನು ಮಾಡುವಂಥ ಮತ್ತು ಮಾಡಿಸುವಂಥ ಶೈವಾಗಮ ಗಳಲ್ಲಿ ಹೇಳಿದ ಶಿವಪೂಜೆಯ ಉಪದೇಶಕನಾದಂಥ ॥ ೮೧ ॥ ಮತ್ತು ಶಿವಪ್ರಸಾದ ವನ್ನು ಕೊಡುವವನೂ, ಪಾದೋದಕವನ್ನು ಸ್ವೀಕರಿಸುವವನೂ ಹಾಗೂ ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ, ಗಣಾಚಾರ ಎಂಬ ಪಂಚಾಚಾರಗಳಲ್ಲಿ ನಿಷ್ಠೆಯುಳ್ಳಂಥ ॥ ೮೨ ॥ ದಾಸವೃತ್ತಿ, ವೀರದಾಸವೃತ್ತಿ ಇವುಗಳಲ್ಲಿ ನಿಷ್ಠೆಯುಳ್ಳಂಥ ॥ ೮೩ ॥ ಅಧಿಕವಾದ ಭಕ್ತಿಯಿಂದ ಇರತಕ್ಕವನಾಗಿ ಎಲ್ಲಾ ಆಚಾರಗಳನ್ನು ದಾಟಿ ಸ್ವತಂತ್ರನೂ, ಶಿವಧರ್ಮವನ್ನು ತಿಳಿದವನೂ ॥ ೮೪ ॥ ಪ್ರಪಂಚದಲ್ಲಿ ಮಾತ್ರ ವ್ಯವಹಾರಕ್ಕಾಗಿ ಭೇದವುಳ್ಳವನೂ, ಮುಕ್ತಿಯಲ್ಲಿ ಅಭೇದವುಳ್ಳವನೂ ಹೀಗೆ ನಿರ್ಧರಿಸಲ್ಪಟ್ಟ ಆನಂದದಿಂದ ಕೂಡಿಕೊಂಡಂಥ ॥ ೮೫ ॥ ಅತ್ಯಾಶ್ರಮಿಯೂ

अत्याश्रमी जगत्पूज्यो श्रेष्ठः सत्कर्मकाण्डवान् ।
एतादृशैर्वीरशैवलक्षणैर्लक्षितः पुमान् । इति वीरशैवलक्षणम् ॥८६॥

---

ಜಗತ್ಪೂಜ್ಯನೂ, ಶ್ರೇಷ್ಠನೂ, ಅನೇಕ ಒಳ್ಳೇ ಕಾರ್ಯಗಳುಳ್ಳವನೂ ಈ ವಿಧವಾದ ವೀರಶೈವ ಲಕ್ಷಣಗಳಿಂದ ಗುರ್ತಿಸಲ್ಪಡತಕ್ಕವನು ವೀರಶೈವನು ॥ ೮೬ ॥

ಇಲ್ಲಿಗೆ ವೀರಶೈವ ಲಕ್ಷಣ ಮುಗಿದುದು.

—: ವಿಶೇಷ ವಿಚಾರ :—

ವೀರಶೈವ ವಿಭಾಗವನ್ನು ಇತರ ಗ್ರಂಥಗಳಲ್ಲಿ ಸಾಮಾನ್ಯವೀರಶೈವ, ವಿಶೇಷ ವೀರಶೈವ, ನಿರಾಭಾರಿವೀರಶೈವ ಎಂದು ಮೂರು ಪ್ರಕಾರವಾಗಿ ಹೇಳಿರುತ್ತಾರೆ. ಈ ಗ್ರಂಥಕಾರನು ಸಾಮಾನ್ಯ ವೀರಶೈವ, ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ನಾಲ್ಕು ಭಾಗವನ್ನು ಮಾಡಿರುವನು. ಆದರೆ ಎಲ್ಲಿಯೇ ವಿಭಾಗ ಮಾಡಲಿ ಅಲ್ಲಿ ವಿಭಾಜ್ಯ ವಿಭಾಜಕ ಧರ್ಮಗಳು ಭಿನ್ನಗಳಾಗಿದ್ದು ಪರಸ್ಪರ ವ್ಯಾಪ್ಯ-ವ್ಯಾಪಕಗಳಾಗಿರುತ್ತವೆ. ಉದಾ:– ಸಪ್ತ ಪದಾರ್ಥಗಳು ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ, ಇಲ್ಲಿ ಪದಾರ್ಥತ್ವಧರ್ಮವು ವಿಭಾಜ್ಯವಾದುದರಿಂದ ವ್ಯಾಪಕವಾಗಿರುತ್ತದೆ. ದ್ರವ್ಯತ್ವ, ಗುಣತ್ವ ಮೊದಲಾದ ವಿಭಾಜಕ ಧರ್ಮಗಳು ವ್ಯಾಪ್ಯಗಳಾಗಿರುತ್ತವೆ. ಹಾಗು ವಿಭಾಜ್ಯಧರ್ಮಕ್ಕಿಂತಲೂ ಪರಸ್ಪರವಾಗಿಯೂ ಭಿನ್ನಗಳಾಗಿರುತ್ತವೆ. ಅರ್ಥಾತ್ ದ್ರವ್ಯಾದಿ ಏಳರಲ್ಲಿ ಪದಾರ್ಥ ಎಂಬುದನ್ನು ಒಂದನ್ನಾಗಿ ಸೇರಿಸಲಿಕ್ಕೆ ಬರುವದಿಲ್ಲ. ಮತ್ತು ಪುರುಷಾರ್ಥಗಳು ನಾಲ್ಕು–ಧರ್ಮ, ಅರ್ಥ, ಕಾಮ. ಮೋಕ್ಷ, ಇಲ್ಲಿ ವಿಭಾಜ್ಯವಾದ ಪುರುಷಾರ್ಥತ್ವವು ವ್ಯಾಪಕವಾಗಿಯೂ, ವಿಭಾಜಕಗಳಾದ ಧರ್ಮತ್ವಾದಿಗಳು ವ್ಯಾಪ್ಯಗಳಾಗಿಯೂ ಹಾಗು ವಿಭಾಜ್ಯಧರ್ಮಕ್ಕಿಂತಲೂ ಪರಸ್ಪರವಾಗಿಯೂ ಭಿನ್ನಗಳಾಗಿರುತ್ತವೆ. ಈ ನಾಲ್ಕರಲ್ಲಿ ಪುರುಷಾರ್ಥ ಇದನ್ನು ಒಂದನ್ನಾಗಿ ಸೇರಿಸಲಿಕ್ಕೆ ಬರುವದಿಲ್ಲ. ಇನ್ನೂ ಎಷ್ಟೋ ಉದಾಹರಣೆಗಳನ್ನು ಕೊಡಬಹುದು.

ಇದರಂತೆ ವೀರಶೈವ ವಿಭಾಗದಲ್ಲಿ ವಿಭಾಜ್ಯವಾದ ವೀರಶೈವತ್ವಧರ್ಮವು ವ್ಯಾಪಕವಾಗಿಯೂ ವಿಭಾಜಕಗಳಾದ ಸಾಮಾನ್ಯವೀರಶೈವತ್ವಾದಿ ಧರ್ಮಗಳು ವ್ಯಾಪ್ಯಗಳಾಗಿಯೂ ವಿಭಾಜ್ಯ ಧರ್ಮಕ್ಕಿಂತಲೂ ಭಿನ್ನಗಳಾಗಿಯೂ ಇರಬೇಕಾದುದು ಸಹಜ. ಅರ್ಥಾತ್ ವೀರಶೈವ ವಿಭಾಗದಲ್ಲಿ ಸಾಮಾನ್ಯ ವೀರಶೈವ ಇತ್ಯಾದಿಗಳೊಳಗೆ ಕೇವಲ "ವೀರಶೈವ" ಎಂಬುದು ಸೇರಲಿಕ್ಕೆ ಬರುವದಿಲ್ಲ. ವಿಭಾಜ್ಯ ವಿಭಾಜಕ ಧರ್ಮವು ಒಂದೇ ಆಗುವದರಿಂದ ವಿರೋಧವಾಗುತ್ತಿದೆ ಎಂದು ಯಾರೂ ಸಂಶಯಪಡಬಾರದು. ಏಕೆಂದರೆ ೩೮ ಶ್ಲೋಕಗಳಿಂದ ಸಾಮಾನ್ಯ ವೀರಶೈವನ ಲಕ್ಷಣವನ್ನು ಹಾಗು ೩೨ ಶ್ಲೋಕಗಳಿಂದ ವೀರಶೈವನ ಲಕ್ಷಣವನ್ನು ಹೇಳಿರುವಂಥ ಗ್ರಂಥಕಾರನಿಗೆ ಇದು

विशेषवीरशैवस्य लक्षणं प्रोच्यते मया ।
फाले भूतित्रिपुंड्रं च मुखे षड्वर्णसंस्मृतिः ॥ ೮೭ ॥
तत्तत्स्थानेषु रुद्राक्षधारको ज्ञानकर्मवित् ।
स्त्र्यादिके विषये चैव मनोनिग्रहवान्भवेत् ॥ ೮೮ ॥
दण्ड खण्डनशिक्षासु दूरीकरणमाचरेत् ।
अहिंसा परमो धर्म इत्यंगीकृतमानसाः ॥ ೮೯ ॥

---

ತಿಳಿದಿರಲಿಲ್ಲವೆಂದೇನಲ್ಲ ಆದರೆ ಛಂದೋಬದ್ಧವಾಗಿ ಶ್ಲೋಕಗಳನ್ನು ರಚಿಸಬೇಕಾದುದರಿಂದ ಛಂದೋಭಂಗವಾಗಬಾರದೆಂದು ಶುದ್ಧ ಎಂಬ ಶಬ್ದವನ್ನು ಸೇರಿಸಿಲ್ಲವೆಂದೇ ತಿಳಿದುಕೊಳ್ಳಬೇಕು. ಅರ್ಥಾತ್ ಸಾಮಾನ್ಯ ವೀರಶೈವ, ಶುದ್ಧ ವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವ ಎಂದು ನಾಲ್ಕು ಭಾಗಗಳನ್ನು ಮಾಡಿದರೆ ಯಾವ ದೋಷವು ಬರುವದಿಲ್ಲ. ಸಾಮಾನ್ಯ ವೀರಶೈವ ಎಂದರೆ ಪ್ರಪ್ರಥಮದಲ್ಲಿ ಅನ್ಯಧರ್ಮದಲ್ಲಿ ಜನಿಸಿದ್ದು ಅದೇ ಜನ್ಮವನ್ನು ಕಡೆಯದಾಗಿ ಮಾಡಿಕೊಳ್ಳಬೇಕೆಂಬ ಸದುದ್ದೇಶದಿಂದ ವೀರಶೈವ ಧರ್ಮದಲ್ಲಿ ಯಾವುದೋ ಒಂದು ಕಾಲದಲ್ಲಿ ಸಮಾವೇಶರಾದ ಆಗಂತುಕರು ಸಾಮಾನ್ಯ ವೀರಶೈವರು. ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನಿಗೆ ಸೃಷ್ಟಿ ಮಾಡುವದೇ ತಿಳಿಯದಂತಾದಾಗ್ಗೆ ಸೃಷ್ಟಿ ಮಾಡುವ ಪದ್ಧತಿಯನ್ನು ಬ್ರಹ್ಮನಿಗೆ ತಿಳಿಸುವದಕ್ಕಾಗಿ ಸಾಕ್ಷಾತ್ ಪರಶಿವನು ಯಾವ ಪ್ರಮಥರನ್ನು ಸೃಷ್ಟಿ ಮಾಡಿದನೋ ಆ ಪ್ರಮಥ ವಂಶೀಯರಾದ ಸ್ವತಂತ್ರವಾಗಿ ಗೋತ್ರಸುತ್ರಾದಿಗಳುಳ್ಳ ಆನುವಂಶಿಕರಾದವರು ಶುದ್ಧ ವೀರಶೈವರು ಇವರನ್ನೇ ಗ್ರಂಥಕಾರನು ವೀರಶೈವರೆಂದು ಹೇಳಿರುವನೆಂಬುದು ಅವರವರ ಲಕ್ಷಣದಲ್ಲಿ ಸಂಗ್ರಹಿಸಿದ ಶ್ಲೋಕಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

### ವಿಶೇಷ ವೀರಶೈವನ ಲಕ್ಷಣವು ಹೇಳಲ್ಪಡುತ್ತದೆ

ಹಣೆಯಲ್ಲಿ ಭಸ್ಮತ್ರಿಪುಂಡ್ರ ಧಾರಣವು, ಮುಖದಲ್ಲಿ ಷಡಕ್ಷರ ಮಂತ್ರದ ಸ್ಮರಣೆಯು (ಜಪ) ಮತ್ತು ಶರೀರದ ಆಯಾ ಸ್ಥಾನಗಳಲ್ಲಿ ರುದ್ರಾಕ್ಷಿ ಧಾರಣ ಮಾಡುವವನು, ಜ್ಞಾನ ಮತ್ತು ಕ್ರಿಯೆಯನ್ನು ತಿಳಿದವನು, ಸ್ತ್ರೀ ಮೊದಲಾದ ವಿಷಯದಲ್ಲಿ ಮನೋನಿಗ್ರಹವುಳ್ಳವನೂ ॥ ೮೭–೮೮ ॥ ಹಿಂಸಾ ಮಾಡದಿರುವದೇ ಶ್ರೇಷ್ಠವಾದ ಧರ್ಮವು ಎಂಬ ತತ್ವವನ್ನು ತಿಳಿದವನಾದ್ದರಿಂದ ಯಾರಿಗೂ ದಂಡ ಮಾಡುವದೂ, ಹೊಡೆಯುವದೂ, ಶಿಕ್ಷಿಸುವದು ಮೊದಲಾದ ಹಿಂಸಾಕೃತಿಗಳಿಂದ ದೂರ ಇರತಕ್ಕವನೂ ॥ ೮೯ ॥ ಸ್ಥೂಲ ಸೂಕ್ಷ್ಮ, ಕಾರಣ ಎಂಬ ಶರೀರಗಳಲ್ಲಿ

स्थूले सूक्ष्मे कारणे च शरीरेषु च सर्वदा ।
विदित्वा चेष्टलिङ्गं च प्राणभावं तथैव च ॥ ९० ॥
आधारचक्रे स्वाधिष्ठे मणिपूरक एव वा ।
अनाहते विशुद्धे च आज्ञेयाख्ये तथैव च ॥ ९१ ॥
एवं षट्चक्रमध्ये तु षड्विधां शक्तिमेव च ।
भक्तिं च षड्विधां लिङ्गवर्णषाड्विध्यमेव च ॥ ९२ ॥
तथा दलस्य षाड्विध्यं विदित्वा स्थलषाड्विधम् ।
सगुणं निर्गुणं चैव तद्द्वेष्टं च लिङ्गकम् ॥ ९३ ॥
ममेत्यन्योन्यभावेन चाखण्डज्ञानवान्भवेत् ।
विमुक्ताशाद्वेषरागो भवेद्भूतदयायुतः ॥ ९४ ॥
यादृच्छिकपदार्थान्वै गृहीत्वा वृत्तिमाचरेत् ।
भक्तिभावादागतस्य वैराग्यफलकस्य च ॥ ९५ ॥
ज्ञानोपदेशं कृत्वा तु संचरेद्भगवत्परः ।
अतिक्रान्तस्य मर्त्यस्य न शिक्षाकरणो भवेत् ॥ ९६ ॥

---

ಯಾವಾಗಲೂ ಇರತಕ್ಕಂಥ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಇವುಗಳನ್ನು ತಿಳಿದುಕೊಂಡು ॥ ೯೦ ॥ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ ಎಂಬ ಆರು ಚಕ್ರಗಳ ಮಧ್ಯದಲ್ಲಿ ಆರು ವಿಧವಾದ ಶಕ್ತಿಯನ್ನೂ, ಆರು ವಿಧವಾದ ಭಕ್ತಿಯನ್ನೂ, ಆರು ವಿಧವಾದ ಲಿಂಗವನ್ನೂ, ಆರು ವಿಧವಾದ ವರ್ಣವನ್ನು ಮತ್ತು ಆರು ವಿಧವಾದ ದಳಗಳನ್ನೂ ಆರು ಸ್ಥಲಗಳನ್ನೂ ತಿಳಿದುಕೊಂಡು ಸಗುಣವಾದ ಇಷ್ಟಲಿಂಗವು, ನಿರ್ಗುಣವಾದ ಪ್ರಾಣಲಿಂಗವು ಇವೆರಡು ಅನ್ಯೋನ್ಯ ಭಾವದಿಂದ ನನ್ನಲ್ಲಿ ಇರುತ್ತವೆಂಬ ಅಖಂಡವಾದ ಜ್ಞಾನವುಳ್ಳವನೂ ಆಶಾ,ದ್ವೇಷ,ಅನುರಾಗ ರಹಿತನುಪ್ರಾಣಿಗಳಮೇಲೆ ದಯೆಯುಳ್ಳವನೂ ಬೇಡದಲೇ ತನ್ನಿಂದ ತಾನೇಬಂದ ಪದಾರ್ಥಗಳಿಂದ ಜೀವನವನ್ನು ಸಾಗಿಸುತ್ತಿರುವಾಗ ವೈರಾಗ್ಯದಿಂದ ಯಾರಾದರೂ ಒಳ್ಳೇ ಭಕ್ತಿಯಿಂದ ತನ್ನ ಕಡೆಗೆ ಬಂದರೆ ಅಂಥವರಿಗೆ ಜ್ಞಾನೋಪದೇಶಮಾಡಿ, ಶಿವಜ್ಞಾನ ತತ್ಪರನಾಗಿ ಸಂಚಾರ ಮಾಡತಕ್ಕದ್ದು. ಯಾವನೊಬ್ಬ ಮನುಷ್ಯನು ಮರ್ಯಾದೆಯನ್ನು ಮೀರಿ ಮಾತನಾಡಲಿಕ್ಕೆ ಹತ್ತಿದರೆ ಅಂಥವನಿಗೆ ಶಿಕ್ಷಾ ಮಾಡಲು ಹೋಗಬಾರದು ॥ ೯೧-೯೬ ॥ ಯಾವದಾದರೊಂದು ಮಂತ್ರವನ್ನು ಜಪಿಸುತ್ತಿರಬೇಕು.

येन केन च मंत्रेण कंथादण्डकमण्डलून् ।
भैक्ष्यपात्रं तथा भस्मघुंटिकां पञ्चमुद्रिकाम् ॥ ९७ ॥
शिखापंचकधारी स्यात्परमानन्दतत्परः ।
प्रमादादिष्टलिङ्गं तु यत्र कुत्र गतं भवेत् ॥ ९८ ॥
न पुनर्धारयेल्लिङ्गं प्राणत्यागी च नो भवेत् ।
ध्यानवानिष्टलिंगे तु भुक्त्वा भक्तालये सदा ॥ ९९ ॥
अन्यजातिष्वन्नहीनो जातिष्वेवान्नपानवान् ।
भावयेत्प्राणलिङ्गं तु अंतरे पद्मसंस्थितम् ॥ १०० ॥
सुज्ञानं तस्य नालं स्याद्दलं स्यादष्टमं पदम् ।
किंजल्कभूता रुद्रेशा वैराग्यं तस्य कर्णिका ॥ १०१ ॥
चंद्रप्रभेव हृदये सोमसूर्याग्निमण्डले ।
चित्स्वरूपं दिव्यमूर्तिं पूजयेन्मनसा ततः ॥ १०२ ॥

---

ಕಂಥಾ, ದಂಡ, ಕಮಂಡಲು, ಭಿಕ್ಷಾಪಾತ್ರೆ, ಭಸ್ಮಘುಟಿಕಾ ಎಂಬ ಪಂಚ ಮುದ್ರೆಗಳನ್ನು ಮತ್ತು ಪಂಚಶಿಖೆಗಳನ್ನು ಧಾರಣ ಮಾಡಿಕೊಂಡು ಶಿವಾನಂದದಲ್ಲಿ ಅತ್ಯಂತ ನಿಮಗ್ನ ನಾಗಿ ಇರತಕ್ಕದ್ದು. ॥೯೭॥ ಪ್ರಮಾದದಿಂದ ಇಷ್ಟಲಿಂಗವು ಎಲ್ಲಿಯಾದರೂ ಕಳೆದು ಹೋದರೆ ಪುನಃ ಮತ್ತೊಂದು ಲಿಂಗವನ್ನು ಧರಿಸಿಕೊಳ್ಳಬಾರದು. ಮತ್ತು ಪ್ರಾಣವನ್ನು ಕಳೆದುಕೊಳ್ಳಬಾರದು ಆ ಇಷ್ಟಲಿಂಗದ ಧ್ಯಾನದಲ್ಲಿ ತತ್ಪರನಾಗಿ ಶಿವಭಕ್ತರ ಮನೆ ಯಲ್ಲಿ ಭೋಜನ ಮಾಡುತ್ತ ಇರತಕ್ಕದ್ದು ॥೯೮-೯೯॥ ಅನ್ಯ ಜಾತಿಯವರ ಮನೆ ಯಲ್ಲಿ ಆಹಾರವನ್ನು ತೆಗೆದುಕೊಳ್ಳದೇ ತನ್ನ ಜಾತಿಯವರಲ್ಲಿಯೇ ಆಹಾರ, ಅನ್ನ, ನೀರನ್ನು ಸ್ವೀಕರಿಸುವಂಥವನು. ಹೃದಯ ಕಮಲದಲ್ಲಿರುವ ಪ್ರಾಣಲಿಂಗವನ್ನು ಯಾವಾಗಲೂ ಭಾವಿಸುತ್ತಿರಬೇಕು ॥೧೦೦॥ ಸಮ್ಯಕ್ ಜ್ಞಾನವೇ ಆ ಹೃದಯ ಕಮಲದ ದೇಂಟು, ಸಮಾಧಿಯೇ ಅದರ ದಳಗಳು. ಜಂಗಮರೇ ಆ ಕಮಲದ ಕೇಸರ ಗಳು (ಎಸಳುಗಳು), ವೈರಾಗ್ಯವೇ ಆ ಕಮಲದ ಕರ್ಣಿಕೆಯು (ಮಧ್ಯಬೀಜ) ॥೧೦೧॥

चिदेव दिव्यमूर्तिः स्याच्चित्प्राणश्च तथैव च ।
आनंद एव लावण्यं प्राणलिंगस्य चोदितम् ॥ १०३ ॥
षट्त्रिंशत्तत्वजातेषु भासमानं मुदान्वितम् ।
स्फटिकान्तर्दीपमिव बाह्ये चाभ्यन्तरे तथा ॥ १०४ ॥
एवं विधे प्राणलिङ्गे चेष्टलिङ्गं विभावयेत् ।
सर्वव्यापीश्वरश्चेति मतिराह्वानमेव च ॥ १०५ ॥
जगच्छिवपदव्याप्तमिति प्रज्ञैव पाद्यकम् ।
ईशः सुखाब्धिरेवेति मतिरर्घ्यं प्रकीर्तितम् ॥ १०६ ॥
पवित्रदानमेवाभूदाचमनं प्रकीर्तितम् ।
नित्यनिर्मलरूपं तत्स्नानमाहुर्मनीषिणः ॥ १०७ ॥
अतिक्रम्य जगत्सर्वमिति विद्यैव वाससी ।
त्रिगुणातीतविज्ञानं यज्ञसूत्रं विदुर्बुधाः ॥ १०८ ॥

---

ಚಂದ್ರನ ಪ್ರಕಾಶದಂತೆ ಹೃದಯದಲ್ಲಿ ಸೂರ್ಯ, ಚಂದ್ರ, ಅಗ್ನಿ, ಇವುಗಳ ಮಂಡಲದಲ್ಲಿ ಚಿತ್‌ಸ್ವರೂಪವಾದ ಪ್ರಾಣಲಿಂಗದ ದಿವ್ಯ ಮೂರ್ತಿಯನ್ನು ಮನಸ್ಸಿನಿಂದ ಪೂಜಿಸತಕ್ಕದ್ದು ॥೧೦೨॥ ಚಿತ್ತೇ ಆ ಪ್ರಾಣಲಿಂಗದ ದಿವ್ಯ ಮೂರ್ತಿಯು ಮತ್ತು ಚಿತ್ತೇ ಅದರ ಪ್ರಾಣವು, ಆನಂದವೇ ಪ್ರಾಣಲಿಂಗದ ಲಾವಣ್ಯವು ಎಂದು ಹೇಳಲ್ಪಟ್ಟಿದೆ ॥೧೦೩॥ ಮೂವತ್ತಾರು ತತ್ವಗಳಲ್ಲಿ ಪ್ರಕಾಶಿಸುತ್ತಿರುವ ಸ್ಫಟಿಕದ ಪಾತ್ರೆಯೊಳಗಿರುವ ದೀಪದಂತೆ ಒಳಗೂ ಹೊರಗೂ ಪ್ರಕಾಶಮಾನವಾದಂಥ ಸಂತೋಷದಿಂದ ಕೂಡಿದ್ದಾಗಿ ತೋರುತ್ತಿದೆ. ॥೧೦೪॥ ಈ ವಿಧವಾದ ಪ್ರಾಣಲಿಂಗದಲ್ಲಿ ಇಷ್ಟಲಿಂಗವನ್ನು ಭಾವಿಸುವವನಾಗಿ ಈಶ್ವರನು ಸರ್ವವ್ಯಾಪಿ ಇದ್ದಾನೆ ಎಂಬ ತಿಳುವಳಿಕೆಯೇ ಆ ಲಿಂಗದ ಆಹ್ವಾನವು. ॥೧೦೫॥ ಈ ಜಗತ್ತು ಶಿವಮಯವಾದದ್ದು ಎಂಬ ತಿಳುವಳಿಕೆಯೇ ಪಾದ್ಯವು, ಈಶ್ವರನು ಆನಂದಸಾಗರನಿದ್ದಾನೆ ಎಂಬ ಬುದ್ಧಿಯೇ ಅರ್ಘ್ಯವು, ಪ್ರತಿಫಲಾಪೇಕ್ಷೆಇಲ್ಲದ ಶುದ್ಧವಾದ ದಾನವೇ ಆಚಮನವು, ನಾಶವಾಗದಿದ್ದ ಮತ್ತು ನಿಷ್ಕಳಂಕವಾದ ರೂಪವೇ ಆ ಪ್ರಾಣಲಿಂಗ ಸ್ನಾನವೆಂದು ಜ್ಞಾನಿಗಳು ಹೇಳುತ್ತಾರೆ ॥೧೦೬ ರಿಂದ ೧೦೭॥ ಮಾನವನನ್ನು ಸಂಸಾರದಿಂದ ಪಾರುಮಾಡುವಂಥ ವಿದ್ಯೆಯೇ ಆ ಪ್ರಾಣಲಿಂ

आकल्पकं तु चैतन्यमलंकारप्रभा मता ।
शृंगारः प्रतिभा तस्य चिच्छक्तिरनुलेपनम् ॥ १०९ ॥
कारुण्यमक्षता तस्य पुष्पं तत्प्रणवात्मकम् ।
विषयेषु च वैराग्यं धूपमित्यभिधीयते ॥ ११० ॥
परंज्योतिः स्वरूपं तद्दीपमित्यभिधीयते ।
नित्यतृप्तस्य संविद्यत्तन्नैवेद्यमुदीरितम् ॥ १११ ॥
षट्त्रिंशत्तत्त्वविज्ञानं नमस्कारक्रियोच्यते ।
सोऽहं ब्रह्मेति विज्ञानं प्रदक्षिणमुदाहृतम् ॥ ११२ ॥
अन्तरात्मज्ञप्तिरेव तांबूलमिति कथ्यते ।
इति मानसपूजाद्यैः पूजितं चेष्टलिङ्गकम् ॥ ११३ ॥
हृत्कर्णिकामध्यदेशे शून्यसिंहासने तथा ।
पूर्वाचार्यैर्दत्तमिष्टलिंगं प्राणे विभावयेत् ॥ ११४ ॥
नदीतीरेऽथवाग्रामे क्षेत्रे शैवालये तथा ।
आचरेन्मानसीं पूजां लौकिकाचारवर्जितः ॥ ११५ ॥

---

ಗಕ್ಕೆ ವಸ್ತ್ರಗಳು, ಸತ್ವ, ರಜ, ತಮ ಎಂಬ ಮೂರು ಗುಣಗಳನ್ನು ಮೀರಿದ ಜ್ಞಾನವೇ ಯಜ್ಞಸೂತ್ರವೆಂದು (ಶಿವದಾರವೆಂದು) ಜ್ಞಾನಿಗಳು ಹೇಳುವರು ||೧೦೮|| ಕಲ್ಪಾಂತ್ಯದವರೆಗೂ ಚೈತನ್ಯವಿರುವದೆಂಬುದು ಅಲಂಕಾರವು, ಪ್ರಕಾಶವೇ ಶೃಂಗಾರವು. ಚಿಚ್ಛಕ್ತಿಯೇ ಗಂಧಲೇಪನವು, ಕಾರುಣ್ಯವೇ ಅಕ್ಷತೆಯು, ಪ್ರಣವವೇ ಹೂವು. ವಿಷಯ ವೈರಾಗ್ಯವೇ ಧೂಪವೆಂದು ಹೇಳಲ್ಪಡುತ್ತದೆ ||೧೦೯-೧೧೦|| ಪರಂಜ್ಯೋತಿ ಸ್ವರೂಪವೇ ದೀಪವು, ಶಿವನು ನಿತ್ಯ ತೃಪ್ತನು ಎಂಬ ಜ್ಞಾನವೇ ನೈವೇದ್ಯವು ಎಂದು ಹೇಳಲ್ಪಡುತ್ತದೆ ||೧೧೧|| ಮೂವತ್ತಾರು ತತ್ವಗಳ ಜ್ಞಾನವೇ ನಮಸ್ಕಾರವು, ಸೋಹಂ ನಾನೇ ಪರಶಿವನೆಂಬ ಜ್ಞಾನವೇ ಪ್ರದಕ್ಷಿಣವೆಂದು ಹೇಳಲ್ಪಡುತ್ತದೆ ||೧೧೨|| ಅಂತರಾತ್ಮಜ್ಞಾನವೇ ತಾಂಬೂಲವೆಂದು ಹೇಳಲ್ಪಡುತ್ತದೆ. ಈ ಪ್ರಕಾರವಾದ ಮಾನಸ ಪೂಜೆಗಳಿಂದ ಪೂಜಿಸಲ್ಪಟ್ಟ, ಇಷ್ಟಲಿಂಗವನ್ನು ಹೃದಯಕಮಲದ ಮಧ್ಯಪ್ರದೇಶದಲ್ಲಿ ಶೂನ್ಯ ಸಿಂಹಾಸನದಲ್ಲಿ ಮತ್ತು ಆಚಾರ್ಯರಿಂದ ಧರಿಸಲ್ಪಟ್ಟ ಲಿಂಗವನ್ನು ಪ್ರಾಣಲಿಂಗದಲ್ಲಿ ಭಾವಿಸಬೇಕು ||೧೧೩-೧೧೪|| ನದಿಯ ದಂಡೆಯಲ್ಲಿ ಗ್ರಾಮದಲ್ಲಿ ಕ್ಷೇತ್ರದಲ್ಲಿ ಮತ್ತು

वृषभं भास्करं वीरभद्रं मातृगणं तथा ।
स्कंदं तथा क्षेत्रपालं ब्रह्मविष्णुमहेश्वरान् ॥ ११६ ॥
स्वयंभुलीलया सम्यगतिक्रम्य मुदान्वितः ।
प्राणलिङ्गे स्वमात्मानमैक्यं तत्राभिमानवान् ॥ ११७ ॥
प्राणलिङ्गध्यानपरस्त्वितरध्यानवर्जितः ।
स्थूले सूक्ष्मे कारणे च त्रिलिङ्गार्चनतत्परः ॥ ११८ ॥
प्राणलिङ्गप्रसादेन विना नान्यत्प्रसादभुक् ।
विषयासक्तिरहितो जगत्पूज्यो भवेच्च सः ॥ ११९ ॥
अन्ते मंत्रोक्तमार्गेन समाधौ स्थापयेत्तनुम् ।
जीवन्मुक्तोऽतिथिःसोऽपि ज्ञानकाण्डी न संशयः ।
विशेषवीरशैवोऽसावत्याश्रमगणोऽभवत् ॥ १२० ॥
इति विशेषवीरशैवविधिः समाप्ता ।

---

ಶಿವಾಲಯದಲ್ಲಿ, ಲೌಕಿಕ ಆಚಾರಗಳನ್ನು ಬಿಟ್ಟು ಮಾನಸಿಕವಾದ ಪೂಜೆಯನ್ನು ಮಾಡಬೇಕು ||೧೧೫|| ನಂದೀಶ್ವರ, ಸೂರ್ಯ, ವೀರಭದ್ರ, ಮಾತೃಗಣ, ಷಣ್ಮುಖ, ಕ್ಷೇತ್ರಪಾಲ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಇವರನ್ನು ||೧೧೬|| ಸಹಜವಾದ ಲೀಲೆಯಿಂದ ಅತಿಕ್ರಮಿಸಿ ಆನಂದದಿಂದ ಕೂಡಿದವನಾಗಿ ಪ್ರಾಣಲಿಂಗದಲ್ಲಿ ತನ್ನ ಆತ್ಮವನ್ನು ಐಕ್ಯವಾಡಿ ಅಲ್ಲಿ ಅಭಿಮಾನಪೂರ್ಣವನಾಗಿ ||೧೧೭|| ಪ್ರಾಣಲಿಂಗಧ್ಯಾನದಲ್ಲಿ ತತ್ಪರನೂ ಇತರ ಜ್ಞಾನರಹಿತನೂ, ಸ್ಥೂಲ, ಸೂಕ್ಷ್ಮ, ಕಾರಣ ಈ ಮೂರು ಶರೀರಗಳಲ್ಲಿ ಆಯಾ ಲಿಂಗಗಳ ಪೂಜಾದಲ್ಲಿ ತತ್ಪರನೂ ||೧೧೮|| ಪ್ರಾಣಲಿಂಗದ ಪ್ರಸಾದಬಿಟ್ಟು ಇತರ ಪ್ರಸಾದವನ್ನು ಸೇವಿಸದೇ ಇದ್ದ, ವಿಷಯದಲ್ಲಿ ಆಸಕ್ತಿ ಇಲ್ಲದಂಥ ಅವನು ಜಗತ್ಪೂಜ್ಯನಾಗುವನು, ಅವಸಾನಕಾಲದಲ್ಲಿ ವಿಧ್ಯುಕ್ತವಾಗಿ ಅವನ ತನುವನ್ನು ಸಮಾಧಿಯಲ್ಲಿ ಮಂತ್ರಪೂರ್ವಕವಾಗಿ ಸ್ಥಾಪಿಸತಕ್ಕದ್ದು, ಜೀವನ್ಮುಕ್ತನೂ ಅತಿಥಿಯೂ ಜ್ಞಾನಕಾಂಡಿಯೂ, ಅತ್ಯಾಶ್ರಮಿಯೂ ಆದ ಇವನು ವಿಶೇಷ ವೀರಶೈವನೆನಿಸಿಕೊಳ್ಳುವನು ||೧೧೯–೧೨೦||

अथ निराभारिवीरशैवलक्षणं ।

सर्वस्रक्चंदनादीनि वनितादिमहासुखम् ।
तिरस्कृतस्वचित्तः सन् न्यसेत्परशिवे सदा ॥ १२१ ॥
स्वात्मन्यैक्यं विदित्वाथ सर्वसंगविवर्जितः ।
दण्डकौपीनकाषायजटायोगकमण्डलून् ॥ १२२ ॥
धृत्वाऽथवा शिरोमुण्डी भूत्वा वसनवर्जितः ।
अजिनासनयुक्तस्सन् काषायाच्छादकश्चरेत् ॥ १२३ ॥
कूष्माण्डखर्परं धृत्वा भवेच्चैव दिगंबरः ।
यदृच्छया लब्धशैवप्रसादास्वादने रतः ॥ १२४ ॥
कायेन वाचा मनसा त्यक्तभूवित्तकन्यकः ।
त्यक्त्वा गृहमठादीनि मनुष्यादिगृहाणि च ।
प्रवासस्तेन कर्तव्यो वने गिरिगुहादिषु ॥ १२५ ॥

---

ಇಲ್ಲಿಗೆ ವಿಶೇಷ ವೀರಶೈವ ಲಕ್ಷಣಗಳು ಮುಗಿದುದು.

ನಿರಾಭಾರಿ ವೀರಶೈವ ಲಕ್ಷಣಗಳು :

ಪುಷ್ಪಮಾಲಾ, ಗಂಧ, ಕಸ್ತೂರಿ ಮೊದಲಾದ ಉಪಚಾರಗಳು ಸ್ತ್ರೀ ಮೊದಲಾದ ವಿಷಯ ಸುಖ ಇವೆಲ್ಲವನ್ನು ಸಂಪೂರ್ಣವಾಗಿ ಮನಸ್ಸಿನಿಂದ ತಿರಸ್ಕರಿಸಿದಂಥಾ ಪರಶಿವನಲ್ಲಿಯೇ ಯಾವಾಗಲೂ ಮನಸ್ಸನ್ನು ಇಟ್ಟಂಥಾ ತನ್ನಲ್ಲಿ ಪರಮಾತ್ಮನ ಏಕತ್ವವನ್ನು ತಿಳಿದು ಸರ್ವಸಂಗ ರಹಿತನಾದಂಥಾ ದಂಡ, ಕೌಪೀನ, ಕಾವೀಬಟ್ಟೆ, ಜಟಾ, ಯೋಗದಂಡ, ಕಮಂಡಲು ಇವುಗಳನ್ನು ಧರಿಸಿ ಅಥವಾ ತಲೆಯನ್ನು ಸಂಪೂರ್ಣ ಬೋಳಿಸಿ, ವಸ್ತ್ರರಹಿತನಾಗಿ, ಚಿಗರಿಯ ಚರ್ಮವನ್ನು ಧರಿಸಿಕೊಂಡು ಕಾವಿಯ ಬಟ್ಟೆಯನ್ನು ಹೊದ್ದುಕೊಂಡು ಸಂಚರಿಸಬೇಕು ||೧೨೧ ರಿಂದ ೧೨೩|| ಕುಂಬಳಕಾಯಿಯ ಪರಟೆಯನ್ನು ಹಿಡಿದುಕೊಂಡು ದಿಗಂಬರನಾಗಿ ತನ್ನಿಂದ ತಾನೇ ಪ್ರಾಪ್ತವಾದ ಶಿವಪ್ರಸಾದವನ್ನು ಸೇವಿಸುವದರಲ್ಲಿ ತತ್ಪರನಾಗಿ ||೧೨೪|| ಕಾಯ,

पत्त (द्व) ने पञ्चरात्रं वा त्रिरात्रं पुटभेदने
अयाचनपरो भूत्वा दैवादागतजीवनः । ॥ १२६ ॥
तृणीकृतजगज्जीवो लौकिकाचारवर्जितः ।
त्यक्तप्रवरगोत्रश्च सूत्रवर्णादिकं तथा ॥ १२७ ॥
पादांगुलीयवलयश्यामदन्तादिभिः सदा ।
स्त्रीजातिभिः कृतान्नादितिरस्कारी शिवव्रती ॥ १२८ ॥
पूर्वाश्रमगतान्मातृपितॄनपि परित्यजेत् ।
स्वयंभुलीलया सोऽहं ब्रह्मेति विदितात्मवान् ॥ १२९ ॥
गृहस्थाचारवर्तिनां न कर्ता कार्यमंजसा ।
निर्नामो निर्ग्रहो भूत्वा वधूसंगविवर्जितः ॥ १३० ॥
निष्कारणो निष्कलंको निर्विकल्पश्च निष्क्रियः ।
निष्प्रपंचो निरालम्बो रागद्वेषादिवर्जितः ॥ १३१ ॥

---

ವಾಕ್, ಮನಸ್ಸುಗಳಿಂದ ಬಿಡಲ್ಪಟ್ಟ ಹೊನ್ನು, ಹೆಣ್ಣು, ಮಣ್ಣು ಇವುಗಳುಳ್ಳಂಥ ಮನೆ ಮಠಗಳನ್ನು ಮನುಷ್ಯರೇ ಮೊದಲಾದ ಪ್ರಾಣಿಗಳುಳ್ಳ ಸ್ಥಾನಗಳನ್ನು ಬಿಟ್ಟು ಕಾಡಿನಲ್ಲಿ, ಗುಡ್ಡ, ಗವಿ ಮೊದಲಾದವುಗಳಲ್ಲಿ ವಾಸಮಾಡತಕ್ಕಂಥಾ ಪಟ್ಟಣದಲ್ಲಿ ೫ ರಾತ್ರಿ, ದೊಡ್ಡ ಗ್ರಾಮದಲ್ಲಿ ೩ ರಾತ್ರಿ, ಹಳ್ಳಿಯಲ್ಲಿ ೧ ರಾತ್ರಿ ವಾಸ ಮಾಡುವಂಥ ಯಾರನ್ನೂ ಬೇಡದಲೇ ದೈವಬಲದಿಂದ ತನ್ನಿಂದ ತಾನೇ ಪ್ರಾಪ್ತವಾದ ಪದಾರ್ಥದಿಂದ ಜೀವಿಸುವಂಥ ಈ ಜಗತ್ತನ್ನು ಹುಲ್ಲಿಗೆ ಸಮಾನವಾಗಿ ಭಾವಿಸಿದಂಥಾ ಲೌಕಿಕಾಚಾರ ರಹಿತನಾದಂಥಾ ಗೋತ್ರ, ಸೂತ್ರ, ಪ್ರವರ ಮೊದಲಾದವುಗಳನ್ನು ತ್ಯಾಗಮಾಡಿದಂಥಾ ||೧೨೬ ರಿಂದ ೧೨೮|| ಕಾಲೊಳಗೆ ಉಂಗುರ, ಕೈಯಲ್ಲಿ ಬಳಿ, ಕರಿ ಹಲ್ಲು ಇವುಗಳುಳ್ಳ ಸ್ತ್ರೀಯರಿಂದ ಮಾಡಿದ ಪಾಕವನ್ನು ತಿರಸ್ಕರಿಸುವಂಥ, ಸಹಜವಾದ ಲೀಲೆಯಿಂದ ಸೋಹಂ ಬ್ರಹ್ಮ ನಾನೇ ಬ್ರಹ್ಮವೆಂದು ತನ್ನ ಸ್ವರೂಪವನ್ನು ತಿಳಿದುಕೊಂಡಂಥಾ ಗೃಹಸ್ಥಾಶ್ರಮದಲ್ಲಿ ಇರುವವರ ಕಾರ್ಯವನ್ನು ಸ್ವಲ್ಪೂ ಮಾಡದಿರುವಂಥಾ ತನ್ನ ಹೆಸರಿನ ಪ್ರಸಿದ್ಧಿಯ ಮತ್ತು ಉಪಾಧಿಯ ಅಪೇಕ್ಷೆ ಇಲ್ಲದವನಾಗಿ, ಸ್ತ್ರೀಸಂಗ ರಹಿತನಾದಂಥಾ ||೧೨೯ ರಿಂದ ೧೩೦|| ಕಾರಣ ರಹಿತನೂ, ಕಲಂಕ ರಹಿತನೂ, ವಿಕಲ್ಪವಿಲ್ಲದವನೂ, ಕ್ರಿಯಾರಹಿತನೂ, ಪ್ರಪಂಚದಲ್ಲಿ ಸೇರದೇ ಇದ್ದಂಥ, ಆಶ್ರಯರಹಿತನೂ, ರಾಗದ್ವೇಷಾದಿಗಳಿಲ್ಲದವನೂ, ವಿಧಿ ಮತ್ತು

निषेधविधिरूपे च एकचित्तो भवेच्च सः ।
कर्मकांडिगृहस्थानां मंदिरेषु शुभाशुभे ॥ १३२ ॥
विबाहादिषु कार्येषु शवसंस्थापनादिषु ।
आगत्य चैकदिवसं पुरग्रामे वसेच्च सः ॥ १३३ ॥
गृहत्रयेष्वन्नपानं याचमानो भवेच्च सः ।
दत्तं चेदपि भुंजीत नो चेत्क्लेशं न कारयेत् ॥ १३४ ॥
नांदोलिकां समारोहेदश्वारोहणवर्जितः ।
पादचारी च संभूय चरेद्भूवलये सदा ॥ १३५ ॥
अभक्तानां च भक्तानां शिक्षाशापविवर्जितः ।
एकभुक्तो भवेत्सोऽपि सदा वैराग्यवान् भवेत् ॥ १३६ ॥
षट्स्थलान्त्यनिरालंबस्थानेषूद्यमवान्भवेत् ।
सती विद्या सुतस्तोषो वैराग्यं बांधवः स्मृतः ॥ १३७ ॥

---

ನಿಷೇಧ ರೂಪಕಾರ್ಯಗಳಲ್ಲಿ ಒಂದೇ ರೀತಿಯಾದ ಮನಸ್ಸುಳ್ಳವನೂ, ಕರ್ಮ ಕಾಂಡಿಗಳಾದ ಗೃಹಸ್ಥರ ಮನೆಗಳಲ್ಲಿ. ಶುಭಕಾರ್ಯಗಳಲ್ಲಿ ವಿವಾಹಾದಿಗಳಲ್ಲಿ ಮತ್ತು ಗೃಹಸ್ಥರ ಮನೆಯಲ್ಲಿ ಯಾರಾದರೂ ಮೃತರಾದಲ್ಲಿ ಆ ಕಾಲಕ್ಕೆ ಬಂದು ಒಂದು ದಿವಸ ಮಾತ್ರ ಆ ಊರಲ್ಲಿ ಇರುವಂಥವನಾಗಿ ಮೂರು ಮನೆಗಳಲ್ಲಿ ಭಿಕ್ಷಾಬೇಡುವವ ನಾಗಬೇಕು. ಆಗ ಅವರು ಭಿಕ್ಷೆಯನ್ನು ನೀಡಿದರೆ ಅದನ್ನು ಸೇವಿಸಬೇಕು. ನೀಡದಿದ್ದರೆ ಅವರಿಗೆ ತ್ರಾಸುಕೊಡಬಾರದು. ಪಲ್ಲಕ್ಕಿ, ಕುದುರೆ, ಮೊದಲಾದವುಗಳನ್ನು ಹತ್ತದೇ ಇರತಕ್ಕಂಥವನಾಗಿ ಪಾದಚಾರಿಯಾಗಿಯೇ ಯಾವಾಗಲೂ ಭೂಮಿಯ ಮೇಲೆ ಸಂಚರಿಸಬೇಕು ||೧೩೨ ರಿಂದ ೧೩೫|| ಭಕ್ತಿಯುಳ್ಳವರಿಗಾಗಲಿ, ಭಕ್ತಿ ಇಲ್ಲದವರಿಗಾಗಲಿ, ಶಾಪ, ಶಿಕ್ಷೆ ಮೊದಲಾದದ್ದನ್ನು ಕೊಡದೇ ಇರತಕ್ಕಂಥವನಾಗಿ ಅಧಿಕವಾದ ವೈರಾಗ್ಯದಿಂದ ದಿವಸಕ್ಕೆ ಒಂದೇ ಸಾರೆ ಭೋಜನ ಮಾಡುವವನು ||೧೩೬|| ಷಟ್‌ಸ್ಥಲಗಳ ಅಂತ್ಯದಲ್ಲಿ ಇರುವ ನಿರಾಲಂಬಸ್ಥಾನದಲ್ಲಿ ಪ್ರಯತ್ನ ಮಾಡುವವನು ಆಗಬೇಕು. ಅವನಿಗೆ ವಿದ್ಯೆಯೇ ಹೆಂಡತಿಯು, ಸಂತೋಷವೆ ಮಗನು, ವೈರಾಗ್ಯವೇ ಬಂಧುಜನವು ||೧೩೭|| ಕ್ಷಮೆಯೇ ಪರಿಚಾರಕ ಜನವು, ಕಾಂತಿಯೇ

क्षमैव परिवारस्तु सखा शांतिरितीरितः ।
भक्तिर्माता सदाचारः पिता सत्यं सुता मता ॥ १३८ ॥
स्नुषा श्रद्धैव संप्रोक्ता पौत्रा मैत्र्यादिसद्गुणाः ।
ज्ञानमेव शरीरं स्याद्विचारः क्षेत्रमेव च ॥ १३९ ॥
दासी त्वहिंसा संप्रोक्ता दासस्त्वास्था तथैव च ।
धर्मो वाहनमित्युक्तं त्वाचारो दम एव च ॥ १४१ ॥
मुक्तिरेव परो देश इति निश्चितधीः सदा ।
कंथा कमंडलुश्चैव दण्डं वै भैक्ष्यपात्रकम् ॥ १४१ ॥
भस्मपात्रं च पञ्चैता बाह्यमुद्राश्च धारयेत् ।
तत्तन्मंत्रानुसारेण धृत्वा तु तदनंतरम् ॥ १४२ ॥
तदन्यपञ्चमुद्रास्तु चांतरंगेऽपि धारयेत् ।
समतैव च कंथा स्यादण्डो ज्ञानं तथैव च ॥ १४३ ॥
कमण्डलुर्दयैवासीद्वैराग्यं भैक्ष्यपात्रकम् ।
क्षमैव भस्मघुटिका त्वेवं चान्तेऽपि धारयेत् ॥ १४४ ॥

---

ಗೆಳೆಯನು, ಭಕ್ತಿಯೇ ತಾಯಿಯು, ಸದಾಚಾರವೇ ತಂದೆಯು, ಸತ್ಯವೇ ಮಗಳು ||೧೩೮|| ನಂಬಿಗೆಯೇ ಸೊಸೆಯು, ಮಿತ್ರತ್ವವೇ ಮೊದಲಾದ ಒಳ್ಳೇ ಗುಣಗಳು ಮೊಮ್ಮಕ್ಕಳು, ಜ್ಞಾನವೇ ಶರೀರವು, ವಿಚಾರವೇ ಕ್ಷೇತ್ರವು ||೧೩೯|| ಅಹಿಂಸೆಯೇ ದಾಸಿಯು. ದೇವರ ವಿಶ್ವಾಸವೇ ದಾಸನು, ಧರ್ಮವೇ ವಾಹನವು, ಆಚಾರವೇ ದಮವು ||೧೪೦|| ಮುಕ್ತಿಯೇ ಶ್ರೇಷ್ಠವಾದ ಸ್ಥಾನವು ಹೀಗೆ ನಿಯಮಿಸಿದ ಬುದ್ಧಿಯುಳ್ಳವನಾದ ಕಂಥಾ, ಕಮಂಡಲು, ದಂಡ, ಭಿಕ್ಷಾಪಾತ್ರೆ ||೧೪೧|| ಭಸ್ಮಘುಟಿಕಾ ಈ ಹೊರಗಿನ ಪಂಚಮುದ್ರೆಗಳನ್ನು ಆಯಾಯ ಮಂತ್ರಪೂರ್ವಕವಾಗಿ ಧರಿಸಿಕೊಂಡು ||೧೪೨|| ಆ ಮೇಲೆ ಬೇರೆ ಪಂಚಮುದ್ರೆಗಳನ್ನು ಅಂತರಂಗದಲ್ಲಿಯೂ, ಧರಿಸಿಕೊಳ್ಳಬೇಕು, ಅಂತರಂಗದ ಪಂಚಮುದ್ರೆಗಳು– ಎಲ್ಲದರಲ್ಲಿಯೂ ಸಮತೆಯೇ ಕಂಥೆಯು, ಶಿವಜ್ಞಾನವೇ ದಂಡವು, || ೧೪೩ || ದಯೆಯೇ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆಯು, ಕ್ಷಮೆಯೇ ಭಸ್ಮಘುಟಿಕೆಯು ಈ ಪ್ರಕಾರ ಅಂತರಂಗದ ಪಂಚಮುದ್ರೆಗಳನ್ನು ಧರಿಸಿದವನಾಗಿ || ೧೪೪ || ತಲೆಯ ಕೂದಲುಗಳನ್ನು ಕಟ್ಟಿಕೊಂಡಾಗಲಿ,

केशग्रंथिजटावांश्च शिरोमुण्डी तथैव च ।
मृगाजिनी च संभूय भूत्वा चैवदिगंवरः ॥ १४५ ॥
एवं विधाञ्छैववेषानंगीकृत्य सदा चरेत् ।
शिवार्चनं त्रिपुंड्रस्य धारणं भस्मधूलनम् ॥ १४६ ॥
शिवमंत्रजपश्चैव शिवध्यानपरायणः ।
सदा लिंगांगसंयोगक्रियाज्ञानादिसंयुतः ॥ १४७ ॥
रसायनाद्यकृत्वा तु तथा वै क्रयविक्रयम् ।
वैद्यं वैश्यं ज्योतिषं च व्यवहारांश्च लौकिकान् ॥ १४८ ॥
विषयादीन्परित्यज्य विरक्तस्तदनंतरम् ।
भवाख्यारण्यमध्यस्थलोभपंकं परित्यजेत् ॥ १४९ ॥
तिरस्कृत्येंद्रियरिपून् मोहपैशाचिकं भयम् ।
तथैव क्रोधशार्दूलं ममतासर्पभीतिजम् ॥ १५० ॥

---

ಜಟಾ ಬಿಟ್ಟಾಗಲಿ, ತಲೆಯನ್ನು ಸಂಪೂರ್ಣ ಬೋಳಿಸಿದವನಾಗಲಿ, ಚಿಗರಿಯ ಚರ್ಮವನ್ನು ಧರಿಸಿಕೊಂಡು ವಸ್ತ್ರವನ್ನು ತ್ಯಾಗ ಮಾಡಿ ॥ ೧೪೫ ॥

ಈ ಪ್ರಕಾರವಾದ ಶಿವಲಾಂಛನಗಳನ್ನು ಧರಿಸಿಕೊಂಡು ಸಂಚರಿಸುವವನಾಗಬೇಕು. ಶಿವಪೂಜೆಯನ್ನೂ, ಭಸ್ಮಧಾರಣವನ್ನೂ, ಭಸ್ಮೋದ್ಧೂಳನವನ್ನೂ, ॥ ೧೪೬ ॥ ಶಿವಮಂತ್ರ ಜಪವನ್ನೂ ಮಾಡುತ್ತ ಶಿವಧ್ಯಾನದಲ್ಲಿ ತತ್ಪರನಾಗಿ ಲಿಂಗಾಂಗ ಸಾಮರಸ್ಯ ಸಾಧಕಗಳಾದ ಜ್ಞಾನಕ್ರಿಯಾದಿಗಳಲ್ಲಿ ಯಾವಾಗಲೂ ಆಸಕ್ತನಾದಂಥ ॥ ೧೪೭ ॥ ರಸಾಯನಾದಿ ಔಷಧವನ್ನು, ವ್ಯಾಪಾರವನ್ನು, (ಕೊಡಕೊಳ್ಳುವಿಕೆಯನ್ನು) ವೈದ್ಯವನ್ನೂ, ವೈಶ್ಯವೃತ್ತಿಯನ್ನೂ, ಲೌಕಿಕವಾದ ಕೋರ್ಟು ಕಚೇರಿಗಳ ವ್ಯವಹಾರವನ್ನು ॥ ೧೪೮ ॥ ವಿಷಯವಾಸನೆಯನ್ನು ತ್ಯಾಗಮಾಡಿ, ವೈರಾಗ್ಯವುಳ್ಳವನಾಗಿ ಸಂಸಾರವೆಂಬ ಅರಣ್ಯ ಮಧ್ಯದಲ್ಲಿರುವ ಲೋಭವೆಂಬ ಕೆಸರನ್ನು ತ್ಯಾಗ ಮಾಡಿದವನಾಗಿ ॥ ೧೪೯ ॥ ಇಂದ್ರಿಯಗಳೆಂಬ ವೈರಿಗಳನ್ನು ಮೋಹವೆಂಬ ಭೂತಗಳ ಭಯವನ್ನು, ಕ್ರೋಧವೆಂಬ ಹುಲಿಯನ್ನು, ಮಮತೆಯೆಂಬ ಸರ್ಪದ ಭಯವನ್ನು ॥ ೧೫೦ ॥

मन्मथाख्यस्तेयिनं च मदाख्यतिमिरं तथा ।
तापत्रयाख्यगर्ते च न प्रविष्टो भवेच्च सः ॥ १५१ ॥
विषयाख्ये कण्टकेऽपि पादप्रक्षेपवर्जितः ।
न प्रविष्टो भवेदेव सोऽहंकारमहाह्रदे ॥ १५२ ॥
सर्वावधानी भूत्वैव विरक्तस्थाननिष्ठितः ।
षोडशैरुपचारैश्च पूजितस्तोपवर्जितः ॥ १५३ ॥
अपूजितश्चेन्नो दुःखी भवेदेकप्रकारवान् ।
शीतोष्णयोः सुखेदुःखे शिलाविग्रहवद्भवेत् ॥ १५४ ॥
क्रियादीक्षादिना पूर्वैराचार्यैर्दत्तमंजसा ।
सत्क्रियासंयुतं चेष्टलिंगं ब्रह्ममयं तथा ॥ १५५ ॥
गुरुवक्त्रेण सूक्ष्मे तु शरीरे च द्वितीयके ।
इदं प्राणमयं लिङ्गमिति संभावयेत्तथा ॥ १५६ ॥

---

ಮನ್ಮಥನೆಂಬ ಕಳ್ಳನನ್ನು, ಮದವೆಂಬ ಕತ್ತಲೆಯನ್ನು, ತಿರಸ್ಕರಿಸಿ ತಾಪತ್ರಯವೆಂಬ ತಗ್ಗಿನಲ್ಲಿ ಬೀಳದೇ ಇರತಕ್ಕವನಾಗಿ ॥೧೫೧॥ ವಿಷಯವೆಂಬ ಮುಳ್ಳಿನ ಕಂಟಿಯ ಮೇಲೆ ಕಾಲಿಡದವನಾಗಿ ಅಹಂಕಾರವೆಂಬ ಮಡುವಿನಲ್ಲಿ ಮುಳುಗದೇ ಇರತಕ್ಕವನೂ ॥೧೫೨॥ ಸರ್ವ ವಿಷಯದಲ್ಲಿ ಎಚ್ಚರಿಕೆಯುಳ್ಳವನಾಗಿ, ವಿರತಿಯ ಸ್ಥಾನದಲ್ಲಿರುವಂಥ ಷೋಡಶೋಪಚಾರಗಳಿಂದ ಬೇರೆಯವರಿಂದ ಪೂಜಿಸಲ್ಪಟ್ಟವನಾದರೂ, ಸಂತೋಷ ರಹಿತನಾಗಿರತಕ್ಕಂಥ (ಪೂಜಾ ಮಾಡಿದವನಿಗಾಗಿ ಸಂತೋಷವನ್ನು ಮಾಸಿಸದಿದ್ದಂಥ) ಪೂಜಾ ಮಾಡದೇ ಇದ್ದರೆ ದುಃಖಿಯಾಗದೇ ಇರತಕ್ಕಂಥ, ಪೂಜಾ ಮಾಡಲಿ ಅಥವಾ ಮಾಡದಿರಲಿ, ಒಂದೇ ರೀತಿಯಾಗಿರುವಂಥ ಶೀತೋಷ್ಣಗಳಲ್ಲಿ, ಸುಖದುಃಖಗಳಲ್ಲಿ ಕಲ್ಲಿನ ಮೂರ್ತಿಯಂತೆ ಇರುವಂಥ (ಕಲ್ಲಿನ ಮೂರ್ತಿಗೆ ಶೀತವೂ, ಉಷ್ಣವೂ ಸುಖವು ದುಃಖವು ಹೇಗೆ ಆಗುವದಿಲ್ಲವೋ) ಅದೇ ರೀತಿಯಾಗಿ ಇರತಕ್ಕಂಥ ॥೧೫೩-೧೫೪॥

ಕ್ರಿಯಾದೀಕ್ಷಾ, ಮಂತ್ರದೀಕ್ಷಾ, ವೇಧಾದೀಕ್ಷಾಪೂರ್ವಕವಾಗಿ ಗುರುಗಳಿಂದ ಕೊಡಲ್ಪಟ್ಟಂಥ, ಸದಾಚಾರದಿಂದ ಕೂಡಿಕೊಂಡಂಥ ಬ್ರಹ್ಮಸ್ವರೂಪವಾದ ಸ್ಥೂಲ ಶರೀರದ ಮೇಲಿರುವ ಇಷ್ಟಲಿಂಗವೇ ಎರಡನೇಯದಾದ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗವಾಗಿರುವದೆಂದೂ, ಕಾರಣ ಶರೀರದಲ್ಲಿ ಭಾವಲಿಂಗವಾಗಿರುವದೆಂದೂ, ಹೀಗೆ

तथैव प्राणलिंगं तु, शरीरे कारणाह्वये ।
भावलिङ्गमिति ज्ञात्वा चेष्टलिङ्गं त्रिधाकृतम् ॥ १५७ ॥
महालिङ्गमिति ज्ञात्वा तेषु भेदं न भावयेत् ।
इष्टलिङ्गं ततो धृत्वा पञ्चाचार्यैस्ततः परम् ॥ १५८ ॥
अन्तरंगे पितुर्भावं भावयित्वा न दूषयेत् ।
शिशुभावैः षट्स्थलान्तर्निरालम्बे विलासवान् ॥ १५९ ॥
एतादृशनिराभारीवीरशैवस्य कुत्रचित् ।
कान्तारे त्विष्टलिङ्गस्य वियोगे सति दैवतः ॥ १६० ॥
सामान्यवीरशैवेव मंत्रोक्तविधिना ततः ।
न पुनर्धारयेल्लिंगं, वीरशैव इव स्वयम् ॥ १६१ ॥
न प्राणस्य परित्यागो, वीरशैवविशेषवत् ।
इष्टलिङ्गं मानसे च प्राणलिंगं न भावयेत् ॥ १६२ ॥

---

ಇಷ್ಟಲಿಂಗವೇ ಮೂರು ವಿಧವಾಗಿರುವದೆಂದು, ಇಷ್ಟಲಿಂಗವೇ ಮಹಾಲಿಂಗವು ಎಂದು ಗುರುಮುಖದಿಂದ ತಿಳಿದುಕೊಂಡು ಆ ಲಿಂಗಗಳಲ್ಲಿ ಭೇದವನ್ನು ಮಾಡಬಾರದು. ಪಂಚಾಚಾರ್ಯರಿಂದ ಇಷ್ಟಲಿಂಗವನ್ನು, ಧರಿಸಿಕೊಂಡವನಾಗಿ ಇರುವದರಿಂದ ಅಂತ ರಂಗದಲ್ಲಿ ಆ ಪಂಚಾಚಾರ್ಯರಲ್ಲಿ ತಂದೆಯೆಂಬ ಭಾವವನ್ನು ಇಟ್ಟುಕೊಂಡವನಾಗಿ, ಅವರನ್ನು ದೂಷಣೆ ಮಾಡಬಾರದು. ಷಟ್‌ಸ್ಥಲದೊಳಗಿನ ನಿರಾಲಂಬ ಸ್ಥಲದಲ್ಲಿ ಬಾಲಲೀಲೆಯಿಂದ ವಿಲಾಸ ಮಾಡುವಂಥ ॥ ೧೫೫ರಿಂದ ೧೫೯ ॥ ಇಂತಹ ಲಕ್ಷಣ ಗಳಿಂದ ಕೂಡಿದ ನಿರಾಭಾರಿ ವೀರಶೈವನಿಗೆ ಯಾವದಾದರೊಂದು ಅಡವಿಯಲ್ಲಿ ದೈವಯೋಗದಿಂದ ಇಷ್ಟಲಿಂಗದ ವಿಯೋಗವು ಆದದ್ದಾದರೆ ॥ ೧೬೦ ॥ ಸಾಮಾನ್ಯ ವೀರಶೈವನಂತೆ ಮಂತ್ರಪೂರ್ವಕವಾಗಿ ಇಷ್ಟಲಿಂಗವನ್ನು ಪುನಃ ಧರಿಸಬಾರದು. ವೀರಶೈವನಂತೆ ತನ್ನ ಪ್ರಾಣವನ್ನೂ ಕಳೆದುಕೊಳ್ಳಬಾರದು. ವಿಶೇಷ ವೀರಶೈವನಂತೆ ಇಷ್ಟಲಿಂಗವನ್ನು ಮನಸ್ಸಿನಲ್ಲಿ ಪ್ರಾಣಲಿಂಗವನ್ನಾಗಿ ಭಾವಿಸಬಾರದು. ॥ ೧೬೧ ॥ ಎಣ್ಣೆಯಲ್ಲಿ ತೋಯದ ಬತ್ತಿಯು ದೀಪದ ಸ್ಪರ್ಶದಿಂದ ದೀಪವಾಗುವದಲ್ಲದೆ

तैलसिक्ता वर्तिका तु ज्योतिः स्पर्शेन ज्योतिवत् ।
न पुनः पूर्वभावेन वर्तते च यथा तथा ॥ १६३ ॥
पूर्वाचार्यैर्दत्तलिंगं ममांगस्पर्शमात्रतः ।
सोऽहं भावेनैक्यभूतं मया सार्द्धं न संशयः ॥ १६४ ॥
इति निश्चित्य मनसा न भेदश्चांगलिंगयोः ।
तस्माल्लिंगं गतं वापि चाहमेवेष्टलिंगकः ॥ १६५ ॥
इति निश्चितधीः सोऽपि चतुष्वत्याश्रमेषु च ।
अत्युत्कृष्टो भवेत्पूज्यो निराभारी न संशयः ॥ १६६ ॥

इति निराभारिवीरशैवलक्षणम् ।

---

ಪೂರ್ವ ಸ್ವರೂಪದಿಂದ ಹೇಗೆ ಇರುವದಿಲ್ಲವೋ ಹಾಗೆ ಆಚಾರ್ಯರಿಂದ ಕೊಡಲ್ಪಟ್ಟ ಲಿಂಗವು ನನ್ನ ಅಂಗಸ್ಪರ್ಶ ಮಾತ್ರದಿಂದ ಸೋಹಂಭಾವದಿಂದ ನನ್ನೊಡನೆ ಐಕ್ಯವಾದದ್ದಾಗುವದು. ಇದರಲ್ಲಿ ಸಂದೇಹವಿಲ್ಲ. ॥ ೧೬೩ರಿಂದ ೧೬೪ ॥ ಹೀಗೆ ಮನಸ್ಸಿನಿಂದ ನಿರ್ಧರಿಸಿ ಅಂಗಲಿಂಗಗಳಲ್ಲಿ ಭೇದವನ್ನು ಮಾಡದೇ ಇರುವಂಥವನಾಗಬೇಕು. ಆದ್ದರಿಂದ ಲಿಂಗವು ಹೋದದ್ದಾದರೆ ನಾನೇ ಇಷ್ಟಲಿಂಗಸ್ವರೂಪನಿರುವೆನು. ಈ ಪ್ರಕಾರ ನಿಶ್ಚಿತವಾದ ಬುದ್ಧಿಯುಳ್ಳಂಥ, ಆ ಅಂಗವೇ ಲಿಂಗವೆಂದು ಭಾವಿಸಿದವನುಕೂಡ ನಾಲ್ಕು ವಿಧ ಆಶ್ರಮಗಳಲ್ಲಿ ಅತ್ಯಂತ ಶ್ರೇಷ್ಠನು ಪೂಜ್ಯನು ಆದ ನಿರಾಭಾರಿಯು ಇದರಲ್ಲಿ ಸಂಶಯವಿಲ್ಲ. ॥೧೬೫–೧೬೬॥ ಇಲ್ಲಿಗೆ ನಿರಾಭಾರಿವೀರಶೈವಲಕ್ಷಣಮುಗಿದುದು.

## ವಿಶೇಷ ವಿಚಾರ

ಈ ಪ್ರಕರಣದಲ್ಲಿ ವೀರಶೈವ ಪ್ರಭೇದಗಳನ್ನು ಹೇಳುವಾಗ್ಗೆ ನಿರಾಭಾರಿ ವೀರಶೈವನ ಸಾಮಾನ್ಯ ಲಕ್ಷಣಗಳನ್ನು ಹೇಳಿರುವನು ಅಂದರೆ ನಿರಾಭಾರಿ ವೀರಶೈವನಲ್ಲಿ ಸ್ವಯ, ಚರ, ಪರ ಎಂದು ಮೂರು ಭಾಗಗಳಿದ್ದು ಅವರವರ ಲಕ್ಷಣಗಳೂ, ತರತಮ ಭಾವವೂ ಪ್ರತ್ಯೇಕವಾಗಿದ್ದರೂ ಅವುಗಳನ್ನು ಬೇರೆ ಬೇರೆ ವಿಂಗಡಿಸದೆ ಮೂರರಲ್ಲಿಯ ಕೆಲಕೆಲವು ಅಂಶಗಳನ್ನು ತೆಗೆದುಕೊಂಡು ಸಾಮಾನ್ಯವಾಗಿ ಎಲ್ಲಾ ನಿರಾಭಾರಿಗಳಿಗೆ ಅನ್ವಯಿಸುವಂತೆ ಹೇಳಿರುವನು. ಮನೆ, ಮಠಗಳನ್ನು ಗ್ರಾಮ, ಸೀಮೆಗಳನ್ನು ತ್ಯಾಗ

श्रीमद्वीरशैवसदाचारसंग्रहे वीरशैवप्रकाशिकोक्तसप्तविधशैव-लक्षणचतुर्विधवीरशैवलक्षणतदाचरणकथनं नामाष्टमप्रकरणं समाप्तम् ।

---

ಮಾಡಿ ಗಿರಿ ಗಹ್ವರಗಳಲ್ಲಿ ಸಂಚಾರ ಮಾಡುತ್ತ ಚಿಗರಿಯ ಚರ್ಮವನ್ನು ಸುತ್ತಿ ಕೊಂಡಾಗಲಿ, ದಿಗಂಬರನಾಗಿಯಾಗಲಿ ಇರುವದು ಪರಾಸ್ಥಿತಿಯಲ್ಲಿರುವ ನಿರಾಭಾರಿಗೆ ಮಾತ್ರ ಲಕ್ಷಣವಿರುವದಲ್ಲದೆ ಉಳಿದವರಿಗೆ ಅದು ಲಕ್ಷಣವೇ ಅಲ್ಲ.

ಇದೇ ಗ್ರಂಥದ ಹದಿನೈದನೆಯ ಪ್ರಕರಣದಲ್ಲಿ ಸ್ವಯನೆಂಬ ನಿರಾಭಾರಿಯ ಲಕ್ಷಣವನ್ನು ಹೇಳುವಾಗ್ಗೆ "ಮಠಮೇಕಂ ಸಮಾಶ್ರಿತ್ಯ ಕೃತ್ವಾ ಸಲ್ಲಿಂಗ ಪೂಜನಂ" ಎಂದು ಸ್ಫುಟವಾಗಿ ಮಠಗಳನ್ನು ಆಶ್ರಯಿಸಿಕೊಂಡೇ ಇದ್ದು ಉತ್ತಮ ರೀತಿಯಿಂದ ಲಿಂಗವನ್ನು ಪೂಜಿಸುವದು ಸ್ವಯ ಜಂಗಮನ ಲಕ್ಷಣವು. ಎಂದು ಇದೇ ಗ್ರಂಥಕಾರನೇ ಹೇಳುವನು. ಆದುದರಿಂದಲೇ ಸಾವಿರಾರು ವರ್ಷಗಳಿಂದ ನಿರಾಭಾರಿಗಳ ಮಠಗಳು ಅಸ್ತಿತ್ವದಲ್ಲಿ ಉಳಿದಿರುತ್ತವೆ. ಆದಕಾರಣ ಎಂಟನೆಯ ಪ್ರಕರಣದಲ್ಲಿ ಹೇಳಿದ ಲಕ್ಷಣವು ಎಲ್ಲಾ ನಿರಾಭಾರಿಗಳಿಗೆ ಅನ್ವಯಿಸುವದಿಲ್ಲವೆಂದು ತಿಳಿಯಬೇಕು.

ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೆ ಏಕರಾತ್ರಿ ಇತ್ಯಾದಿಯಾದ ಕೆಲವು ಆಚಾರ ವಿಚಾರಗಳು ಚರಜಂಗಮನಿಗೆ ಮಾತ್ರ ಅನ್ವಯಿಸುತ್ತವೆ. ಒಟ್ಟಿಗೆ ಹೇಳುವದೆಂದರೆ ಶೈವಧರ್ಮದ ಸನ್ಯಾಸಿಗಳ ಆಚಾರ ವಿಚಾರಾದಿಗಳು ವೀರಶೈವ ಧರ್ಮದ ನಿರಾಭಾರಿಗೆ ಅನ್ವಯಿಸುವಂತೆ ಈ ಪ್ರಕರಣದಲ್ಲಿ ಹೇಳಿರುವದು ಅಷ್ಟು ಸಮಂಜಸವಾಗಿರುವದಿಲ್ಲ. ಏಕೆಂದರೆ ಹದಿನೈದನೆಯ ಪ್ರಕರಣದಲ್ಲಿ ಹೇಳಿದ ಸ್ವಯ, ಚರ, ಪರ ಎಂಬ ಭೇದವುಳ್ಳ ನಿರಾಭಾರಿಯ ಮೂರು ವಿಧವಾದ ಲಕ್ಷಣಕ್ಕೂ, ಆಚಾರ ವಿಚಾರಕ್ಕೂ ವಿರೋಧ ಬರುತ್ತದೆ. ಒಂದೇ ಗ್ರಂಥದಲ್ಲಿ ಪೂರ್ವೋತ್ತರ ವಿರೋಧ ಬರುವಂತೆ ಹೇಳುವದು ಸರಿಯಾದ ಮಾರ್ಗವಲ್ಲ. ಆದಕಾರಣ ಹದಿನೈದನೆಯ ಪ್ರಕರಣದಲ್ಲಿ ಹೇಳಿದ ಲಕ್ಷಣಗಳು ಆಚಾರ ವಿಚಾರಗಳು ಮೂರು ವಿಧರಾದ ನಿರಾಭಾರಿಗಳಲ್ಲಿ ಆವರವರಿಗೆ ಅನ್ವಯಿಸುವವೆಂದು ತಿಳಿಯಬೇಕು.

ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವ ಪ್ರಕಾಶಿಕೆಯಲ್ಲಿ ಹೇಳಿದ ಪ್ರಕಾರ ಸಪ್ತವಿಧ ಶೈವಲಕ್ಷಣ ನಾಲ್ಕುವಿಧ ವೀರಶೈವಲಕ್ಷಣ ಅವರ ಆಚಾರವಿಚಾರಗಳ ಬೋಧಕವಾದ ಎಂಟನೆಯ ಪ್ರಕರಣದ ಪಂಡಿತ ಶ್ರೀ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

---

## ॥ अथ नवमप्रकरणम् ॥

पार्वत्युवाच

मठस्थलं समाख्यातं त्वया भक्तमनोरथम् ।
इतःपरं महादेव मम पुण्याहमुच्यताम् ॥ १ ॥

ईश्वर उवाच

अथातः संप्रवक्ष्यामि पुण्याहं शृणु पार्वति ।
यत्कृत्वा कृतकृत्याःस्युर्नराः कालुष्यमानसाः ॥ २ ॥
निगमागममंत्राढ्यमैहिकामुष्मिकार्थदम् ।
गर्भाधाने पुंसवने सीमन्ते जातकर्मणि ॥ ३ ॥
नाम्नि चोन्नयने कर्णवेधने निष्क्रमे शिवे ।
अन्नस्य प्राशने चौले विद्यारंभे शुभावहे ॥ ४ ॥

---

## ಒಂಭತ್ತನೆಯ ಪ್ರಕರಣಂ

ಕಾರಣಾಗಮದಲ್ಲಿ ಹೇಳಿದ ಪ್ರಕಾರ ಪುಣ್ಯಾಹವಾಚನವು ಈ ಪ್ರಕರಣದಲ್ಲಿ ಹೇಳಲ್ಪಡುತ್ತದೆ.

— ಪಾರ್ವತಿಯ ಪ್ರಶ್ನೆ —

ಎಲೈ ಮಹಾದೇವನೆ ಭಕ್ತರ ಮನೋರಥವನ್ನು ಪೂರ್ಣ ಮಾಡುವ ಮಠ-ಸ್ಥಲದ ವಿಷಯವು ಇದುವರೆಗೂ ನಿನ್ನಿಂದ ಹೇಳಲ್ಪಟ್ಟಿತು. ಇನ್ನು ಮುಂದೆ ಪುಣ್ಯಾಹ ವಾಚನವನ್ನು ನನಗೆ ತಿಳಿಸಿಕೊಡು. ॥ ೧ ॥

— ಪರಮಾತ್ಮನ ಉತ್ತರ —

ಎಲೈ ಪಾರ್ವತಿಯೆ (ಇನ್ನು ಮುಂದೆ ಪುಣ್ಯಾಹ ವಾಚನವನ್ನು ಹೇಳುವೆನು ಕೇಳು)– ಕಲುಷಿತವಾದ ಮನಸ್ಸುಳ್ಳ ಮನುಷ್ಯರು ಯಾವ ಪುಣ್ಯಾಹ ವಾಚನವನ್ನು ಮಾಡಿ ಕೃತಾರ್ಥರಾಗುವರೋ ಅಂತಹ ಪುಣ್ಯಾಹ ವಾಚನವನ್ನು ಹೇಳುವೆನು ಕೇಳು. ॥ ೨ ॥

ವೇದ ಮತ್ತು ಆಗಮ ಮಂತ್ರಗಳಿಂದ ಪೂರ್ಣವಾದ ಇಹಪರ ಸುಖವನ್ನು ಕೊಡತಕ್ಕಂಥ ಈ ಪುಣ್ಯಾಹ ವಾಚನವು ಗರ್ಭಾಧಾನದಲ್ಲಿ, ಪುಂಸವನದಲ್ಲಿ, ಸೀಮಂತ

दीक्षायां च प्रतिष्ठायां नवगेहप्रवेशने ।
विवाहदीक्षासमये शिवाग्निजनने शुभे ॥ ५ ॥
वाचनीयमिदं देवि पुण्याहं मंगलप्रदम् ।
यजुर्मध्यसमुत्पन्नं कारणागमसूत्रजम् ॥ ६ ॥
यः शिवो नामरूपाभ्यां या शिवा सर्वमंगला ।
तयोः संस्मरणात्पुंसां सर्वतो जयमङ्गलम् ॥ ७ ॥
उत्तिष्ठन्तु पिशाचा ये भूताश्च भूमिभारकाः ।
एतेषामविरोधेन शिवकर्म समारभे ॥ ८ ॥

इति दर्भोदकेन भूशुद्धिं कुर्यात् ।

पृथिव्यां मेरुपृष्ठऋषिः कूर्मो देवता सुतलं छंदः आसने विनियोगः । अनंतासनाय नमः । इति दर्भेणासनशुद्धिं कुर्यात् । प्रणवस्य ब्रह्मा ऋषिः परमात्मा शंभुर्देवता देवी गायत्री छंदः प्राणायामे

---

ದಲ್ಲಿ, ಜಾತಕರ್ಮದಲ್ಲಿ, ನಾಮಕರಣದಲ್ಲಿ, ಆಂದೋಲಿಕಾರೋಹಣ, ಕರ್ಣವೇಧ ನಿಷ್ಕ್ರಮಣ, ಅನ್ನಪ್ರಾಶನ, ಚೌಲ, ವಿದ್ಯಾರಂಭ, ದೀಕ್ಷಾ, ನೂತನ ಗೃಹಪ್ರವೇಶ, ವಿವಾಹ ಮುಂತಾದ ಸಂಸ್ಕಾರಗಳಲ್ಲಿ ಎಲೈ ಪಾರ್ವತಿಯೆ, ಮಂಗಲಕರವಾದ ಯಜುರ್ವೇದದ ಮಧ್ಯದಲ್ಲಿ ಉತ್ಪನ್ನವಾದ ಕಾರಣಾಗಮದಲ್ಲಿ ಪ್ರಕಟಿತವಾದ ಈ ಪುಣ್ಯಾಹವು ಹೇಳಲ್ಪಡುವದು. ॥ ೩ರಿಂದ ೬ ॥ ಯಾವಾತನು ನಾಮ ಮತ್ತು ರೂಪ ಇವುಗಳಿಂದ ಪ್ರಾಣಿಗಳಿಗೆ ಸುಖ ಕೊಡತಕ್ಕಂಥವನಿರುವನೋ ಮತ್ತು ಸರ್ವರಿಗೆ ಮಂಗಲವನ್ನುಂಟು ಮಾಡುವಂಥ ಮತ್ತು ಸುಖ ಕೊಡುವಂಥ ಯಾವ ಪಾರ್ವತಿಯು ಇರುವಳೋ ಇವರಿಬ್ಬರ ಸ್ಮರಣೆ ಮಾಡುವದರಿಂದ ಮನುಷ್ಯರಿಗೆ ಸರ್ವಕಾರ್ಯಗಳಲ್ಲಿ ಜಯಪ್ರದವಾಗುತ್ತದೆ. ॥ ೭ ॥ ಭೂಮಿಗೆ ಭಾರಕಗಳಾದಂಥ ಭೂತ ಪಿಶಾಚಾದಿಗಳು ಇಲ್ಲಿಂದ ಎದ್ದು ಹೋಗಬೇಕು, ಇವರಿಗೆ ಅವಿರೋಧವಾಗಿ ಶಿವಕಾರ್ಯವು ಆರಂಭಿಸಲ್ಪಡುತ್ತದೆ. ॥೮॥ ಈ ಏಳು ಮತ್ತು ಎಂಟನೆಯ ಎರಡು ಮಂತ್ರ(ಪದ್ಯ)ಗಳನ್ನು ಹೇಳುತ್ತ ದರ್ಭೋದಕದಿಂದ ಭೂ ಶುದ್ಧಿಯನ್ನು ಮಾಡಬೇಕು. ಪೃಥಿವ್ಯಾಮ್ ಇತ್ಯಾದಿ ಮಂತ್ರದಿಂದ ದರ್ಭೆಯಿಂದ ಆಸನ ಶುದ್ಧಿಯನ್ನು ಮಾಡಬೇಕು. ಪ್ರಣವಸ್ಯ ಬ್ರಹ್ಮಾ ಋಷಿಃ ಪರಮಾತ್ಮಾ ಶಂಭುರ್ದೇವತಾ ದೇವೀ ಗಾಯತ್ರೀ ಛಂದಃ ಪ್ರಾಣಾ-

विनियोगः । इत्योंकारेण वामनासापुटमनामिकया पिधाय दक्षिण-नासापुटेन पूरयित्वा कुम्भयित्वा पुनर्दक्षिणनासापुटमंगुष्ठेन पिधाय वामनासापुटेन रेचयेत् । त्रिवारं । अथ संकल्पः । शिव शिव शम्भोराज्ञया प्रवर्तमानस्याद्यब्रह्मणो द्वितीयपरार्द्धे श्वेतवाराहकल्पे वैवस्वतमन्वंतरे कलियुगे प्रथमपादे जम्बूद्वीपे भरतखण्डे मेरोर्दक्षिण-दिग्भागे अमुके वर्षे अमुके अयने अमुके ऋतौ अमुके मासे अमुके पक्षे अमुष्यां तिथौ अमुके वासरे अमुके नक्षत्रे अमुके योगे अमुके करणे अमुके मठे अमुकशाखाध्ययनस्य अमुकगोत्रस्य अमुकसूत्रस्य अमुकप्रवरस्य यजमानस्य नियोगेन अमुकशाखाध्यायी अमुकगोत्री अमुकसूत्री अमुक प्रवरी शिवलिंगोऽहं प्राप्तशोभनसिद्ध्यर्थं धनधान्य समृद्ध्यर्थं आयुरारोग्यैश्वर्याभिवृद्ध्यर्थं शिवभक्तिसिद्ध्यर्थं पुण्याहं करिष्ये ।। इतिसंकल्प्य । तदादौ विघ्नपरिहारार्थं गणाधिपतिपूजां करिष्ये । संमार्जिते द्विपद्मचित्रिते चतुरस्रे मण्डले तण्डुलोपरि उमा-महेश्वरकलशौ प्रतिष्ठाप्य तदग्रतोगणेश्वरकलशं प्रतिष्ठाप्य तदग्रतः तांबूलपर्णे हरिद्रया वा क्रमुकेन वा गन्धेन वा विनायकं परिकल्प्य ।

---

ಯಾವೋವಿನಿಯೋಗಃ ಹೀಗೆ ಓಂಕಾರದಿಂದ ಎಡಗಡೆಯ ಮೂಗಿನ ಹೊರಳೆಯನ್ನು ಅನಾಮಿಕಾ (ಉಂಗುರ) ಬೆರಳಿನಿಂದ ಹಿಡಿದು ಬಲಗಡೆಯ ಮೂಗಿನ ಹೊರಳೆಯಿಂದ ವಾಯುವನ್ನು ತುಂಬಿಕೊಂಡು, ಕುಂಭಕ ಮಾಡಿ ಬಳಿಕ ಬಲಗಡೆಯ ಮೂಗಿನ ಹೊರಳೆಯನ್ನು ಹೆಬ್ಬೆರಳಿನಿಂದ ಹಿಡಿದು ಎಡಗಡೆಯ ಮೂಗಿನ ಹೊರಳೆಯಿಂದ ವಾಯುವನ್ನು ಹೊರಗೆ ಬಿಡಬೇಕು. ಈ ರೀತಿ ಮೂರು ಸಾರೆ ಮಾಡತಕ್ಕದ್ದು. ಅನಂತರ ಸಂಕಲ್ಪ ಶಿವಶಿವ ಶಂಭೋರಾಜ್ಞಯಾ.... ಅಹಂಪುಣ್ಯಾಹಂಕರಿಷ್ಯೆ ಎಂದು ಸಂಕಲ್ಪ ಮಾಡಿ ಆದಿಯಲ್ಲಿ ವಿಘ್ನ ನಿವಾರಣೆಗಾಗಿ ಗಣಪತಿ ಪೂಜೆ ಮಾಡುವೆನೆಂದು ಸಂಕಲ್ಪಿಸಿ, ಷಟ್‌ಸಮ್ಮಾರ್ಜನೆಯನ್ನು ಮಾಡಿದಂಥ ಚೌಕಾದ ಮಂಡಲದಲ್ಲಿ ಎರಡು ಕಮಲಗಳನ್ನು ಬರೆದು, ಎರಡು ಅಕ್ಕಿಯ ಗುಂಪಿಯನ್ನು ಹಾಕಿ ಅವುಗಳ ಮೇಲೆ ಉಮಾ ಮಹೇಶ್ವರ ಕಲಶಗಳನ್ನು ಸ್ಥಾಪಿಸಿ, ಅದರ ಮುಂದೆ ಅಕ್ಕಿಯ ಗುಂಪಿಯ ಮೇಲೆ ಗಣೇಶ ಕಲಶವನ್ನು ಸ್ಥಾಪಿಸಿ ಅದರ ಮುಂಭಾಗದಲ್ಲಿ ಎಲೆಯ ಮೇಲೆ ಅಡಿಕೆಯ

गणानां त्वा गणपतिꣳ हवामहे कविं कवीनामुपमश्रवस्तमं ज्येष्ठराजं ब्राह्मणां ब्रह्मणस्पत आनः शृण्वन्नूतिभिः सीदसादनं। इति प्रतिष्ठापयेत्। ॐ गणाधिपतये नमः अर्चयामि। ॐ सुमुखाय नमः अर्घ्यं समर्पयामि। ॐ एकदन्ताय नमः पाद्यं समर्पयामि। ॐ कपिलाय नमः आचमनीयं समर्पयामि। ॐ गजकर्णाय नमः मधुपर्कं समर्पयामि। ॐ लम्बोदराय नमः पञ्चगव्यं समर्पयामि ॐ विकटाय नमः पञ्चामृतं समर्पयामि। ॐ विघ्नराजाय नमः पञ्चोदकं समर्पयामि। ॐ गणाधिपाय नमः पङ्कुदकं समर्पयामि। ॐ धूमकेतवे नमः शुद्धोदकं समर्पयामि। ॐ गणाध्यक्षाय नमः महास्नानं समर्पयामि। ॐ फालचन्द्राय नमः अष्टविधार्चनं समर्पयामि। ॐ गजाननाय नमः षोडशोपचारान् समर्पयामि। ॐ वक्रदन्ताय नमः सुवर्णपुष्पं समर्पयामि। ॐ हेरंबाय नमः उपचारान् समर्पयामि। ॐ शूर्पकर्णाय नमः मंत्रपुष्पं समर्पयामि ॐ स्कन्दपूर्वजाय नमः प्रसादं गृह्णामि। ततः उमामहेश्वरकलशौ उमामहेश्वरनाममन्त्रेण पूजयेत्। कलशत्रयोदकं पुण्याहकलशे निक्षिप्योध्दृत्य पुण्याहमन्त्रानुच्चरन् दशसु दिक्षु आम्रपल्लवैः संमार्जयेत्। ॐ पुण्याहं दीर्घमायुः। शिवा आपः सन्तु। सौमनस्यमस्तु। अक्षतं चानरिष्टं चास्तु। हिरण्यगर्भे समवर्तताग्रे भूतस्य जातः पतिरेक आसीत्। सदाधार पृथ्वीं द्यां उतेमां कस्मै देवाय हविषा

---

ಬೆಟ್ಟವನ್ನು ಇಟ್ಟು ಅಥವಾ ಅರಿಷಿಣದಿಂದ ಇಲ್ಲವೇ ಗಂಧದಿಂದ ಗಣಪತಿಯನ್ನು ಕಲ್ಪಿಸಿ ಗಣಾನಾಂತ್ವಾ.... ಎಂಬ ಮಂತ್ರದಿಂದ ಇತ್ಯಾದಿ ಗಣಪತಿಯ ಪೂಜೆಯನ್ನು ಮಾಡಿ ಆ ಮೇಲೆ ಉಮಾ ಮಹೇಶ್ವರ ಕಲಶಗಳನ್ನು ಪೂಜಿಸಿ ಈ ಮೂರು ಕಲಶಗಳ ನೀರನ್ನು ಪುಣ್ಯಾಹಕಲಶದಲ್ಲಿ ಹಾಕಿ ಅದನ್ನು ಕೈಯ್ಯಲ್ಲಿ ತೆಗೆದುಕೊಂಡು ಪುಣ್ಯಾಹ

विधेम ॥ १ ॥ गन्धाःपांतु । यः प्राणतो निमिषतो महित्वैक इंद्राराजाजगतो बभूव । य ईशे अस्यद्विपदश्चतुष्पद कस्मै देवाय हविषा विधेम अक्षताःपांतु । जुष्टं देवानामिदमस्तु हव्यमरिष्टात्वमुदिहि यज्ञे अस्मिन् पुष्पाणि पांतु । सौमंगल्यं चास्तु । स्वश्रेयसमस्तु । सदाशिवः प्रीयतां शांतिरस्तु । इदं कृत्वा सर्वांगमक्रियाकरणारंभाः शुभाः शोभनाः प्रवर्तन्ताम् । तमहमोंकारमादिं कृत्वा भवद्भिरनुज्ञातः पुण्याहं वाचयिष्ये । वाच्यताम् । भद्रं कर्णेभिः श्रुणुयाम देवाः भद्रं पश्येमाक्षिभिर्यजत्राः स्थिरैरंगैस्तुष्टुवांस स्तनूभिः । व्यसेम देवहितं यदायुः । कपालीशाग्नियाम्यनैऋतबलशीघ्रे जटामुकुटधारिविघ्नेशानंतशंभुसहितः दिक्पालपूजितः पृथ्वीशः भद्रकालीशः श्रीवीरभद्रः पुण्याहं करोतु । अमरेशप्रवासनैमिषपुष्करापाढडिंडिभार भूतिनाकुला अभीश्वराः गुह्याष्टकाः पुण्याहं कुर्वन्तु । हरिश्चंद्रः श्रीशैलकल्पमन्मातकेश्वर महा काळमध्यमकेदार भैरवा इति तेजोऽधीशा आदिगुह्याष्टकाः पुण्याहं कुर्वन्तु । गयाकुरुक्षेत्रनाखलंडखलविमलाट्टहासमहेंद्रभीमा इति वाय्वधीशा गुह्याष्टकाः पुण्याहं कुर्वन्तु । वस्त्रापदकरुद्रकोट्यविमुक्तमहाबलगोकर्णभद्रकर्णस्वर्णाक्षस्थाणव इति व्योमेश्वराः पवित्राष्टका पुण्याहं कुर्वन्तु । ब्रह्मविष्णुरुद्रमहेश्वरसदाशिवाः पुण्याहं

---

ಮಂತ್ರಗಳನ್ನು ಉಚ್ಚರಿಸುತ್ತ ಮಾವಿನ ಚಿಗುರಗಳಿಂದ ಹತ್ತು ದಿಕ್ಕುಗಳಲ್ಲಿ ಸಿಂಪಡಿಸಬೇಕು. ಪುಣ್ಯಾಹಂ ದೀರ್ಘಮಾಯುಃ ಇಲ್ಲಿಂದ ಆರಂಭ ಮಾಡಿ, ಸದಾಶಿವಃ ಪ್ರೀಯತಾಂ ಶಾಂತಿರಸ್ತು ಅಲ್ಲಿಯ ವರೆಗೂ ಮಂತ್ರವನ್ನು ಹೇಳಿಕೊಂಡು ಕರ್ತೃವು ಈ ಪುಣ್ಯಾಹ ವಾಚನದ ಸಲುವಾಗಿ ಎಲ್ಲ ಅಗಮಗಳಲ್ಲಿ ಹೇಳಿದಂತಹ ಶುಭಕಾರ್ಯ ಗಳು ಉಂಟಾಗಲಿ. ನಾನು ಓಂಕಾರವನ್ನು ಆದಿಯಾಗಿ ಮಾಡಿ ತಮ್ಮಿಂದ ಅನುಮತಿ ಸಲ್ಪಟ್ಟವನಾಗಿ ಪುಣ್ಯಾಹವನ್ನು ಹೇಳಿಸುವೆನು. ತಾವು ಕೇಳಬೇಕು.

कुर्वन्तु सरस्वती लक्ष्मीगौर्युन्मनीमनोन्मन्यः पुण्याहं कुर्वन्तु । पृथिव्यप्तेजोवाय्वाकाशसूर्यचन्द्रात्मानः पुण्याहं कुर्वन्तु । शर्वभवरुद्रोग्रभीमेशानमहादेवपशुपतयोऽष्टमूर्त्यधीश्वराः पुण्याहं कुर्वन्तु । नन्दिभृङ्गिवीरकमाणिभद्रभद्रकर्णिरेणुकदारुकघण्टाकर्णधेनुकर्णगज— कर्णवडवाग्नितिलकसमुद्रापोषणब्रह्माण्डपेषणाद्याः पुण्याहं कुर्वन्तु ।

अंधकासुरसंग्रामे पुरा क्रुद्धस्य शूलिनः ।
स्विन्नमानललाटांबुभीषणः स्वेदपा महान् ॥ ९ ॥
अभूत्स्वेदोदकोद्भूतस्त्रैलोक्यग्रसनक्षमः ।
शिवाज्ञसेन भूतेन तेन पीतं च शोणितम् ॥ १० ॥
भूगतं चांधकस्यापि तथा तृप्तिं न चागमत् ।
तदा शिवस्य पुरतस्तपश्चक्रे सुदारुणम् ॥ ११ ॥
ततः कालेन संतुष्टः शिवस्तस्मै वरं ददौ ।
वरेण सोऽभवत्तेन त्रैलोक्यग्रसनक्षमः ॥ १२ ॥

---

ಅನಂತರ ಭದ್ರಂಕರ್ಣೇಭಿಃ ಇಲ್ಲಿಂದ ಹಿಡಿದು, ಬ್ರಹ್ಮಾಂಡ ಪೇಷಣಾದ್ಯಾಃ ಪುಣ್ಯಾಹಂಕುರ್ವಂತು ಅಲ್ಲಿಯವರೆಗೂ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು. ಹಿಂದಕ್ಕೆ ಅಂಧಕಾಸುರನಕೂಡ ಸಂಗ್ರಾಮ ಮಾಡುವಾಗ್ಗೆ ಸಿಟ್ಟಗೆದ್ದಂಥ ಶಿವನ ಹಣೆಯಲ್ಲಿ ಭಯಂಕರವಾದ ದೊಡ್ಡ ಬೆವರಿನ ರಾಶಿಯು ಉಂಟಾಯಿತು. ಆ ಬೆವರಿನ ಹನಿಯಿಂದ ಮೂರು ಲೋಕಗಳನ್ನು ನುಂಗಲು ಸಮರ್ಥವಾದ, ಸ್ವೇದಪ ಎಂಬ ಭೂತ ಹುಟ್ಟಿತು. ಶಿವನಿಂದ ಅಪ್ಪಣೆ ಮಾಡಲ್ಪಟ್ಟ ಆ ಭೂತದಿಂದ ಅಂಧಕಾಸುರನ ರಕ್ತವು ಕುಡಿಯಲ್ಪಟ್ಟಿತು. ॥ ೯-೧೦ ॥ ಬಳಿಕ ನೆಲದ ಮೇಲೆ ಬಿದ್ದಿದ್ದ ಅಂಧಕಾಸುರನ ರಕ್ತವನ್ನು ಕುಡಿದರೂ ಆ ಭೂತಕ್ಕೆ ತೃಪ್ತಿಯಾಗಲಿಲ್ಲ. ಆಗ ಆ ಭೂತದಿಂದ ಶಿವನ ಮುಂಭಾಗದಲ್ಲಿ ಭಯಂಕರವಾದ ದೊಡ್ಡ ತಪಸ್ಸು ಮಾಡಲ್ಪಟ್ಟಿತು. ॥ ೧೧ ॥

ಆ ಮೇಲೆ ಕೆಲವು ಕಾಲದ ನಂತರ ಸಂತುಷ್ಟನಾದಂಥ ಶಿವನು ಅವನಿಗೆ ವರವನ್ನು ಕೊಟ್ಟನು. ಆ ವರದಿಂದ ಅವನು ಮೂರು ಲೋಕಗಳನ್ನು ನುಂಗಲು ಸಮರ್ಥನಾದನು. ॥ ೧೨ ॥ ಆ ರಾಕ್ಷಸನು ತನ್ನ ಶರೀರದಿಂದ ಮೂರು ಲೋಕಗಳನ್ನು

रुरोध स्वेन देहेन त्रैलोक्यं स महासुरः ।
ततो भीताः सुरास्सर्वे श्रीकण्ठं शरणं गताः ॥ १३ ॥
देवानां रक्षणार्थाय श्रीकण्ठः करुणानिधिः ।
रुद्रं चातिबलं नाम मायापाशात्तथाऽसृजत् ॥ १४ ॥
पाशैरतिबलो रुद्रो बध्वा तं चाष्टभिस्ततः ।
कृत्वा चाधोमुखं दैत्यम् चिक्षेप धरणीतले ॥ १५ ॥
ब्रह्मादीनां च देवानां दैत्यदेहे बलात्प्रभुः ।
निवासमकरोत्तेन वास्तुं देवाधिवासनात् ॥ १६ ॥

संमार्ज्य रंगवल्या चतुरस्रं कृत्वा । वास्तोष्पते प्रतिजानीह्यस्माँस्त्वावेशो अनमीवो भवानः । यत्वे महे प्रति तन्नो जुषस्व । शन्न एधि द्विपदे शं चतुष्पदे । इति वास्तुं पूजयित्वा । तत्राष्टदिशं विरच्य । कपालीशमग्निं याम्यं नैरृतिं बलं शीघ्रं जटामुकुटधारिणम् । विघ्नेशं पाताले अनंतं ऊर्ध्वं शम्भुं चावाह्य । तत्तन्नाममंत्रेण समर्च्य तत्तत्प्रसादं पुण्याहकलशे निक्षिप्य दिक्षु संमार्जनं कुर्यात् । कपालीशाद्याः पूर्वदिशं संमार्जयन्ताम् ।

---

ತಡೆದು ಬಿಟ್ಟನು. ಆ ಮೇಲೆ ದೇವತೆಗಳೆಲ್ಲರು ಹೆದರಿದವರಾಗಿ ಪರಮಾತ್ಮನಿಗೆ ಶರಣು ಹೋದರು. ॥ ೧೩ ॥ ದೇವತೆಗಳ ರಕ್ಷಣೆಯು ಸಲುವಾಗಿ ಕರುಣಾಸಾಗರನಾದ ಪರಮಾತ್ಮನು ಒಳ್ಳೇ ಸಮರ್ಥನಾದಂಥ ರುದ್ರನನ್ನು ಕೂಡಲೇ ಮಾಯಾಪಾಶದಿಂದ ಹುಟ್ಟಿಸಿದನು. ॥ ೧೪ ॥ ಒಳ್ಳೇ ಸಮರ್ಥನಾದ ಆ ರುದ್ರನು ಎಂಟು ವಿಧವಾದ ಪಾಶಗಳಿಂದ ಅವನನ್ನು ಬಂಧಿಸಿ ಆ ಮೇಲೆ ಅವನನ್ನು ಕೆಳಮುಖಮಾಡಿ ಭೂಮಿಯ ಮೇಲೆ ಚೆಲ್ಲಿದನು. ॥ ೧೫ ॥ ಬ್ರಹ್ಮನೇ ಮೊದಲಾದ ದೇವತೆಗಳ ಪ್ರಾರ್ಥನೆಯಿಂದ ಪ್ರಭುವಾದ ಶಂಕರನು ಆ ರಾಕ್ಷಸನ ಶರೀರದಲ್ಲಿ ನಿವಾಸವನ್ನು ಮಾಡಿದನು. ದೇವನು ವಾಸ ಮಾಡುವದರಿಂದ ಅವನನ್ನು ವಾಸ್ತು ಎಂದು ಕರೆದರು. ॥ ೧೬ ॥

ಸಾರಣಿ ಮಾಡಿ ರಂಗವಲ್ಲಿಯನ್ನು ಚೌಕಾಗಿ ಹಾಕಿ ವಾಸ್ತೋಷ್ಪತೆ ಇಲ್ಲಿಂದ ಹಿಡಿದು ಶಂಚತುಷ್ಪದೇ ಅಲ್ಲಿಯ ವರೆಗೂ ಮಂತ್ರವನ್ನು ಹೇಳಿ ವಾಸ್ತುವನ್ನು ಪೂಜಿಸಿ ಅಲ್ಲಿ ಎಂಟು ದಿಕ್ಕುಗಳನ್ನು ಬರೆದು ಅದರ ಮೇಲೆ ಕಪಾಲೀಶ, ಅಗ್ನಿ, ಯಮ,

अग्न्याद्याः मग्निदिशं संमार्जयन्ताम् । याम्याद्याः यमदिशं संमार्जयन्ताम् । नैऋताद्याः नैऋतदिशं संमार्जयन्ताम् । बलाद्याः वरुणदिशं संमार्जयन्ताम् । शीघ्राद्याः वायुदिशं संमार्जयन्ताम् । जटामुकुटधार्याद्याः कुबेरदिशं संमार्जयन्ताम् । विद्येशाद्याः ईशान्यदिशं संमार्जयन्ताम् । अनन्ताद्याः पातालदिशं संमार्जयन्ताम् । शम्भ्वाद्याः ऊर्ध्वदिशं संमार्जयन्ताम् । सर्वदिशमतिवलनाम रुद्रः संमार्जयताम् । शांतिरस्तुपुष्टिरस्तु तुष्टिरस्तु वृद्धिरस्तु अविघ्नमस्तु आयुष्यमस्तु आरोग्यमस्तु स्वस्ति शिवं कर्मास्तु कर्मसमृद्धिरस्तु पुत्रसमृद्धिरस्तु वेदसमृद्धिरस्तु आगमससमृद्धिरस्तु पुराणसमृद्धिरस्तु इतिहाससमृद्धिरस्तु शास्त्रसमृद्धिरस्तु धनधान्यसमृद्धिरस्तु अहरहरमिवृद्धिरस्तु बहिर्देशे अरिष्टनिरसनमस्तु यत्पापंतत्प्रतिहतमस्तु यच्छ्रेयस्तदस्तु भक्तमाहेश्वरेभ्यः स्वस्तिरस्तु श्रीमदुमामहेश्वरौ प्रीयेतां प्रीयतां सदाशिवः । मंत्रदक्षिणां तुभ्यमहं संप्रददे । दत्तं तन्न मम प्रीयताम् । इति कारणागमे षोडशसहस्रके वीरशैवसूत्रे पुण्याह वाचनं नाम द्वितीयः पटलः संपूर्णः ।

इति श्रीमद्वीरशैवसदाचारसंग्रहे कारणागमानुसारेण पुण्याह वाचनं नाम नवमप्रकरणम् समाप्तम् ॥

---

ನೈಋತ್ಯ, ಬಲ, ಶೀಘ್ರ, ಜಟಾಮುಕುಟಧಾರಿ ಮತ್ತು ವಿದ್ಯೇಶ ಈ ದಿಕ್ಪಾಲಕರನ್ನು ಪಾತಾಳದಲ್ಲಿ ಅನಂತನನ್ನು, ಆಕಾಶದಲ್ಲಿ ಶಂಭುವನ್ನು ಆವ್ಹಾನಿಸಿ ಆಯಾಯ ಮಂತ್ರಗಳಿಂದ ಪೂಜಿಸಿ ಆ ಪ್ರಸಾದವನ್ನು ಪುಣ್ಯಾಹ ಕಲಶದಲ್ಲಿ ಹಾಕಿ ದಿಕ್ಕುಗಳಲ್ಲಿ ಸಿಂಪಡಿಸಬೇಕು. ಆ ಮೇಲೆ, ಕಪಾಲೀಶಾದ್ಯ, ಇಲ್ಲಿಂದ ಆರಂಭ ಮಾಡಿ ಪ್ರೀಯತಾಂ ಅನ್ನುವವರೆಗೂ ಮಂತ್ರವನ್ನು ಹೇಳಿ ಮಂತ್ರದಕ್ಷಿಣೆಯನ್ನು ನಿನಗೆ ನಾನು ಕೊಡುವೆನು. ಆ ಕೊಟ್ಟ ದಕ್ಷಿಣೆಯು ನನ್ನದಲ್ಲ ಸಂತೋಷವುಳ್ಳವನಾಗು. ಎಂದು ಪ್ರಾರ್ಥಿಸಬೇಕು. ಹೀಗೆ ಕಾರಣಾಗಮದ ಷೋಡಶಸಹಸ್ರಕ ವೀರಶೈವ ಸೂತ್ರದಲ್ಲಿ ಹೇಳಿದ ಪುಣ್ಯಾಹ ವಾಚನವೆಂಬ ಎರಡನೆಯ ಪಟಲವು ಸಂಪೂರ್ಣವಾಯಿತು.

ಇಲ್ಲಿಗೆ ಸದಾಚಾರ ಸಂಗ್ರಹದಲ್ಲಿ ಕಾರಣಾಗಮದ ಅನುಸಾರವಾಗಿ ಪುಣ್ಯಾಹವಾಚನವೆಂಬ ಒಂಭತ್ತನೆಯ ಪ್ರಕರಣದ ಪಂಡಿತ ಶ್ರೀ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತ ವಾದ ಭಾವಾರ್ಥವು ಮುಗಿದುದು.

## ॥ अथ दशमप्रकरणम् ॥

वीरशैवस्य गर्भादिसंस्कारविधयः क्रमात् ।
समाध्यन्ताः प्रवक्ष्यन्ते ज्ञानयोगानुकूलतः ॥ १ ॥
विद्वत्कल्पतरो चेतः श्रोतुमुत्कण्ठते मम ।
गर्भाधानादिसंस्कारान्वीरशैवोपजीविनाम् ॥ २ ॥
शृणु मंत्रिकुलोत्तंस वीरशैवोचितक्रियाः ।
प्रथमतौं त्र्यहादूर्ध्वमाषोडशदिनावधि ॥ ३ ॥
युग्मे ज्योतिःशास्त्रसिध्दे शोभनें दिवसे बुधः ।
कुर्वीत गर्भाधानाख्यम् संस्कारमिति तद्विदुः ॥ ४ ॥

---

## ಹತ್ತನೆಯ ಪ್ರಕರಣಂ

ವೀರಶೈವಾಚಾರ ಕೌಸ್ತುಭದಲ್ಲಿ ಹೇಳಿದ ಪ್ರಕಾರ ಗರ್ಭಾಧಾನಾದಿ ಚೌಲಾಂತ ಸಂಸ್ಕಾರ ವಿಧಿಗಳು ಹೇಳಲ್ಪಡುತ್ತವೆ.

ವೀರಶೈವನಿಗೆ ಜ್ಞಾನಾನುಕೂಲವಾದ ರೀತಿಯಲ್ಲಿ ಗರ್ಭಾಧಾನವೇ ಮೊದಲಾದ ಸಮಾಧಿಯೆ ಕೊನೆಯಾದ ಸಂಸ್ಕಾರಗಳು ಕ್ರಮದಿಂದ ಹೇಳಲ್ಪಡುತ್ತವೆ. ॥ ೧ ॥ ವಿದ್ವಾಂಸರಿಗೆ ಕಲ್ಪವೃಕ್ಷದಂತೆ ಇರುವಂಥ ಎಲೈ ಪಂಡಿತಶ್ರೇಷ್ಠನೇ ವೀರಶೈವರ ಗರ್ಭಾಧಾನಾದಿ ಸಂಸ್ಕಾರಗಳನ್ನು ಕೇಳಬೇಕೆಂದು ನನ್ನ ಮನಸ್ಸು ಉತ್ಕಂಠಿತ ವಾಗಿದೆ. ॥ ೨ ॥ ಎಲೈ ಮಂತ್ರಿಶ್ರೇಷ್ಠನೇ ವೀರಶೈವರಿಗೆ ಉಚಿತಗಳಾದ ಕ್ರಿಯೆಗಳನ್ನು ಹೇಳುವೆನು ಕೇಳು. ಪ್ರಥಮ ಋತುಮತಿಯಾದಾಗ ಮೂರು ದಿವಸಗಳ ನಂತರ ಹದಿನಾರು ದಿವಸದೊಳಗಾಗಿ ॥ ೩ ॥ ಜ್ಯೋತಿಷ್ಯ ಶಾಸ್ತ್ರದಲ್ಲಿ ಪ್ರಸಿದ್ಧವಾದ ಯುಗ್ಮ (ಸರಿ) ೪-೬ ಮೊದಲಾದ ಉತ್ತಮ ದಿವಸಗಳಲ್ಲಿ ಗರ್ಭಾಧಾನನಾಮಕವಾದ ಸಂಸ್ಕಾರವನ್ನು ಜ್ಞಾನಿಯಾದವನು ಮಾಡಬೇಕು. ಎಂದು ಬಲ್ಲವರು ಹೇಳುವರು. ॥ ೪ ॥ ನಾರದೀಯ ಗ್ರಂಥದಲ್ಲಿ ಹೇಳಿರುವದೇನಂದರೆ, ಯಾವ ಸ್ತ್ರೀಯಳ ಋತು

नारदीये । यावन्तो ऋतवस्तस्याः समतीयुः पतिं विना ।
तावत्यो भ्रूणहत्याः स्युस्तस्या यो नाददादृतिम् ॥ ५ ॥
भ्रूणहत्येति गर्भहतिः । याज्ञवल्क्यः ।
षोडशर्तुनिशाः स्त्रीणां तासु युग्मासु संविशेत् ॥ ६ ॥
तत्र मनुः । युग्मासु पुत्रो जायेत स्त्रियोऽयुग्मासु रात्रिषु ।
तस्माद्युग्मासु पुत्रार्थी संविशेदार्तवे स्त्रियम् ॥ ७ ॥
व्यासः । रात्रौ चतुर्थ्यां पुत्रः स्यादल्पायुर्धनवर्जितः ।
पञ्चम्यां पुत्रिणी नारी षष्ठ्यां पुत्रस्तु मध्यमः ॥ ८ ॥
सप्तम्यां सुभगा योषिदष्टम्यामीश्वरः सुतः ।
नवम्यां सुभगा दारा दशम्यां तु वरः पुमान् ॥ ९ ॥

---

ಕಾಲಗಳು ಪತಿ ಇಲ್ಲದಲೇ ಎಷ್ಟು ಅತಿಕ್ರಮಿಸಿ ಹೋಗುವವ್ರೋ ಅಷ್ಟು ಭ್ರೂಣಹತ್ಯ ದೋಷಗಳು ಆ ಸ್ತ್ರೀಯಳಿಗೆ ಭೋಗವನ್ನು ಕೊಡದೇ ಇದ್ದ ಪತಿಗೆ ಪ್ರಾಪ್ತವಾಗುತ್ತವೆ. ॥ ೫ ॥ ಭ್ರೂಣಹತ್ಯವೆಂದರೆ ಗರ್ಭನಾಶ. ಯಾಜ್ಞವಲ್ಕ್ಯಸ್ಮೃತಿಯಲ್ಲಿ ಋತುವಾದ ದಿವಸದಿಂದ ಹದಿನಾರು ದಿವಸಗಳ ವರೆಗೂ ಸ್ತ್ರೀಯರಿಗೆ ಋತುಕಾಲ ವಿರುತ್ತದೆ. ಆ ಹದಿನಾರು ರಾತ್ರಿಗಳಲ್ಲಿ ಯುಗ್ಮ (ಸರಿ) ೬—೮—೧೦ ಇತ್ಯಾದಿ ರಾತ್ರಿಗಳಲ್ಲಿ ಕೂಡಬೇಕೆಂದು ಹೇಳಿದೆ. ॥ ೬ ॥ ಇದೇ ವಿಷಯದಲ್ಲಿ ಮನುಸ್ಮೃತಿಯು. ಸರಿರಾತ್ರಿಗಳಲ್ಲಿ ೪—೬—೮—೧೦ ಇತ್ಯಾದಿ ದಿವಸಗಳಲ್ಲಿ ಗರ್ಭವು ನಿಂತರೆ ಗಂಡು ಹುಟ್ಟುವದು. ಬೆಸರಾತ್ರಿಗಳಲ್ಲಿ ೫—೭—೯ ಇತ್ಯಾದಿಗಳಲ್ಲಿ ಗರ್ಭವು ನಿಂತರೆ ಹೆಣ್ಣು ಹುಟ್ಟುವದು. ಆದಕಾರಣ ಗಂಡು ಬೇಕು ಎನ್ನುವವರು ಸ್ತ್ರೀಯಳ ಋತುಕಾಲದಲ್ಲಿ, ಸರಿರಾತ್ರಿಗಳಲ್ಲಿ ಸ್ತ್ರೀಯನ್ನು ಕೂಡಬೇಕು. ಎಂದು ಹೇಳುತ್ತದೆ. ॥ ೭ ॥ ಈ ವಿಷಯದಲ್ಲಿ ವ್ಯಾಸನು ೪ನೇ ರಾತ್ರಿಯಲ್ಲಿ ಗರ್ಭ ನಿಂತು ಹುಟ್ಟಿದ ಗಂಡು ಮಗುವು ಅಲ್ಪಾಯು. ಧನಹೀನವಾದುದೂ ಆಗುವದು. ೫ನೇ ರಾತ್ರಿಯಲ್ಲಿ ಗರ್ಭ ನಿಂತರೆ ಹೆಣ್ಣು ಹುಟ್ಟುತ್ತದೆ. ೬ನೇ ರಾತ್ರಿಯಲ್ಲಿ ಮಧ್ಯಮ ತರಗತಿಯ ಗಂಡು ಹುಟ್ಟುವದು. ॥ ೮ ॥ ೭ನೇ ರಾತ್ರಿಯಲ್ಲಿ ಸುಶೀಲಳಾದ ಸ್ತ್ರೀ ಹುಟ್ಟುವಳು. ೮ನೇ ರಾತ್ರಿಯಲ್ಲಿ ಸಂಪನ್ನವಾದ ಗಂಡು ಮಗುವು ಹುಟ್ಟುವದು. ೯ನೇ ರಾತ್ರಿಯಲ್ಲಿ ಸುಂದರ ಹುಡಿಗಿಯು ಹುಟ್ಟುವದು. ೧೦ನೇ ರಾತ್ರಿಯಲ್ಲಿ ಸುಂದರನಾದ ಹುಡುಗನು ಹುಟ್ಟುವನು. ॥ ೯ ॥ ೧೧ನೇ ರಾತ್ರಿಯಲ್ಲಿ ಧರ್ಮಹೀನಳಾದ ಸ್ತ್ರೀ ಹುಟ್ಟುವಳು. ೧೨ನೇ

एकादश्यामधर्मा स्त्री द्वादश्यां पुरुषोत्तमः ।
त्रयोदश्यां सुता चेत्स्याद्वर्णसंकरकारिणी ॥ १० ॥
धर्मज्ञश्च कृतज्ञश्च ह्यात्मवेदी दृढव्रतः ।
प्रजायते चतुर्दश्यां गुणौघो जगतीपतिः ॥ ११ ॥
राजपत्नी महाभागा राजवंशगताथवा ।
जायते पञ्चदश्यां तु बहुपुत्री पतिव्रता ॥ १२ ॥
विद्यालक्षणसंपूर्णः सत्यवादी जितेंद्रियः ।
आश्रयः सर्वभूतानां षोडश्यां जायते पुमान् ॥ १३ ॥
तत्र निषिद्धदिनान्याह मनुः ।
अमावास्याष्टमी चैव पूर्णमासी चतुर्दशी ।
ब्रह्मचारी भवेन्नित्यमप्यतौ स्नातको भवेत् ॥ १४ ॥
तासामाद्याश्चतस्रस्तु निंदितैकादशी तथा ।
त्रयोदशी च शेषाः स्युः प्रशस्ता दशरात्रयः ॥ १५ ॥

---

ರಾತ್ರಿಯಲ್ಲಿ ಶ್ರೇಷ್ಠನಾದ ಪುರುಷನು ಹುಟ್ಟುವನು. ೧೩ನೆಯ ರಾತ್ರಿಯಲ್ಲಿ ಜಾತಿಸಂಕರ ಮಾಡುವ ಹೆಣ್ಣು ಹುಟ್ಟುವದು ‖ ೧೦ ‖ ೧೪ನೆಯ ರಾತ್ರಿಯಲ್ಲಿ ಧರ್ಮ ಬಲ್ಲವನೂ, ಉಪಕಾರ ಸ್ಮರಣೆಯುಳ್ಳವನೂ, ಆತ್ಮಜ್ಞಾನಿಯಾದ, ದೃಢವಾದ ವ್ರತವುಳ್ಳವನೂ, ಗುಣಶಾಲಿಯೂ, ದೊಡ್ಡ ಅಧಿಕಾರಿಯಾಗುವ ಗಂಡು ಮಗನು ಹುಟ್ಟುವನು. ‖೧೧‖ ೧೫ನೆಯ ರಾತ್ರಿಯಲ್ಲಿ ರಾಜಪತ್ನಿಯೂ, ಮಹಾಭಾಗ್ಯಶಾಲಿಯೂ ರಾಜಕುಲದಲ್ಲಿ ಹುಟ್ಟುವವಳು, ಬಹಳ ಜನ ಮಕ್ಕಳುಳ್ಳ ಪತಿವ್ರತೆಯಾದ ಸ್ತ್ರೀ ಹುಟ್ಟುವಳು. ‖೧೨‖ ೧೬ನೆಯ ರಾತ್ರಿಯಲ್ಲಿ ದೊಡ್ಡ ವಿದ್ವಾಂಸನೂ, ಸತ್ಯವಾದಿಯೂ, ಜಿತೇಂದ್ರಿಯನೂ, ಸರ್ವಪ್ರಾಣಿಗಳಿಗೆ ಆಶ್ರಯದಾತನೂ ಆದ ಗಂಡು ಮಗನು ಹುಟ್ಟುವನು. ‖೧೩‖ ಈ ಹದಿನಾರು ದಿವಸಗಳಲ್ಲಿ ನಿಷಿದ್ಧವಾದ ದಿನಗಳನ್ನು ಮನುವು ಹೇಳಿರುವನು. ಅಮಾವಾಸಿ, ಹುಣ್ಣಿವೆ, ಅಷ್ಟಮಿ, ಚತುರ್ದಶಿ ಈ ತಿಥಿಗಳದ್ದ ದಿವಸಗಳಲ್ಲಿ ಸ್ತ್ರೀ ಋತುವಾಗಿದ್ದರೂ ಪುರುಷ ಬ್ರಹ್ಮಚಾರಿಯಾಗಿಯೇ ಇರತಕ್ಕದ್ದು. ಹಾಗೆ ಮಾಡಿದರೆ ಪುರುಷರಿಗೆ ಶ್ರೇಯಸ್ಸು ದೊರೆಯುವದು. ‖೧೪‖ ಈ ಹದಿನಾರು ರಾತ್ರಿಗಳಲ್ಲಿ ಮೊದಲಿನ ನಾಲ್ಕು ರಾತ್ರಿಗಳು ನಿಂದ್ಯವಾದವುಗಳಿರುತ್ತವೆ. ೧೧ ಮತ್ತು ೧೩ನೆಯ ರಾತ್ರಿಗಳು ನಿಂದ್ಯವಾದವುಗಳು. ಉಳಿದ ಹತ್ತು ರಾತ್ರಿಗಳು ಸ್ತ್ರೀಯನ್ನು ಕೂಡಲಿಕ್ಕೆ ಉತ್ತಮವಾದವುಗಳು. ‖ ೧೫ ‖ ಈ ರೀತಿಯಾಗಿ ತಿಳಿದುಕೊಂಡು, ಮಘಾ ಮತ್ತು ಮೂಲಾ

एवं गच्छन् स्त्रियं ज्ञात्वा मघामूलं च वर्जयेत् ।
स्त्रियो रक्ताधिके स्त्री स्यात्पुंसः शुक्लाधिके पुमान् ॥ १६ ॥
तस्माच्छुक्लविवृद्ध्यर्थं भक्ष्यं स्निग्धं च भक्षयेत् ।

गर्भाधानादिक्रियाणां कर्तृनिर्णयः ।

शुद्धं मिश्रं च मलिनं पिंडं त्रेधागमोदितम् ॥ १७ ॥

सिद्धान्तशिखामणौ ।

विशुद्धाः प्राकृताश्चेति द्विविधा मानुषाः स्मृताः ।
शिवसंस्कारिणः शुद्धाः प्राकृता इतरे जनाः ॥ १८ ॥

एतेन मलिनानां वेदविरुद्धतंत्रोदितपांचरात्रादिमलिनधर्मः मिश्राणां वर्णाश्रमधर्मवतां पैतामहपुराणाद्युदीरित व्रतनियमोपवास-काम्यकर्माणि । नित्यकर्माणि च । शिवाश्रमिणां शुद्धानां तु काम्यफलाभिसंधिरहितवेदागमोदितपरमेश्वराराधनरूपाणि कर्माणि ।

---

ನಕ್ಷತ್ರಗಳನ್ನು ಬಿಟ್ಟು, ಸ್ತ್ರೀಯನ್ನು ಕೂಡಬೇಕು. ಸ್ತ್ರೀಯಳ ರಕ್ತವು ಹೆಚ್ಚಾದರೆ ಹೆಣ್ಣು ಹುಟ್ಟುವದು. ಪುರುಷನ ವೀರ್ಯವು ಹೆಚ್ಚಾದರೆ ಗಂಡು ಹುಟ್ಟುವದು. ॥೧೬॥ ಆದಕಾರಣ ವೀರ್ಯ ವೃದ್ಧಿಯಾಗುವದಕ್ಕೋಸ್ಕರ ಉತ್ತಮ ಸ್ನಿಗ್ಧ ಪದಾರ್ಥಗಳನ್ನು ತಿನ್ನಬೇಕು. ಗರ್ಭಾಧಾನ ಮೊದಲಾದ ಸಂಸ್ಕಾರಗಳನ್ನು ಮಾಡುವ ಕರ್ತೃವಿನ ನಿರ್ಣಯವನ್ನು ಹೇಳುವೆನು. ಪಿಂಡವು ಶುದ್ಧ, ಮಿಶ್ರ, ಮಲಿನ ಎಂಬ ಮೂರು ವಿಧ ವಾಗಿರುವದೆಂಡು ಆಗಮದಲ್ಲಿ ಹೇಳಲ್ಪಟ್ಟದೆ. ॥ ೧೭ ॥ ಸಿದ್ಧಾಂತ ಶಿಖಾಮಣಿಯಲ್ಲಿ ಶುದ್ಧರೂ, ಪ್ರಾಕೃತರೂ ಎಂದು ಮನುಷ್ಯರು ಎರಡು ವಿಧವಾಗಿರುತ್ತಾರೆ. ಶಿವಸಂಸ್ಕಾರವು ಯಾರಿಗೆ ಆಗುತ್ತದೆಯೋ ಅವರು ಶುದ್ಧರು. ಇತರರು (ಶಿವನ ಸಂಸ್ಕಾರವಿಲ್ಲದವರು) ಪ್ರಾಕೃತರು ॥ ೧೮ ॥ ಇದರಿಂದ ವೇದ ವಿರುದ್ಧಗಳಾದ ತಂತ್ರ (ಆಗಮ)ಗಳಲ್ಲಿ ಹೇಳಲ್ಪಟ್ಟ ಪಾಂಚರಾತ್ರ ಮೊದಲಾದ ಮಲಿನ ಧರ್ಮವು ಮಲಿನ ರಾದವರಿಗೆ ಇರುತ್ತದೆ. ಬ್ರಹ್ಮನಿಂದ ಹೇಳಲ್ಪಟ್ಟ ಪುರಾಣಾದಿಗಳಲ್ಲಿ ಉಕ್ತವಾದ ವ್ರತ, ನಿಯಮ, ಉಪವಾಸ ಮೊದಲಾದ ಕಾಮ್ಯಕರ್ಮಗಳು ಮತ್ತು ನಿತ್ಯಕರ್ಮಗಳು ಇವೆಲ್ಲವು ವರ್ಣಾಶ್ರಮ ಧರ್ಮಗಳನ್ನು ಅನುಸರಿಸುವಂಥ ಮಿಶ್ರರಿಗೆ ಇರುತ್ತವೆ ಮತ್ತು ಕಾಮ್ಯ ಫಲಾಪೇಕ್ಷೆ ಇಲ್ಲದ, ವೇದ ಮತ್ತು ಆಗಮಗಳಲ್ಲಿ ಹೇಳಲ್ಪಟ್ಟ, ಪರಮೇಶ್ವರನ

इति सिद्धान्तशिखामणिवचनपर्यालोचनया गर्भाधानादिषु मंत्रलिंगात्फलाभिसंधिमतां कर्मणां त्याग इति । तत्र तावन्नांदीपुण्याहवचनादीनां पितृदेवताप्रीतिकराणां प्राकृतानां त्यागः । वीरशैवपितॄणां मुक्तानां तृप्तिकारणायोगेन वैय्यर्थ्यात् । शिवप्रसादेन नित्यपुण्याहवतां कर्मांगपुण्याहवैय्यर्थ्याच्च अप्राकृतवक्ष्यमाणपुण्याहप्रकाराणां संग्रहः कालनियमादिकर्मानुष्ठेयं नियमस्य नित्यफलनिर्वर्त्तकत्वात् तन्नित्यफलं शिवप्रसादरूपो मोक्ष इति ।

## अथ गर्भाधानविधिः

चतुर्थदिवसादूर्ध्वं मघामूलादिवर्जिते । स्वगृहमुपलिप्य रंगवल्लिकया अलंकृत्य । पूर्वेद्युः स्वस्तिवाचनं कृत्वाऽपरेद्युर्यथाशक्ति

---

ಆರಾಧನ ರೂಪ ಕರ್ಮಗಳು ಶಿವನಿಂದ ಹೇಳಲ್ಪಟ್ಟ ಆಶ್ರಮಾನುಯಾಯಿಗಳಾದ ಶುದ್ಧರಿಗೆ ಇರುತ್ತವೆ ಹೀಗೆ ಸಿದ್ಧಾಂತ ಶಿಖಾಮಣಿಯ ವಾಕ್ಯವನ್ನು ಆಲೋಚನೆ ಮಾಡುವದರಿಂದ ಗರ್ಭಾಧಾನಾದಿ ಕರ್ಮಗಳಲ್ಲಿ ಮಂತ್ರರೂಪಲಿಂಗದಿಂದ (ಹೇತುವಿನಿಂದ) ಫಲಾಪೇಕ್ಷೆಯಿಂದ ಕೂಡಿದ ಕರ್ಮಗಳ ತ್ಯಾಗವು ಸಿದ್ಧವಾಗುವದು. ಹೀಗಿರುವಾಗ ನಾಂದಿ ಪುಣ್ಯಾಹವಾಚನ ಮೊದಲಾದ ಪಿತೃದೇವತೆಗಳ ಪ್ರೀತಿಯು ಸಲುವಾಗಿ ಮಾಡತಕ್ಕಂಥ ಪ್ರಾಕೃತ ಕರ್ಮಗಳ ತ್ಯಾಗವು ಯುಕ್ತವಾದುದು. ಏಕೆಂದರೆ ವೀರಶೈವರ ಪಿತೃಗಳು ಮುಕ್ತರಾಗುವದರಿಂದ ಅವರಿಗೆ ತೃಪ್ತಿ ಮಾಡಬೇಕಾದ ಅವಶ್ಯಕತೆ ಇಲ್ಲದಿರುವದರಿಂದ ವ್ಯರ್ಥವಾಗುವದು. ಶಿವನ ಅನುಗ್ರಹದಿಂದ ವೀರಶೈವರಿಗೆ ಪ್ರತಿಯೊಂದು ದಿವಸವು ಪುಣ್ಯಕರವಾದುದೇ ಇರುತ್ತದೆ. ಆದ್ದರಿಂದ ಆಯಾಯ ಕರ್ಮದ ಅಂಗವಾದ ಪುಣ್ಯಾಹವು ವ್ಯರ್ಥವಾಗುತ್ತದೆ. ಆದ್ದರಿಂದ ಅವರಿಗೆ ಅಪ್ರಾಕೃತಗಳಾದ ಪುಣ್ಯಾಹಾದಿಗಳು ಹೇಳಲ್ಪಟ್ಟವೆ. ಕಾಲ ನಿಯಮಾದಿಗಳು ಕರ್ಮಾನುಷ್ಠಾನಕ್ಕೆ ಬೇಕು. ಏಕೆಂದರೆ ನಿಯಮಪಾಲನೆಯು ನಿತ್ಯಫಲವನ್ನು ಕೊಡುವದು. ಆ ನಿತ್ಯ ಫಲವು ಶಿವನ ಪ್ರಸಾದರೂಪ ಮೋಕ್ಷವು.

## ಅಥ ಗರ್ಭಾಧಾನವಿಧಿ

ಮೊದಲಿನ ನಾಲ್ಕು ದಿವಸಗಳ ನಂತರ ಮಘಾ, ಮೂಲಾ, ನಕ್ಷತ್ರಗಳಿದ್ದ ದಿವಸವನ್ನು ಬಿಟ್ಟು, ಉಳಿದ ದಿವಸದಲ್ಲಿ ಮನೆಯನ್ನು ಸಾರಣೆ ಕಾರಣಗಳಿಂದ ಮತ್ತು ರಂಗವಲ್ಲಿಯಿಂದ ಅಲಂಕರಿಸಿ ಮೊದಲನೇ ದಿವಸದಲ್ಲಿ ಸ್ವಸ್ತಿ ವಾಚನವನ್ನು ಮಾಡಿ

माहेश्वरान् भोजयेत्। दम्पती गन्धमाल्यादिभिरलंकृत्य रात्रौ शयनकाले आसनप्राणायामौ कृत्वा तिथ्याद्युच्चार्य। आवाभ्यां समस्तविद्यालक्षणसंपूर्णायुष्मत्पुत्रजननार्थं गर्भाधानं करिष्य इति संकल्प्य उभौ लज्जारहितौ रमेताम्। अपरेद्युः स्नात्वा नित्यकृत्यानंतरं शुद्धासने उपविश्य पीडयित्वा सुगन्धाया मूलं शुद्धांबरे निक्षिपेत्। उदिर्ष्वान्तरित्यस्य सूर्यासावित्री त्रिष्टुप् अनेन दक्षिणनासापुटे निनयेत्। अनेन गर्भधारणं भवति।
शयनादुत्थिता नारी शुचिः स्यादशुचिः पुमान्॥ १॥

अथ पुंसवनमुच्यते

गर्भात्तृतीये मासे पुंसवनं कार्यम्। तृतीये गर्भेऽविज्ञाते चतुर्थे मासि कार्यम्। पूर्वेद्युः स्वस्तिवाचनं नांदीं च कुर्यात्।

---

ಮರುದಿವಸ ತನ್ನ ಶಕ್ತ್ಯನುಸಾರ ಮಾಹೇಶ್ವರರಿಗೆ ಭೋಜನ ಮಾಡಿಸಬೇಕು. ದಂಪತಿಗಳು ಗಂಧ, ಹೂವು ಮೊದಲಾದವುಗಳಿಂದ ಅಲಂಕೃತರಾಗಿ ರಾತ್ರಿಯಲ್ಲಿ ಮಲಗುವ ಸಮಯದಲ್ಲಿ, ಆಸನ ಹಾಕಿ ಪ್ರಾಣಾಯಾಮವನ್ನು ಮಾಡಿ ತಿಥಿ ಮೊದಲಾದವುಗಳನ್ನು ಹೇಳಿ ನಮ್ಮಿಬ್ಬರಿಂದ ಸಮಸ್ತ ವಿದ್ಯೆ, ಒಳ್ಳೇ ಲಕ್ಷಣ ಇವುಗಳಿಂದ ಕೂಡಿದ ಪೂರ್ಣ ಆಯುಷ್ಯವುಳ್ಳ ಪುತ್ರನು ಹುಟ್ಟುವದರ ಸಲುವಾಗಿ ಗರ್ಭಾಧಾನ ನಾಮಕವಾದ ಕರ್ಮವನ್ನು ಮಾಡುವೆನು. ಹೀಗೆ ಸಂಕಲ್ಪ ಮಾಡಿ ದಂಪತಿಗಳು ಕೂಡುವದು. ಮರುದಿವಸ ಸ್ನಾನಮಾಡಿ ನಿತ್ಯಕರ್ಮಗಳನ್ನು ಮುಗಿಸಿದ ನಂತರ ಶುದ್ಧವಾದ ಆಸನದ ಮೇಲೆ ಕುಳಿತು, ಸೊಗದೇ ಬೇರನ್ನು ತೇದು ಶುದ್ಧವಾದ ವಸ್ತ್ರದಲ್ಲಿಟ್ಟು, ಉದೀರ್ಷ್ವಂ.... ಈ ಮಂತ್ರವನ್ನು ಹೇಳಿ ಬಲಗಡೆಯ ಮೂಗಿನ ಹೊರಳೆಯಲ್ಲಿ ರಸವನ್ನು ಹಿಂಡಬೇಕು. ಇದರಿಂದ ಗರ್ಭಧಾರಣವಾಗುತ್ತದೆ. ಹಾಸಿಗೆಯಿಂದ ಎದ್ದ ಸ್ತ್ರೀಯಳು ಶುಚಿಯೆಂದು, ಪುರುಷನು ಅಶುಚಿಯೆಂದು ಗಣಿಸಲ್ಪಡುವರು. ॥

— ಅಥ ಪುಂಸವನ ವಿಧಿ —

ಗರ್ಭಧಾರಣದಿಂದ ಮೂರನೆಯ ತಿಂಗಳಲ್ಲಿ ಪುಂಸವನವನ್ನು ಮಾಡತಕ್ಕದ್ದು ಮೂರನೆಯ ತಿಂಗಳಲ್ಲಿ ಗರ್ಭಧಾರಣವಾದದ್ದು ನಿರ್ಧಾರವಾಗದಿದ್ದರೆ ನಾಲ್ಕನೆಯ ತಿಂಗಳಲ್ಲಿ ಮಾಡಬೇಕು. ಮೊದಲನೆಯ ದಿವಸ ಸ್ವಸ್ತಿ ವಾಚನವನ್ನು ಮತ್ತು ನಾಂದಿಯನ್ನು ಮಾಡಬೇಕು. ಆ ದಿವಸ ಗರ್ಭಿಣಿಯು ಒಪ್ಪತ್ತೇ ಭೋಜನ ಮಾಡ

गर्भिण्या एकभुक्तं कार्यम् । अपरेद्युः शुभदिने पुन्नक्षत्रे नित्यकर्मानंतरमुपलेपनादि कृत्वा आत्मनो दक्षिणपार्श्वे वधूमुपवेश्य च । संस्कारकर्ता सर्वत्र विशेदुत्तरतः सदा । संस्कार्यपुरुषो वापि स्त्री वा दक्षिणतस्तथा ॥ १ ॥ अथ तिथ्यादीनुच्चार्य गार्भिकबैजिकदोषपरिहारार्थं आधारसंस्कारद्वारा आधेयसंस्कारार्थं पुंसवनाख्यं कर्म करिष्ये । अनवलोभनं तंत्रेण कुर्यात् । तस्यायं क्रमः । सरूपवत्साया गोर्दधि प्रसृतौ निक्षिपेत् । तादृश गोरलाभे अन्यस्या गोर्दधि प्रसृतौ निक्षिपेत् । तत्राण्डस्थाने माषद्वयं निक्षिप्य शिश्नस्थाने यवं गोधूमं वा एकं निक्षिप्य भर्ता पत्नीं पृच्छेत् । किं ब्रवीषीति त्रिः । सापि पुंसवनमिति त्रिः ब्रूयात् । एवं प्रसृतित्रयं प्राश्नीयात् । अथास्यै मण्डलागारच्छायायां

---

ತಕ್ಕದ್ದು ಮರುದಿವಸ ಶುಭ ದಿನದಲ್ಲಿ ಪುರುಷ ನಕ್ಷತ್ರ ದಲ್ಲಿ ನಿತ್ಯಕರ್ಮದ ತರುವಾಯ ಸಾರಣಿ ಕಾರಣಿಗಳನ್ನು ಮಾಡಿಕೊಂಡು ರಂಗವಲ್ಯಾದಿಗಳನ್ನು ಹಾಕಿ ಯಜಮಾನನು ತನ್ನ ದಕ್ಷಿಣಭಾಗದಲ್ಲಿ ಹೆಂಡತಿಯನ್ನು ಕೂಡ್ರಿಸಿಕೊಳ್ಳಬೇಕು. ಸಂಸ್ಕಾರ ಮಾಡುವವನು ಎಲ್ಲಾ ಕಾರ್ಯದಲ್ಲಿಯೂ ಯಾವಾಗಲೂ ಉತ್ತರಕ್ಕೆ (ಎಡಕ್ಕೆ) ಕೂಡ್ರಬೇಕು. ಸಂಸ್ಕಾರ ಮಾಡಿಸಿಕೊಳ್ಳುವವರು ಪುರುಷನಿರಲಿ, ಸ್ತ್ರೀ ಇರಲಿ ದಕ್ಷಿಣಕ್ಕೆ (ಬಲಕ್ಕೆ) ಕೂಡ್ರಬೇಕು. ಆ ಮೇಲೆ ತಿಥಿ ಮೊದಲಾದವುಗಳನ್ನು ಹೇಳಿಕೊಂಡು ಗರ್ಭಸಂಬಂಧವಾದ ಮತ್ತು ಬೀಜ ಸಂಬಂಧವಾದ ದೋಷಪರಿಹಾರಕ್ಕಾಗಿ ಆಧಾರ ಸಂಸ್ಕಾರ ಮೂಲಕವಾಗಿ ಆಧೇಯ ಸಂಸ್ಕಾರಕ್ಕಾಗಿ (ಬೀಜಕ್ಕೆ ಆಧಾರವಾದದ್ದು ಗರ್ಭಾಶಯ ಅಥವಾ ಗರ್ಭಿಣಿಯಳ ಹೊಟ್ಟೆ) ಇದಕ್ಕೆ ಸಂಸ್ಕಾರ ಮಾಡುವವರಿಂದ ಬೀಜಕ್ಕೆ ಸಂಸ್ಕಾರವಾದಂತಾಗುವದು. ಪುಂಸವನ ನಾಮಕವಾದ ಕರ್ಮವನ್ನು ಮಾಡುವೆನು ಎಂದು ಸಂಕಲ್ಪ ಮಾಡಿ ತಂತ್ರದಲ್ಲಿ ಹೇಳಿದ ಅನವಲೋಭನವನ್ನು ಮಾಡಬೇಕು. ಅದರ ಕ್ರಮವು ಹೀಗಿದೆ. ತಾಯಿಯಂತಹ ಕರವುಳ್ಳ ಆಕಳದ ಮೊಸರನ್ನು ಗರ್ಭಿಣಿಯ ಅಂಗೈಯಲ್ಲಿ ಹಾಕಬೇಕು. ಅಂತಹ ಆಕಳವು ಸಿಗದಿದ್ದರೆ ಮತ್ತೊಂದು ಆಕಳದ ಮೊಸರನ್ನು ಅಂಗೈಯಲ್ಲಿ ಹಾಕಬೇಕು. ಅಲ್ಲಿ ಅಂಡಸ್ಥಾನದಲ್ಲಿ ಎರಡು ಉದ್ದಿನ ಕಾಳನ್ನು ಶಿಶ್ನಸ್ಥಾನದಲ್ಲಿ ಒಂದು ಜವಿಯನ್ನಾಗಲಿ, ಗೋದಿಯನ್ನಾಗಲಿ ಇಟ್ಟು ಗಂಡನು ಹೆಂಡತಿಯನ್ನು ಕೇಳಬೇಕು. ಕಿಮ್ ಬ್ರವೀಷಿ ಎಂದು ಮೂರು ಸಾರೆ, ಅವಳು ಪುಂಸವನಂ ಎಂದು ಮೂರು ಸಾರೆ ಹೇಳಬೇಕು. ಆ ಮೇಲೆ ಆ ಮೊಸರನ್ನು ಕುಡಿಯ

दक्षिणस्यां नासिकायां श्वेतदूर्वारसं वस्त्रे क्षिप्त्वा । आ ते गर्भो योनिमेतु पुमान् बाण इवेषुधिं आदितो अत्यजायतां पुत्रस्ते दशमे मासि अग्निरेतु प्रथमो देवतानां सोस्यै प्रजां मुंचतु । मृत्यु-पाशात्सदयं राजा वरुणोऽनुमन्यताम् । यथेयं स्त्री पुत्रा मेघन-नादो दादिति । एवमृग्भ्यां सूक्ताभ्यां वा निनयेत् । इदं तु परिमण्डलगेहेति केचिदाहुः । पत्युरसन्निधौ देवरो वा कुर्यात् । देवर इति तस्यानुजः । इदं कर्म प्रतिगर्भं कार्यम् इति पुंसवनम् ।

### अथ सीमन्तोन्नयनमुच्यते

चतुर्थे मासि सीमन्तोन्नयनम् । तत्र गर्भेऽविज्ञाते षष्ठे वा कार्यम् । शुक्लपक्षे पुन्नक्षत्रे वा कार्यम् । पुन्नामश्रवणश्चैव तिष्यो हस्तपुनर्वसू । अभिजित्प्रौष्ठपादौ च अनुराधा तथाश्विनी ॥ १ ॥ एषु नक्षत्रेषु मध्यमपादद्वयेषु कर्म कुर्यात् । गृहं

---

ಬೇಕು. ಹೀಗೆ ಮೂರು ಸಾರೆ ಮೊಸರನ್ನು ಕುಡಿಯಬೇಕು. ಆ ಮೇಲೆ ದುಂಡಾಕಾರ ವಾದ ಮನೆಯ ಅಂಗಳದ ನೆರಳಿನಲ್ಲಿ ವಧುವಿನ ಬಲಗಡೆಯ ಮೂಗಿನ ಹೊರಳೆಯಲ್ಲಿ ಬಿಳೀ ಕರಿಕೆಯ ರಸವನ್ನು ವಸ್ತ್ರದಲ್ಲಿ ಹಾಕಿ ಆತೇಗರ್ಭೋ........ ಇತ್ಯಾದಿ, ದಾದಿತಿ ಅಲ್ಲಿಯ ವರೆಗೂ ಎರಡು ಸೂಕ್ತಗಳಿಂದ ಅಥವಾ ಎರಡು ಋಕ್ಕುಗಳಿಂದ ಹಿಂಡಬೇಕು. ಇದನ್ನು ಪರಿಮಂಡಲಗೇಹ ಎಂದು ಕೆಲವರು ಹೇಳುತ್ತಾರೆ. ಗಂಡನು ಹತ್ತಿರ ಇಲ್ಲ ದಿದ್ದಾಗ ಮೈದುನನು ಮಾಡಬೇಕು. ಈ ಪುಂಸವನ ಕಾರ್ಯವನ್ನು ಪ್ರತಿಯೊಂದು ಗರ್ಭಕ್ಕೂ ಮಾಡತಕ್ಕದ್ದು.

### — ಅಥ ಸೀಮಂತೋನ್ನಯನಂ —

ಸೀಮಂತ ಕಾರ್ಯವನ್ನು ನಾಲ್ಕನೆಯ ತಿಂಗಳಲ್ಲಿ ಮಾಡಬೇಕು. ಆ ತಿಂಗಳಲ್ಲಿ ಗರ್ಭವು ಸ್ಫುಟವಾಗಿ ತೋರದಿದ್ದರೆ ಆರನೆಯ ತಿಂಗಳಲ್ಲಿ ಮಾಡಬೇಕು. ಈ ಸೀಮಂತ ವನ್ನು ಶುಕ್ಲ ಪಕ್ಷದಲ್ಲಿ ಪುರುಷ ನಕ್ಷತ್ರದಲ್ಲಿ ಮಾಡತಕ್ಕದ್ದು. ಪುರುಷ ನಕ್ಷತ್ರಗಳು ಯಾವವೆಂದರೆ- ಶ್ರವಣ, ಪುಷ್ಯ. ಹಸ್ತ, ಪುನರ್ವಸು, ಅಭಿಜಿತ್, ಪೂರ್ವಾಭಾದ್ರಪದ, ಉತ್ತರಾ ಭಾದ್ರಪದ, ಅನುರಾಧಾ ಮತ್ತು ಅಶ್ವಿನಿ, ಇವುಗಳು. ಈ ನಕ್ಷತ್ರಗಳಲ್ಲಿ ನಡುವಿನ ಎರಡು ಪಾದ (೨—೩)ಗಳಲ್ಲಿ ಈ ಕಾರ್ಯವು ಮಾಡಲ್ಪಡತಕ್ಕದ್ದು.

पूर्ववदलंकृत्य स्वस्तिवाचनं नांदीं च कुर्यात्। अपरेद्युर्नित्यकृत्यानन्तरं शुद्धदेशे गोमयेनोपलिप्य स्वासने उपविश्य एनां गर्भिणीं, बैजिकगार्भिकदोषपरिहारार्थं क्षेत्रसंस्कारार्थं सीमन्तोन्नयनाख्यं कर्म करिष्ये। अथास्यै युग्मेन शलाटुग्लप्सेन त्रीण्या च शलल्या त्रिभिश्च कार्पासपिंजूलैरेकीकृत्य ललाटदेशादारभ्य मूर्धान्तं भूर्भुवः सुवरोमिति त्रिश्चतुर्वा लेखयेत्। तं तत्रैव निधाय शलाटुमिति तरुणं फलं ग्लप्स इति उदुंबरगुच्छं· उदुंबरमालां कण्ठे निधाय वीणागाथिनौ शं शास्ते सोमं राजानं संगतायतमिति सोमेनो राजावतु मानुषः प्रजानिविष्टं चक्रसामिति वीणागाथमेतत्। तत्समीपे या नदी स्थिता तन्नामोक्त्या गङ्गागोदावरीसरस्वतीति नामान्युच्चारयेत्। वृद्धसुवासिन्यो यद्यदुपदिशेयुस्तत्तथा कुर्यात्। प्रतिगर्भं न कुर्यात्। माहेश्वरान् कर्माङ्गं यथाशक्ति भोजयेत्। इति सीमन्तविधिः ॥

---

ಮನೆಯನ್ನು ಮೊದಲು ಹೇಳಿದಂತೆ ಅಲಂಕರಿಸಿ ಸ್ವಸ್ತಿವಾಚನ ಮತ್ತು ನಾಂದಿ ಇವುಗಳನ್ನು ಮಾಡತಕ್ಕದ್ದು. ಮರುದಿವಸ ನಿತ್ಯ ಕಾರ್ಯಗಳು ಮುಗಿದ ನಂತರ ಶುದ್ಧ ಪ್ರದೇಶದಲ್ಲಿ ಗೋಮಯದಿಂದ ಸಾರಿಸಿ, ರಂಗವಲ್ಲಿಯನ್ನು ಹಾಕಿ ಆಸನದ ಮೇಲೆ ಕೂತು ಬೀಜ ಸಂಬಂಧವಾದ ಮತ್ತು ಗರ್ಭಸಂಬಂಧವಾದ ದೋಷ ಪರಿಹಾರಕ್ಕಾಗಿ, ಕ್ಷೇತ್ರ ಸಂಸ್ಕಾರಕ್ಕಾಗಿಯೂ ಸೀಮಂತೋನ್ನಯನವೆಂಬ ಕರ್ಮವನ್ನು ಮಾಡುವೆನು ಎಂದು ಸಂಕಲ್ಪ ಮಾಡಿ ಆ ಮೇಲೆ ಎರಡು ಅಪಕ್ವವಾದ ಕಾಯಿಗಳುಳ್ಳ ಅತ್ತಿಯ ಗೊಂಚಲು, ಮುಳ್ಳು ಹಂದಿಯ ಮೂರು ಮುಳ್ಳುಗಳು, ಮೂರು ಹತ್ತಿಯ ಹಂಜಿಗಳು ಇವೆಲ್ಲವುಗಳನ್ನು ಒಟ್ಟುಗೂಡಿಸಿ ಹಣೆಯಿಂದ ಆರಂಭಿಸಿ ತಲೆಯವರೆಗೂ ಭೂರ್ಭುವಸ್ಸುವರೋಂ ಎಂದು ಹೇಳುತ್ತ ಮೂರು ಅಥವಾ ನಾಲ್ಕು ಸಾರೆ ಸೀಮಂತ ರೇಖೆಯನ್ನು ಬರೆಯಿಸಬೇಕು. ಆ ಅತ್ತಿಯ ಗೊಂಚಲವನ್ನು ನೆತ್ತಿಯ ಮೇಲೆಯೇ ಇಟ್ಟು, ಅತ್ತಿಯ ಕಾಯಿಗಳ ಸರವನ್ನು ಮಾಡಿ ಆ ಮಾಲೆಯನ್ನು ಕೊರಳಲ್ಲಿ ಹಾಕಬೇಕು. ವೀಣಾಗಾತೆಸೌ ಇತ್ಯಾದಿ ಮಂತ್ರವನ್ನು ಹೇಳಿ ಸಮೀಪದಲ್ಲಿ ಯಾವ ನದಿಯು ಇರುತ್ತದೊ ಅದರ ಹೆಸರನ್ನು ಹೇಳುವದರ ಜೊತೆಗೆ ಗಂಗಾ, ಗೋದಾವರಿ, ಸರಸ್ವತಿ ಎಂಬ ನಾಮಗಳನ್ನು ಗರ್ಭಿಣಿಯು ಉಚ್ಚರಿಸಬೇಕು ಈ ವಿಷಯದಲ್ಲಿ ಮುದುಕೆಯರಾದ ಮುತ್ತೈದೆಯರು ಏನು ಏನು ಹೇಳುವರೊ ಅದನ್ನು ಮಾಡಬೇಕು. ಈ ಸೀಮಂತಕಾರ್ಯವು ಮೊದಲನೆಯ ಗರ್ಭದಲ್ಲಿ ಮಾಡಲ್ಪಡುತ್ತದೆ.

एवं मंत्रिकुलोत्तंस गर्भाधानं च पुंसवम् ।
सीमन्तोन्नयनं कर्म वीरशैवाविरोधतः ।
कृत्वा जातस्य संत्कारं कुर्याद्बालस्य तत्क्रमात् ॥ १ ॥
वीरशैवाचारप्रदीपिकायाम् । वीरशैवस्थितानां तु मासि गर्भाष्टमे गुरुः ।
पञ्चसूत्रकृतं लिंगमर्चयेद्विधिवच्छुभम् ॥ २ ॥
नादो लिंगमिति प्रोक्तं विंदुः पीठमुदाहृतम् ।
नादबिंदुसमायुक्तं लिंगाकारमिहोच्यते ॥ ३ ॥
आकाशं लिंगमित्याहुः पृथ्वी तस्याधिपीठिका ।
आलयं सर्वभूतानां लयानां लिंगमुच्यते ॥ ४ ॥
यजुर्वेदे शतरुद्रीये। या ते रुद्र शिवा तनूरघोराऽपापकाशिनी ।
तया नस्तनुवा शन्तमया गिरिशंताभिचाकशीः । अस्यार्थः ।

---

ಪ್ರತಿಯೊಂದು ಗರ್ಭಕ್ಕೆ ಮಾಡಬಾರದು. ಈ ಕಾರ್ಯವಾದ ನಂತರ ತನ್ನ ಶಕ್ತಿಗನುಗುಣವಾಗಿ ಮಾಹೇಶ್ವರರನ್ನು ಭೋಜನ ಮಾಡಿಸಬೇಕು. ಇಲ್ಲಿಗೆ ಸೀಮಂತೋನ್ನಯನ ಮುಗಿದುದು.

— ಅಥ ಜಾತಸಂಸ್ಕಾರಃ —

ಎಲೈ ಮಂತ್ರಿಶ್ರೇಷ್ಠನೇ ಗರ್ಭಾಧಾನ, ಪುಂಸವನ, ಸೀಮಂತೋನ್ನಯನ ಎಂಬ ಕರ್ಮಗಳು ವೀರಶೈವ ಧರ್ಮಕ್ಕೆ ವಿರೋಧವಾಗದಂತೆ ಮಾಡಿ ಆ ಹುಟ್ಟಿದ ಕೂಸಿಗೆ ಕೂಡಲೇ ಜಾತಸಂಸ್ಕಾರವನ್ನು ಮಾಡಬೇಕು. ವೀರಶೈವಾಚಾರಪ್ರದೀಪಿಕೆಯಲ್ಲಿ ವೀರಶೈವರಲ್ಲಿರುವ ಸ್ತ್ರೀಯರ ಗರ್ಭದ ಎಂಟನೆಯ ತಿಂಗಳಲ್ಲಿ ಪಂಚಸೂತ್ರಕ್ಕೆ ಅನುಗುಣವಾಗಿ ತಯಾರಿಸಲ್ಪಟ್ಟ, ಶುಭಕರವಾದ ಲಿಂಗವನ್ನು ಗುರುವು ವಿಧಾನಪೂರ್ವಕವಾಗಿ ಸಂಸ್ಕಾರಗೊಳಿಸಿ ಶುದ್ಧ ಮಾಡಿ ಗರ್ಭಕ್ಕೆ ಧರಿಸತಕ್ಕದ್ದು. ಆ ಲಿಂಗದಲ್ಲಿ ನಾದವೇ ಲಿಂಗ (ಬಾಣ) ಎಂದು, ಬಿಂದುವು ಪೀಠವೆಂದು ಹೇಳಲ್ಪಟ್ಟದೆ. ನಾದಬಿಂದು ಇವೆರಡರಿಂದ ಕೂಡಿಕೊಂಡ ಲಿಂಗಾಕಾರವು ಇಲ್ಲಿ ಹೇಳಲ್ಪಡುತ್ತದೆ.॥ ೧–೩ ॥

ಆಕಾಶವನ್ನು ಶಿವಲಿಂಗದ ಬಾಣವೆಂದು, ಪೃಥ್ವಿಯನ್ನು ಆ ಲಿಂಗದ ಕೆಳಗಿನ ಪೀಠವೆಂದು ಹೇಳುವರು. ಉತ್ಪತ್ತಿಯನ್ನು ಮತ್ತು ಲಯವನ್ನು ಹೊಂದತಕ್ಕಂಥ ಯಾವತ್ತೂ ಭೂತಗಳಿಗೆ ಈ ಲಿಂಗವು ಆಶ್ರಯಸ್ಥಾನವೆಂದು ಹೇಳಲ್ಪಡುತ್ತದೆ. ॥ ೪ ॥

ಯಜುರ್ವೇದ ಶತರುದ್ರೀಯದಲ್ಲಿ ಯಾ ತೇ ರುದ್ರ........ ಈ ಮಂತ್ರದಅರ್ಥವು ಹೇ ರುದ್ರ–ರುದಂ ಸಂಸಾರ ದುಃಖದಿಂದ ಉಂಟಾದ ರೋದನವನ್ನು ದ್ರಾವಯತಿ

रुदं रोदनं संसारदुःखजनितं द्रावयतीतिरुद्रः । रुदमज्ञानं द्रावयतीति वा रुद्रः । हे रुद्र अघोरा शांताकारा शिवा मंगलप्रदा या ते तनूः लिंगरूपशरीरं सा अपापकाशिनी अपापेषु पापरहितेषु काशतइत्यपापकाशिनी । लिंगरूपशरीरावच्छिन्नः शिवः शमदमादिसंपन्नभक्तगात्रे धार्य इति पर्यवसितोऽर्थः । तत्र जागरूकेत्यनुसंधेयम् । अथवा हे रुद्र ते तव शिवा निर्दोषत्वेन, निरतिशयगुणाकरत्वेन, शिवंकरत्वेन च प्रसिद्धा या तनूः "लिङ्गं तु शिवयोर्देह" इत्यागमवाक्याल्लिंगरूपिणी मूर्तिः अघोरा शिवयोगेनैव हृदयंगमा । किंच । अपापाः शिवदीक्षया विगतकल्मषाः अथवा । अनेकजन्मसिद्धानां श्रौतस्मार्तानुवर्तिनाम् ।

नराणां क्षीणपापानां शिवभक्तिः प्रजायते ॥ ५ ॥

---

ಹೋಗಲಾಡಿಸತಕ್ಕವನು. ಇತಿ ರುದ್ರಃ ಅಥವಾರುದಂ ಅಜ್ಞಾನವನ್ನು ಹೋಗಲಾಡಿಸತಕ್ಕವನು ರುದ್ರನು ಎಂದು ಹೇಳಬಹುದು. ಎಲೈ ರುದ್ರನೇ ಅಘೋರಾ ಶಾಂತಾಕಾರವಾದ ಶಿವಾ ಮಂಗಲಕರವಾದ ಯಾ ಯಾವ ತೇ ನಿನ್ನ ತನೂಃ ಲಿಂಗರೂಪ ಶರೀರವು ಇರುವದೊ ಅದು ಅಪಾಪಕಾಶಿನೀ ಅಪಾಪ ಪಾಪರಹಿತರಾದ ಭಕ್ತರಲ್ಲಿ ಕಾಶಿನೀ ಶೋಭಿಸತಕ್ಕದ್ದು. ಅಪಾಪೇಷು ಕಾಶತೇ ಇತಿ ಅಪಾಪ ಕಾಶಿನೀ. ಲಿಂಗರೂಪ ಶರೀರದಿಂದ ಕೂಡಿಕೊಂಡಂಥ ಶಿವನು ಶಮ, ದಮ ಮೊದಲಾದ ಗುಣಗಳು ಯಾರಲ್ಲಿರುವವೋ ಅಂಥಾ ಭಕ್ತರ ಶರೀರದಲ್ಲಿ ಧರಿಸಲ್ಪಡತಕ್ಕವನು ಎಂಬುದು ಮುಖ್ಯಾರ್ಥವು. ಇಲ್ಲಿ ಭಕ್ತರ ಶರೀರದ ಮೇಲೆ ಶಿವನ ಲಿಂಗರೂಪ ಶರೀರವು ಜಾಗ್ರತವಾಗಿ ಇರುತ್ತದೆಂದು ತಿಳಿಯತಕ್ಕದ್ದು ಅಥವಾ ಹೇ ರುದ್ರ ಎಲೈ ರುದ್ರನೆ ತೇ ನಿನ್ನ ಶಿವಾ ದೋಷವಿಲ್ಲದಿರುವದರಿಂದ, ಅತ್ಯಧಿಕವಾದ ಗುಣಗಳಿಗೆ ಸಮುದ್ರವಾಗಿರುವದರಿಂದ, ಮತ್ತು ಮಂಗಲಕರವಾಗಿರುವದರಿಂದ ಪ್ರಸಿದ್ಧವಾದ ಯಾತನೂಃ ಯಾವ ಶರೀರವು (ಲಿಂಗವು) ಲಿಂಗಂತು ಶಿವಯೋರ್ದೇಹಃ, ಎಂಬ ಆಗಮ ವಾಕ್ಯದಿಂದ ಲಿಂಗರೂಪಮೂರ್ತಿಯು ಅಘೋರಾ ಶಿವಯೋಗದಿಂದಲೇ ಪರಮಾತ್ಮನು ಅದರಲ್ಲಿ ವಾಸ ಮಾಡುವದರಿಂದಲೇ ಹೃದಯಂಗಮವಾದ ಮತ್ತು ಅಪಾಪಾಃ ಶಿವದೀಕ್ಷೆಯಿಂದ ನಷ್ಟವಾದ ಪಾಪವುಳ್ಳ ಅಥವಾ ಅನೇಕ ಜನ್ಮಗಳಲ್ಲಿ ಸಿದ್ಧವಾದ ಶ್ರುತಿ ಸ್ಮೃತಿ ಇವುಗಳಲ್ಲಿ ಹೇಳಿದ ಕರ್ಮವನ್ನು ಅನುಸರಿಸುವದರಿಂದ ಪಾಪರಹಿತರಾದ ಮನುಷ್ಯರಿಗೆ ಶಿವಭಕ್ತಿಯು ಉಂಟಾಗುತ್ತದೆ. ‖ ೫ ‖ ಶಿವನ ಕೃಪೆಯಿಂದ ಶಿವಭಕ್ತಿಯು ಹುಟ್ಟುತ್ತದೆ.

प्रसादाद्देवताभक्तिः प्रसादो भक्तिसंभवः ।
यथैवांकुरतो बीजं बीजतो वा यथांकुरः ॥ ६ ॥

इत्यादिवचनप्रामाण्यात् बहुजन्मकृतैः पुण्यैः प्रक्षीणपापपञ्जराः । ये केचन संति त एव अपापा इत्यर्थः । अपापेषु भक्तेषु काशिनी इष्ट प्राण भाव लिंगरूपेण सुप्रकाशिनीत्यर्थः । गिरिशंत गिरौ कैलासे शं स्वोपासकानां निरतिशयानन्दस्वरूपसुखं तनोतीति गिरिशन्तः । हे गिरिशन्त शन्तमया सुखतमया तया लिंगस्वरूपया तनुवा शरीरेण नः अस्माकं अभिचाकशीः संसारनिमित्तं पुण्यपापसंचयं प्रणाद्य (प्रबाध्य) साक्षात्प्रकाशस्वेत्यर्थः । अत्रोपबृंहणवचनानि । स्कांदे । लिङ्गं शिवा तनूः प्रोक्ता मूर्तिर्घोरतनूः स्मृता ।
अपापेषु च भक्तेषु तयोर्मध्ये शिवा तनूः ॥ ७ ॥

---

ಶಿವನ ಕೃಪೆಯಾಗಬೇಕಾದರೆ ಶಿವಭಕ್ತಿ ಇರಬೇಕಾಗುತ್ತದೆ. ಈ ಶಿವನ ಕೃಪೆಗೂ ಭಕ್ತಿಗೂ ಬೀಜಾಂಕುರದಂತೆ ಸಂಬಂಧವಿರುತ್ತದೆ. ಹೇಗಂದರೆ ಅಂಕುರದಿಂದ ಬೀಜ ಹುಟ್ಟುತ್ತದೆ. ಬೀಜದಿಂದಲೇ ಅಂಕುರವಾಗಿರುತ್ತದೆ. ॥ ೬ ॥

ಈ ಪ್ರಮಾಣ ವಾಕ್ಯದಿಂದ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷಗಳಿಂದ ಪಾಪದ ರಾಶಿಗಳನ್ನು ಕಳೆದುಕೊಂಡವರು ಯಾರಿರುವರೋ ಅಂಥವರೇ ಅಪಾಪಾ ಎಂಬ ಶಬ್ದದಿಂದ ಹೇಳಿಸಿಕೊಳ್ಳಲ್ಪಡುತ್ತಾರೆ. ಇಂಥ ಪಾಪರಹಿತರಾದ ಭಕ್ತರಲ್ಲಿ ಕಾಶಿನೀ, ಇಷ್ಟ, ಪ್ರಾಣ, ಭಾವ, ಲಿಂಗರೂಪದಿಂದ ಚನ್ನಾಗಿ ಪ್ರಕಾಶಿಸುವಂಥ ಎಂದು ಅರ್ಥವು. ಗಿರಿಶಂತ ಗಿರಿ ಪರ್ವತದಲ್ಲಿ ಶಂ:- ತನ್ನ ಉಪಾಸನೆ ಮಾಡುವವರಿಗೆ ಅಧಿಕವಾದ ಆನಂದರೂಪ ಸೌಖ್ಯವನ್ನು ತನೋತಿ ಇತಿ ಕೊಡುವವನು. ಹೇ ಗಿರಿಶಂತ ಕೈಲಾಸ ಪರ್ವತದಲ್ಲಿ ನಿನ್ನ ಉಪಾಸನೆಯನ್ನು ಮಾಡುವಂಥ ಭಕ್ತರಿಗೆ ಅತಿಶಯ ಸೌಖ್ಯವನ್ನು ಕೊಡುವಂತಹ ಎಲೈ ಪರಮಾತ್ಮನೇ ಶಂತಮಯಾಃ ಸುಖವನ್ನು ಕೊಡುವಂತಹ ತಯಾ ಲಿಂಗಸ್ವರೂಪವಾದ ತನುವಾ ಶರೀರದಿಂದ, ನಃ ನಮ್ಮಗಳಿಗೆ ಅಭಿಚಾಕಶೀಃ ಈ ಪ್ರಪಂಚದಲ್ಲಿ ಹುಟ್ಟುವದರಿಂದ ಉಂಟಾದ ಪುಣ್ಯ ಪಾಪಗಳ ರಾಶಿಯನ್ನು ನಾಶ ಮಾಡಿ ಪ್ರತ್ಯಕ್ಷವಾಗಿ ಪ್ರಕಾಶಮಾನನಾಗು ಎಂದು ಅರ್ಥವು. ಇಲ್ಲಿ ಈ ಮಂತ್ರಕ್ಕೆ ನಾವು ಹೇಳಿದ ಅರ್ಥವೇ ಇರುತ್ತದೆಂದು ಹೇಳುವ ವಾಕ್ಯಗಳು ಸ್ಕಾಂದ ಪುರಾಣದಲ್ಲಿವೆ. ಲಿಂಗವು ಮಂಗಲವನ್ನುಂಟು ಮಾಡುವಂತಹ ಶರೀರವೆಂದೂ ಮೂರ್ತಿಯು ಭಯಂಕರವಾದ ಶರೀರವೆಂದೂ ಹೇಳಲ್ಪಟ್ಟಿದೆ. ಈ ಎರಡರಲ್ಲಿ ಪಾಪರಹಿತರಾದ ಭಕ್ತರಲ್ಲಿ ಮಂಗಲಕರವಾದ ತನುವುಳ್ಳ ಲಿಂಗವು ಶೋಭಿಸುತ್ತದೆ. ॥ ೭ ॥

काशते परमेशस्य शिष्टास्ते लिङ्गधारिणः ।
अघोराऽपापकाशीति या ते रुद्र शिवा तनूः ॥ ८ ॥
यजुषा गीयते यस्मात्तस्माच्छैवोऽघवर्जितः ।
नित्यं भाति तदङ्गेषु या ते रुद्र शिवा तनूः ।
अघोराऽपापकाशीति श्रुतिराह सनातनी ॥ ९ ॥
किंच हरदत्ताचार्यकृते चतुर्वेदतात्पर्यसंग्रहे । वृत्तम् ॥
अपापकाशीति वपुः श्रुतं ते शिष्टाः प्रसिद्धा भगवन्नपापाः ।
अतस्त्वदीयानपहाय भक्तानन्यानशिष्टानिति निश्चिनोमि ॥ १० ॥

एवं युञ्जानः प्रथमं मन इत्यादिश्रुतीनां नीलकण्ठाचार्य-मञ्चणपंडितमायिदेवप्रभृतिभिर्लिंगधारणपरत्वेन व्याख्यातत्वात् । ननु भवदुदाहृतश्रुतीनां भाष्यकृद्भिर्लिंगधारपरतया अव्याख्यातत्वात्कथ

---

ಇಂತಹ ಲಿಂಗಧಾರಿಗಳು ಶ್ರೇಷ್ಠರು. ಅಘೋರಾ, ಅಪಾಪಕಾಶೀ, ಇತಿ, ಯಾತೆ, ರುದ್ರ, ಶಿವಾ, ತನೂಃ ಹೀಗೆ ಯಜುರ್ವೇದದಿಂದ ಯಾವಕಾರಣದಿಂದ ಹೇಳಲ್ಪಡುವದೋ ಆ ಕಾರಣದಿಂದ ವೀರಶೈವ ಮತವು ಪಾಪರಹಿತವಾದದ್ದು ? ಏಕೆಂದರೆ ಅವರ ಅಂಗದ ಮೇಲೆ ಎಲೈ ರುದ್ರನೇ ನಿನ್ನ ಮಂಗಲಕರವಾದ ಶರೀರವು ಯಾವಾಗಲೂ ಶೋಭಿಸುತ್ತದೆ. (ಆ ಪಾಪರಹಿತರಾದ ಭಕ್ತರಲ್ಲಿ ಪ್ರಕಾಶಿಸುತ್ತದೆ.) ಎಂದು ಶ್ರುತಿಯು ಹೇಳುತ್ತದೆ. ॥೮-೯॥ ಮತ್ತು ಹರದತ್ತಾಚಾರ್ಯನಿಂದ ಮಾಡಲ್ಪಟ್ಟ ಚತುರ್ವೇದ ತಾತ್ಪರ್ಯ ಸಂಗ್ರಹ ಎಂಬ ಪುಸ್ತಕದಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿದೆ. ಎಲೈ ಪರಮಾತ್ಮನೆ ಶಿಷ್ಟರೂ ಪಾಪರಹಿತರೂ ಆದ ನಿನ್ನ ಭಕ್ತರು ಪ್ರಸಿದ್ಧರಾಗಿರುವರು. ಅಪಾಪಕಾಶೀ ಎಂಬ ವಾಕ್ಯದಿಂದ ನಿನ್ನ ಮೂರ್ತಿಯು ಪಾಪರಹಿತರಾದ ಭಕ್ತರ ಮಧ್ಯದಲ್ಲಿ ಶೋಭಿಸುತ್ತದೆ. ಆದಕಾರಣ ನಿನ್ನ ಸಂಬಂಧಿ ಭಕ್ತರನ್ನು ಬಿಟ್ಟು ಉಳಿದವರನ್ನು ಶಿಷ್ಟರಲ್ಲದವರನ್ನಾಗಿ ನಿಶ್ಚಯಿಸುತ್ತೇನೆ. ॥ ೧೦ ॥

ಏವಂ ಯುಂ ಜಾನಃ ಪ್ರಥಮಂ ಮನಃ ಇತ್ಯಾದಿ ಶ್ರುತಿಗಳಿಗೆ ನೀಲಕಂಠಾಚಾರ್ಯ, ಮಂಚಣ್ಣಪಂಡಿತ, ಮಾಯೀದೇವ ಮೊದಲಾದವರಿಂದ ಲಿಂಗಧಾರಣ ಪರವಾಗಿ ವ್ಯಾಖ್ಯಾನವು ಮಾಡಲ್ಪಟ್ಟಿದೆ. ಇಲ್ಲಿ ನೀವು ಹೇಳುವ ಶ್ರುತಿಗಳಿಗೆ ಭಾಷ್ಯಕಾರನಿಂದ ಲಿಂಗಧಾರಣ ಪರವಾಗಿ ವ್ಯಾಖ್ಯಾನವು ಮಾಡಲ್ಪಡದೇ ಇರುವದರಿಂದ ನೀವು ಹೇಳುವ ಪೋಷಕ ವಾಕ್ಯಗಳಿಗೆ ಪ್ರಾಮಾಣ್ಯವು ಹೇಗೆ ಸಿದ್ಧಿಸುವದು ಎಂದು

मुपबृह्मणवचनानां प्रामाण्यमितिचेन्न ।

यश्चतुर्वेदविद्विप्रः पुराणं वेत्ति नार्थतः ।

तं दृष्ट्वा भयमाप्नोति वेदो मां प्रतरेदिति ॥ ११ ॥

सूतसंहितावचनात्, इतिहासपुराणाभ्यां वेदार्थमुपबृह्मयेत् ।

बिभेत्यल्पश्रुताद्वेदो मामयं प्रतरेदिति ॥ १२ ॥

इति महाभारते व्यासवचनाच्च पूर्वोदाहृतश्रुतीनां यथोक्तोपबृह्मणवचनानुसारेणैवार्थं वक्तुं शक्यत्वात् । उदाहरणानि । हंसोपनिषदि । हृदब्जमध्ये लिङ्गं धृत्वा ज्योतिषि संविशन्ति । अत्याश्रमस्थाः परिमुञ्चन्ति सर्वे । लिंगांगशोभामोक्षमार्गैकनिष्ठाः ते ब्रह्मलोकेषु परान्तकाले । शिवप्रसादात्परिमुञ्चन्ति सर्वे ।

---

ಯಾರೂ ಸಂಶಯ ಮಾಡಬಾರದು. ಏಕೆಂದರೆ ನಾಲ್ಕೂ ವೇದಗಳ ಅರ್ಥವನ್ನು ತಿಳಿದವನಾಗಿದ್ದರೂ, ಯಾವನು ಪುರಾಣದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವದಿಲ್ಲವೊ ಅಂಥವನನ್ನು ನೋಡಿ ಆ ವೇದವು ಇವನು ನನ್ನನ್ನು ವಂಚಿಸುವನು ಎಂದು ಭಯ ಪಡುತ್ತದೆ. ಎಂದು ಸೂತ ಸಂಹಿತೆಯಲ್ಲಿ ಹೇಳಿರುವದು. ॥ ೧೧ ॥ ಮತ್ತು ವೇದದ ಅರ್ಥವನ್ನು ಇತಿಹಾಸ ಹಾಗು ಪುರಾಣ ಇವುಗಳಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಅಲ್ಪ ಸ್ವಲ್ಪ ತಿಳಿದವನ ದೆಶೆಯಿಂದ ವೇದವು ಇವನು ನನ್ನನ್ನು ವಂಚಿಸುವನು. ಎಂದು ಹೆದರುತ್ತದೆ. ॥ ೧೨ ॥ ಈ ರೀತಿ ಮಹಾಭಾರತದಲ್ಲಿ ವ್ಯಾಸನು ಹೇಳಿರುವನು. ಮತ್ತು ಮೊದಲು ಹೇಳಿದ ಶ್ರುತಿಗಳಿಗೆ ಹಿಂದೆ ಹೇಳಿದ ಉಪಬೃಂಹ್ಮಣ ವಾಕ್ಯವನ್ನನುಸರಿಸಿ ಅರ್ಥವನ್ನು ಹೇಳುವದು ಶಕ್ಯವಿದೆ. ಉದಾಹರಣೆ ಹಂಸೋಪನಿಷತ್ತಿನಲ್ಲಿ ಹೃದಯ ಕಮಲ ಮಧ್ಯದಲ್ಲಿ ಲಿಂಗವನ್ನು ಧರಿಸಿಕೊಂಡು, ಪ್ರಕಾಶರೂಪವಾದ ಶಿವ ತೇಜಸ್ಸಿನಲ್ಲಿ ಅತ್ಯಾಶ್ರಮಿಗಳಾದ ವೀರಶೈವರೆಲ್ಲರೂ ಪ್ರವೇಶ ಮಾಡುತ್ತಾರೆ. ಮತ್ತು ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾರೆ. ಲಿಂಗಾಂಗ ಶೋಭೆಯುಳ್ಳವರೂ ಮೋಕ್ಷ ಮಾರ್ಗದಲ್ಲಿಯೇ ತತ್ಪರರಾದ ವೀರಶೈವರು ಬ್ರಹ್ಮಲೋಕಗಳಲ್ಲಿ ಅನಂತ ಕಾಲದ ವರೆಗೂ ವಾಸಿಸುತ್ತಾರೆ. ಇವರೆಲ್ಲರೂ ಶಿವನ ಪ್ರಸಾದದಿಂದ ಮುಕ್ತಿಯನ್ನು ಹೊಂದುತ್ತಾರೆ. ಲಿಂಗಾಂಗ ಸಾಮರಸ್ಯ ರೂಪ ಮುಕ್ತಿಯನ್ನು ಪಡೆಯುವದರಿಂದಲೂ

लिङ्गांगसामरस्याच्च शरीरे लिङ्गधारणात् ।
नियमेनैव धृत्वा ते मुक्ताः संसारबन्धनात् ॥ १३ ॥

श्वेताश्वतरोपनिषदि । सर्वाननशिरोग्रीवः सर्वभूतगुहाशयः ।
सर्वव्यापी च भगवांस्तस्मात्सर्वगतः शिवः ॥ १४ ॥

मनुस्मृतौ=सर्वकर्मविमुक्तस्य ध्यानयोगरतस्य च ।
न तस्य दहनं कार्यं न च पिंडोदकक्रिया ॥ १५ ॥
शिवध्यानरतो भूत्वा शिवलिङ्गांगसंयुतः ।
शिवेतरपरित्यागी ध्यानयोगी स उच्यते ॥ १६ ॥

बोधायनस्मृतौ=सर्वसंगनिवृत्तस्य ध्यानयोगरतस्य च ।
न तस्य दहनं कुर्यान्नाशौचं नोदकक्रियाम् ॥ १७ ॥

---

ಶರೀರದ ಮೇಲೆ ಲಿಂಗವನ್ನು ಯಾವಾಗಲೂ ಧರಿಸಿಕೊಂಡಿರುವದರಿಂದಲೂ, ಜೀವನ್ಮುಕ್ತರಾದ ಅವರು ಸಂಸಾರಬಂಧನದಿಂದ ಮುಕ್ತರಾಗುತ್ತಾರೆ. ॥ ೧೩ ॥ ಶ್ವೇತಾಶ್ವತರೋಪನಿಷತ್ತಿನಲ್ಲಿ ಸರ್ವಾನನ ಶಿರೋಗ್ರೀವ ಇತ್ಯಾದಿ ವಾಕ್ಯದಿಂದ ಎಲ್ಲ ಕಡೆಯಲ್ಲಿಯೂ ಮುಖಗಳುಳ್ಳಂಥ. ಎಲ್ಲ ಪ್ರಾಣಿಗಳ ಹೃದಯಾಕಾಶದಲ್ಲಿರುವಂತಹ ಸರ್ವವ್ಯಾಪಕನಾದಂಥಾ ಭಗವಂತನಾದ ಶಿವನು ಸರ್ವಗತನಾಗಿರುವನು ॥ ೧೪ ॥ ಮನುಸ್ಮೃತಿಯಲ್ಲಿ ಸರ್ವಕರ್ಮಗಳನ್ನು ತ್ಯಾಗ ಮಾಡಿದಂಥ, ಧ್ಯಾನದಲ್ಲಿ ತತ್ಪರನಾದಂಥ ವೀರಶೈವನಿಗೆ ದಹನ ಮಾಡಬಾರದು. ಮತ್ತು ಶ್ರಾದ್ಧ ಪಿಂಡದಾನ ಮೊದಲಾದವುಗಳನ್ನೂ ಮಾಡಬಾರದು. ॥ ೧೫ ॥ ಶಿವಧ್ಯಾನತತ್ಪರನಾಗಿ, ಶಿವ ಲಿಂಗಾಂಗ ಸಂಯೋಗವುಳ್ಳ, ಶಿವನಿಗಿಂತ ಭಿನ್ನವಾದ ದೇವತೆಯನ್ನು ತ್ಯಾಗ ಮಾಡಿದಂಥ ಆ ವೀರಶೈವನು ಧ್ಯಾನಯೋಗಿ ಎನಿಸಿಕೊಳ್ಳುವನು ॥ ೧೬ ॥ ಬೋಧಾಯನಸ್ಮೃತಿ ಸರ್ವವಿಧವಾದ ಸಂಸಾರಸಂಬಂಧದಿಂದ ನಿವೃತ್ತನಾದಂಥ.ಧ್ಯಾನ ಯೋಗದಲ್ಲಿ ಆಸಕ್ತನಾದ ವೀರಶೈವನಿಗೆ ದಹನವನ್ನು ಮಾಡಬಾರದು. ಅವನ ಮರಣ ದಿಂದ ಅಶುಚಿತ್ವವು ಬರುವದಿಲ್ಲ. ಅವನಿಗೆ ತರ್ಪಣ, ಪಿಂಡದಾನಾದಿಗಳನ್ನು ಮಾಡ ಬೇಕಾದುದು ಇಲ್ಲ. ॥ ೧೭ ॥ ಶಾತಾತಪಸ್ಮೃತಿಯಲ್ಲಿ ವಾನಪ್ರಸ್ಥನನ್ನೂ, ಯೋಗಿ

शातातपस्मृतौ । वानप्रस्थं योगिनं च लिंगैक्यं भिक्षुकं यतिम् ।
तुर्याश्रमाणां मध्ये च रसायां निक्षिपेन्मृतम् ॥ १८ ॥
पद्मपुराणे । कण्ठेषु हरकण्ठादिमुनयो मनवस्तथा ।
सर्वदा शिवलिंगं तु धारयंति यजंति च ॥ १९ ॥
शिवगीतायाम् । हास्यार्थमज्ञो भक्तांश्च भूतिरुद्राक्षधारिणः ।
लिंगिनो यश्च वा द्वेष्टि ते नैवात्राधिकारिणः ॥ २० ॥
शिवधर्मोत्तरे । ये योगिनं द्विषंत्यज्ञाः सर्वपापेष्ववस्थिताः ।
ये शिवज्ञाननिरतं प्रद्विषन्तीह योगिनम् ॥ २१ ॥
विकल्प्यन्ते महात्मानं ये मूढाः शिवयोगिनम् ।
ते यान्ति पितृभिः सार्धं नरकेषु न संशयः ॥ २२ ॥
ब्रह्माण्डपुराणे । पाणिनिश्च कणादश्च कपिलो गौतमादयः ।

---

ಯನ್ನೂ, ಲಿಂಗೈಕ್ಯನಾದವನನ್ನೂ, (ವೀರಶೈವನನ್ನೂ) ಭಿಕ್ಷುಕನನ್ನೂ, ಯತಿಯನ್ನೂ ಮತ್ತು ಸಂನ್ಯಾಸಿಯನ್ನು ಮೃತರಾದ ಇವರೆಲ್ಲರನ್ನು ಭೂಮಿಯಲ್ಲಿ ಹುಗಿಯಬೇಕು. ॥ ೧೮ ॥ ಪದ್ಮಪುರಾಣದಲ್ಲಿ ಹರಕಂಠನೇ ಮೊದಲಾದ ಮುನಿಗಳು ಮತ್ತು ಮನುಗಳು ಶಿವಲಿಂಗವನ್ನು ಕಂಠದಲ್ಲಿ ಯಾವಾಗಲೂ ಧರಿಸಿರುತ್ತಾರೆ. ಮತ್ತು ಪೂಜಿಸುತ್ತಾರೆ ಎಂದು ಹೇಳಿದೆ. ॥ ೧೯ ॥ ಶಿವಗೀತೆಯಲ್ಲಿ ಮೂಢರಾದವರು ಹಾಸ್ಯಕ್ಕಾಗಿಯಾದರೂ ಭಸ್ಮ ರುದ್ರಾಕ್ಷಿ ಇವುಗಳನ್ನು ಧರಿಸಿಕೊಂಡಂಥ ಭಕ್ತರನ್ನು ಮತ್ತು ಲಿಂಗಧಾರಿಗಳಾದ ಭಕ್ತರನ್ನು ಯಾರು ದ್ವೇಷ ಮಾಡುತ್ತಾರೋ ಅಂಥವರು ಪಾಪಿಗಳು ಮತ್ತು, ಅನಧಿಕಾರಿಗಳು ಆಗುತ್ತಾರೆ. ॥ ೨೦ ॥ ಶಿವಧರ್ಮೋತ್ತರದಲ್ಲಿ= ಯಾವ ಮೂರ್ಖರು ಶಿವಯೋಗಿಯನ್ನು ದ್ವೇಷ ಮಾಡುತ್ತಾರೋ ಅವರು ಸರ್ವವಿಧವಾದ ಪಾಪಗಳಲ್ಲಿ ಇರುವಂಥವರಾಗುತ್ತಾರೆ. ಯಾರು ಶಿವಜ್ಞಾನದಲ್ಲಿ ನಿರತನಾದಂಥ ಶಿವಯೋಗಿಯನ್ನು ದ್ವೇಷ ಮಾಡುತ್ತಾರೋ ಅವರು ಪಾಪಿಗಳು ॥ ೨೧ ॥ ಯಾವ ಮೂರ್ಖರು ಮಹಾತ್ಮನಾದಂಥ ಶಿವಯೋಗಿಯ ಬಗ್ಗೆ ಮನಸ್ಸಿನಲ್ಲಿ ವಿಕಲ್ಪ ಮಾಡಿಕೊಳ್ಳುವರೋ ಅಂಥವರು ತಮ್ಮ ತಂದೆ ತಾತ ಮೊದಲಾದವರೊಡನೆ ನರಕವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ ॥ ೨೨ ॥ ಬ್ರಹ್ಮಾಂಡ ಪುರಾಣದಲ್ಲಿ= ಪಾಣಿನಿ, ಕಣಾದ, ಕಪಿಲ, ಗೌತಮ ಮೊದಲಾದ ದೊಡ್ಡ ದೊಡ್ಡ ಋಷಿಗಳು ಶಿವಲಿಂಗದ

प्रसादसेवनाद्ध्यानादर्चनाद्धारणादपि ।
जाता दर्शनकर्तारः श्रावयंति जगत्त्रयम् ॥ २३ ॥

लैंग्ये । अक्षपादादयः सर्वे शक्तयः परया मुदा ।
धारयन्त्यलिकाग्रेषु शिवलिंगमहर्निशम् ॥ २४ ॥

स्कांदे । लिंगधारणमाख्यातं द्विधा सर्वार्थसाधकैः ।
बाह्यमाभ्यन्तरं चेति मुनिभिर्मोक्षकांक्षिभिः ॥ २५ ॥

आधारे हृदये वापि भ्रूमध्ये वा निरंतरम् ।
ज्योतिर्लिंगानुसंधानं तदेवान्तरमुच्यते ॥ २६ ॥

अन्तर्धारयितुं लिंगमशक्तः शक्त एव वा ।
बाह्यं तु धारयेल्लिंगं तद् रूपमितिनिश्चयात् ॥ २७ ॥

ब्रह्मविष्ण्वादयो देवा मुनयो गौतमादयः ।
धारयन्ति सदा लिंगमुत्तमांगे विशेषतः ॥ २८ ॥

---

ಪ್ರಸಾದ ಸೇವನದಿಂದ, ಧ್ಯಾನದಿಂದ, ಪೂಜೆಯಿಂದ ಮತ್ತು ಧಾರಣ ಮಾಡಿಕೊಳ್ಳುವದರಿಂದಲೂ ಶಾಸ್ತ್ರಕಾರರು ಆದರು. ಇವರು ಮೂರು ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ. ‖ ೨೩ ‖ ಅಕ್ಷಪಾದ ಮೊದಲಾದವರು ಎಲ್ಲಾ ಶಕ್ತಿಯರೂ ಅಧಿಕವಾದ ಆನಂದದಿಂದ ಹಗಲೂ ರಾತ್ರಿ ಶಿವಲಿಂಗವನ್ನು ಹಣೆಯ ಮೇಲೆ ಧರಿಸಿಕೊಂಡಿರುತ್ತಾರೆ ಎಂದು ಲಿಂಗಪುರಾಣದಲ್ಲಿ ಹೇಳಿದೆ. ‖ ೨೪ ‖ ಸಕಲ ವಿಧವಾದ ಪ್ರಯೋಜನವನ್ನು ಸಂಪಾದಿಸತಕ್ಕಂಥ ಮೋಕ್ಷವನ್ನು ಇಚ್ಛಿಸುತ್ತಿರುವಂಥ ಮುನಿಗಳಿಂದ ಲಿಂಗಧಾರಣವು ಬಾಹ್ಯ ಆಭ್ಯಂತರ ಎಂದು ಎರಡು ವಿಧವಾಗಿ ಹೇಳಲ್ಪಟ್ಟಿರುತ್ತದೆ. ‖ ೨೫ ‖ ಆಧಾರದಲ್ಲಿ ಹೃದಯದಲ್ಲಿ ಅಥವಾ ಭ್ರೂಮಧ್ಯದಲ್ಲಿ ಯಾವಾಗಲೂ ಇರುವಂಥ ಜ್ಯೋತಿರ್ಲಿಂಗದ ಅನುಸಂಧಾನವೇ ಅಂತರಂಗದ ಲಿಂಗಧಾರಣವೆಂದು ಹೇಳಲ್ಪಡುತ್ತದೆ. ‖ ೨೬ ‖. ಅಂತರಂಗದಲ್ಲಿ ಲಿಂಗವನ್ನು ಧರಿಸಲಿಕ್ಕೆ ಸಮರ್ಥನಾಗಿರಲಿ ಅಥವಾ ಸಮರ್ಥನಾಗದೇ ಇರಲಿ ಬಹಿರಂಗದಲ್ಲಿ ಮಾತ್ರ ಅಂತರಂಗಲಿಂಗವೇ ಈ ಬಾಹ್ಯಲಿಂಗವೆಂದು ತಿಳಿದು ಶರೀರದ ಮೇಲೆ ಇಷ್ಟಲಿಂಗವನ್ನು ಧರಿಸತಕ್ಕದ್ದು. ‖ ೨೭ ‖ ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳು ಗೌತಮನೇ ಮೊದಲಾದ ಋಷಿಗಳು ಯಾವಾಗಲೂ ಲಿಂಗವನ್ನು ವಿಶೇಷವಾಗಿ ಮಸ್ತಕದಲ್ಲಿ ಧರಿಸಿರುತ್ತಾರೆ ಎಂದು ಸ್ಕಾಂದ ಪುರಾಣದಲ್ಲಿ ಹೇಳಿರುವದು. ‖ ೨೮ ‖ ವಾತುಲಾಗಮದಲ್ಲಿ ಲಿಂಗಾಂಗ ಸಂಬಂಧವನ್ನು ಮಾಡಿ

वातुलागमे । लिंगांगसंगं कुर्वन्तं दृष्ट्वा द्विजवरं रविः ।
स्थानाच्चलत्ययं भित्वा मंडलं मे व्रजेच्छिवम् ॥ २९ ॥
तेषां संरक्षणं यस्तु कुरुते मनुजोत्तमः ।
स धन्यः स कृतार्थः स्यात्स शिवैक्यपदं व्रजेत् ॥ ३० ॥
तस्मात्सर्वं परित्यज्य सर्वभावेन सर्वदा ।
पूजयेदादरेणैव द्विजं लिंगांगसंगिनम् ॥ ३१ ॥
यः पूजयति लिंगांगध्यानासक्तधियं द्विजम् ।
पुनर्भवो न तस्यास्ति सत्यं सत्यं मयोदितम् ॥ ३२ ॥
इत्यादिवचनप्रामाण्याल्लिंगधारणरूपधर्मस्य सिद्धत्वं, तदनुष्ठानवतांब्राह्मण्यं च सिद्धम् ।
क्रियासारे एकोनविंशोपदेशे लिंगलक्षणम् । पञ्चसूत्रविवरणम् ।
धारणार्हस्य लिङ्गस्य लक्षणंत्वथ कथ्यते ।
स्फाटिकं शैलजं वापि चंद्रकान्तमयं तु वा ॥ ३३ ॥

---

ಕೊಳ್ಳುವಂಥ ಶ್ರೇಷ್ಠನಾದ ದ್ವಿಜ (ಗುರುಕರಜಾತ)ನನ್ನು ನೋಡಿ ಸೂರ್ಯನು ಈ ಲಿಂಗಾಂಗಿಯು ನನ್ನ ಮಂಡಲವನ್ನು ಭೇದಿಸಿ ಶಿವನನ್ನು ಹೊಂದಬಹುದು. ಎಂಬ ಹೆದರಿಕೆಯಿಂದ ತನ್ನ ಸ್ಥಾನವನ್ನು ಬಿಟ್ಟು ಚಲಿಸುವನು. ॥ ೨೯ ॥ ಶ್ರೇಷ್ಠನಾದ ಯಾವ ಮನುಷ್ಯನು ಈ ಲಿಂಗಾಂಗಿಗಳ ಸಂರಕ್ಷಣವನ್ನು ಮಾಡುತ್ತಾನೋ ಅವನು ಧನ್ಯನು. ಅವನು ಕೃತಾರ್ಥನು. ಅವನು ಶಿವಸಾಯುಜ್ಯವನ್ನು ಹೊಂದುವನು. ॥೩೦॥ ಆದಕಾರಣ ಸರ್ವವನ್ನೂ ತ್ಯಾಗಮಾಡಿ ಯಾವಾಗಲೂ ಸರ್ವಭಾವದಿಂದ ಲಿಂಗಾಂಗ ಸಂಗಿಯಾದ ಗುರುಕರಜಾತನನ್ನು ಅಧಿಕವಾದ ಆದರದಿಂದ ಪೂಜಿಸತಕ್ಕದ್ದು. ॥೩೧॥ ಯಾವನು ಲಿಂಗಾಂಗಗಳ ಧ್ಯಾನ ಮಾಡುವದರಲ್ಲಿ ಆಸಕ್ತವಾದ ಬುದ್ಧಿಯುಳ್ಳ ದ್ವಿಜನನ್ನು ಪೂಜಿಸುತ್ತಾನೆಯೋ ಅವನಿಗೆ ಪುನರ್ಜನ್ಮವು ಇಲ್ಲವೇ ಇಲ್ಲ. ಇದು ನಿಜವಾದ ಮಾತು. ॥ ೩೨ ॥ ಇವೇ ಮೊದಲಾದ ಪ್ರಮಾಣ ವಾಕ್ಯಗಳಿಂದ ಲಿಂಗ ಧಾರಣ ರೂಪ ಧರ್ಮದ ಸಿದ್ಧತೆಯು. ಈ ಧರ್ಮವನ್ನು ಅನುಸರಿಸುವವರಿಗೆ ಬ್ರಾಹ್ಮಣ್ಯವು ಸ್ವತಃ ಸಿದ್ಧವಾಗಿರುತ್ತದೆ. ಕ್ರಿಯಾಸಾರದಲ್ಲಿ ೧೯ನೇ ಅಧ್ಯಾಯದಲ್ಲಿ ಲಿಂಗ ಲಕ್ಷಣವು ಪಂಚಸೂತ್ರಗಳ ವಿವರಣೆಯೂ ಧರಿಸಲಿಕ್ಕೆ ಯೋಗ್ಯವಾದ ಲಿಂಗದ ಲಕ್ಷಣವು ಹೇಳಲ್ಪಡುತ್ತದೆ. ಸ್ಫಟಿಕದಿಂದ ತಯಾರ ಮಾಡಲ್ಪಟ್ಟ ॥ ೩೩ ॥ ಅಥವಾ

वाणं वा सूर्यकान्तं वा लिङ्गमेकं समाहरेत् ।
नादेयं शैलसंभूतं पुण्यक्षेत्रसमुद्भवम् ॥ ३४ ॥
गङ्गोद्भवं सागरजं लिङ्गं तन्मम संमतम् ।
यद्देवि शिवनामाख्यं लिङ्गं तदहमेव हि ॥ ३५ ॥
काम्यान्यन्यानि लिङ्गानि तत्तदिष्टार्थदानि हि ।
श्रीशैलजं महादेवि ऐहिकामुष्मिकप्रदम् ॥ ३६ ॥
सर्वोत्तमोत्तमं लिगं सर्वाभीष्टफलप्रदम् ।
यद्दत्तं गुरुणा देवि लिङ्गं तदहमेव हि ॥ ३७ ॥
श्वेतं रक्तं तथा पीतं कृष्णं चेति चतुर्विधम् ।
विप्रादीनां च वर्णानामिदं धार्यं यथाक्रमम् ॥ ३८ ॥

---

ಚಂದ್ರಕಾಂತ ಶಿಲೆಯಿಂದ ಸೂರ್ಯಕಾಂತ ಕಲ್ಲಿನಿಂದ ತಯಾರಾದ ಲಿಂಗವನ್ನು ಅಥವಾ ಬಾಣವೊಂದೇ ಸೂರ್ಯಕಾಂತ ಕಲ್ಲಿನಿಂದ ಮಾಡಿದ ಲಿಂಗವನ್ನು ಸಂಗ್ರಹಿಸ ತಕ್ಕದ್ದು. ಶ್ರೀಶೈಲ ಗುಡ್ಡದಲ್ಲಿ ನರ್ಮದಾ ನದಿಯಲ್ಲಿ ಪುಣ್ಯ ಕ್ಷೇತ್ರಗಳಲ್ಲಿ ಉತ್ಪನ್ನ ವಾದುದನ್ನು ॥ ೩೪ ॥ ಗಂಗಾನದಿಯಲ್ಲಿ, ಸಮುದ್ರದಲ್ಲಿ ದೊರೆತುದನ್ನು ಧರಿಸು ವದು ನನಗೆ ಇಷ್ಟವಾದದ್ದು. ಎಲೈ ಪಾರ್ವತಿಯೇ ಯಾವ ಲಿಂಗವು ಶಿವನ ಹೆಸರಿನಿಂದ ಕೂಡಿರುವದೋ ಆ ಲಿಂಗವೇ ನಾನು. (ಶಿವನು) ॥ ೩೫ ॥ ಆಯಾಯ ಇಷ್ಟಫಲವನ್ನು ಕೊಡತಕ್ಕಂಥ ಬೇರೆ ಬೇರೆ ಲಿಂಗಗಳು ಕಾಮ್ಯಲಿಂಗಗಳೆನಿಸಿಕೊಳ್ಳುತ್ತವೆ. ಎಲೈ ದೇವಿಯೇ ಶ್ರೀಶೈಲ ಪರ್ವತದಲ್ಲಿ ತಯಾರಾದ ಲಿಂಗವು ಇಹಲೋಕದ ಮತ್ತು ಪರಲೋಕದ ಸುಖವನ್ನು ಕೊಡುವಂಥಾದ್ದು ॥ ೩೬ ॥ ಎಲೈ ದೇವಿಯೇ ಗುರುವಿ ನಿಂದ ಕೊಡಲ್ಪಟ್ಟ ಲಿಂಗವು ಸರ್ವಶ್ರೇಷ್ಠವಾದದ್ದು. ಸರ್ವಫಲವನ್ನು ಕೊಡು ವಂಥಾದ್ದು ಇರುತ್ತದೆ. ಆ ಲಿಂಗವೇ ನಾನು. ಇದರಲ್ಲಿ ಸಂಶಯವಿಲ್ಲ. ॥ ೩೭ ॥ ಬ್ರಾಹ್ಮಣನು ಬಿಳೀ ವರ್ಣದ, ಕ್ಷತ್ರಿಯನು ಕೆಂಪು ವರ್ಣದ, ವೈಶ್ಯನು ಹಳದೀ ವರ್ಣದ, ಶೂದ್ರನು ಕಪ್ಪು ವರ್ಣದ ಹೀಗೆ ನಾಲ್ವರು ನಾಲ್ಕು ವರ್ಣದ ಲಿಂಗಗಳನ್ನು ಧರಿಸಬೇಕು. ॥ ೩೮ ॥ ಲಿಂಗದ ಪಂಚಸೂತ್ರದ ಅಳತೆ ೧) ಬಾಣದ ಸುತ್ತಳತೆ

लिङ्गवृत्तसमं पीठं दैर्घ्यं विस्तार एव च ।
तदर्धं गोमुखं चैव प्रोक्तं लिङ्गस्य लक्षणम् ॥ ३९ ॥
स पीठस्य तु लिङ्गस्य लक्षणं तु तदुच्यते ।
एकादित्र्यन्तमंगुल्याश्चरलिङ्गस्य दैर्घ्यकम् ॥ ४० ॥
लिङ्गस्य सदृशं पीठं पीठार्धं गोमुखं भवेत् ।
लिंगदैर्घ्यं चतुर्भागं द्विभागं शक्तिसंयुतम् ॥ ४१ ॥
द्विभागं च चतुर्भागमेकभागस्य बन्धकम् ।
अंगुलं तु त्रिधा भज्य तन्मानं वा समाचरेत् ॥ ४२ ॥
लिंगमस्तकविस्तारं लिङ्गोच्छ्रयसमन्वितम् ।
वेदभागवशान्मानं विस्तारं मस्तकस्य तु ॥ ४३ ॥
त्रिभागं परिणाहस्य तद्वत्पीठे च विस्तृतिः ।
एकं नाहं त्रिधा भज्य भागेनैकेन हीनकः ॥ ४४ ॥

---

೨) ಆ ಸುತ್ತಳತೆಯಷ್ಟು ಪೀಠದ ಅಳತೆ, ೩) ಸುತ್ತಳತೆಯಷ್ಟು ಎತ್ತರ, ೪) ಸುತ್ತಳತೆಯಷ್ಟು ಅಗಲ, ೫) ಸುತ್ತಳತೆಯ ಅರ್ಧದಷ್ಟು ಗೋಮುಖ ಹೀಗೆ ಲಿಂಗದ ಪಂಚಸೂತ್ರದ ಅಳತೆಯು ಹೇಳಲ್ಪಟ್ಟದೆ. ॥ ೩೯ ॥ ಪೀಠದಿಂದ ಸಹಿತವಾದ ಲಿಂಗದ ಲಕ್ಷಣವು ಈಗ ಹೇಳಲ್ಪಡುತ್ತದೆ. ಜಂಗಮನ ಒಂದು ಎರಡು ಅಥವಾ ಮೂರು ಬೆರಳುಗಳ ಎತ್ತರವು ಎಷ್ಟಾಗುತ್ತದೆಯೋ ಅಷ್ಟು ಇಷ್ಟಲಿಂಗದ ಎತ್ತರವಿರಬೇಕು. ॥ ೪೦ ॥ ಬಾಣದ ಸುತ್ತಳತೆಯಷ್ಟು ಕೆಳಗಿನ ಪೀಠವಿರಬೇಕು. ಆ ಪೀಠದ ಅರ್ಧದಷ್ಟು ಗೋಮುಖವಿರಬೇಕು. ಬಾಣದ ಸುತ್ತಳತೆಯ ನಾಲ್ಕರಲ್ಲೊಂದು ಭಾಗ ಬಾಣದ ಎತ್ತರವಿರಬೇಕು. ಎರಡು ಭಾಗ ಬಾಣದ ತಗ್ಗಿರಬೇಕು. ॥ ೪೧ ॥ ಆ ತಗ್ಗಿನ ಅಳತೆಯು ನಾಲ್ಕರಲ್ಲೊಂದು ಭಾಗ ಬಂಧಕವಿರಬೇಕು. ಉಳಿದ ಮೂರು ಭಾಗ ಹೊರಗೆ ಕಾಣಬೇಕು. ॥ ೪೨ ॥ ಬಾಣದ ಮೇಲಿನ ವಿಸ್ತಾರವು ಬಾಣದ ಎತ್ತರಕ್ಕೆ ಸಮಾನವಿರಬೇಕು. ಪೀಠದಿಂದಸಹಿತವಾದ ಲಿಂಗದ ಅಳತೆಯ ನಾಲ್ಕರಲ್ಲೊದು ಭಾಗದಷ್ಟು ಮಸ್ತಕದ ಅಗಲವಿರಬೇಕು. ॥ ೪೩ ॥ ಇದರಂತೆ ಪೀಠದಲ್ಲಿಯೂ ವಿಸ್ತಾರವಿರಬೇಕು. ಪೀಠಸಹಿತವಾದ ಲಿಂಗದ ಅಳತೆಯ ನಾಲ್ಕು ಭಾಗದಲ್ಲಿ ಒಂದು ಭಾಗ ಬಾಣದ ಎತ್ತರವು ಮೂರು ಭಾಗ ಪೀಠದ ಅಳತೆಯು ಇರಬೇಕು. ಲಿಂಗದ ಅಗಲದ ಅಳತೆಯನ್ನು ಮೂರು ಭಾಗ ಮಾಡಿ ಒಂದು ಭಾಗ ಅಥವಾ ಎರಡು ಭಾಗ ಅಗಲವಿರಬೇಕು. ॥ ೪೪ ॥ ಮೇಲಿನ ಬಾಣದ ಅಳತೆಯು ಹೆಚ್ಚಾದರೆ ಮೃತ್ಯುಪ್ರದವು,

नाहमेकं प्रकर्तव्यं द्विनाहं वा समाचरेत् ।
लिङ्गाधिक्ये भवेन्मृत्युः शक्त्याधिक्ये धनक्षयः ।
लिङ्गशक्त्योः समत्वं हि भोगमोक्षफलप्रदम् ॥ ४५ ॥

इति लिंगलक्षणं पञ्चसूत्रं च ।

॥ अथाष्टबन्धः ॥

लाक्षा सर्जरसः सिक्थं कुरुविंदं च गुग्गुलम् ।
गैरिकं गुडतैले च त्वष्टबन्धमिति स्मृतम् ।
अनेन च दृढीकुर्याल्लिंगं पीठे सुसंस्थितम् ॥ ४६ ॥

इत्यष्टबन्धः ।

॥ शिल्पिदोषनिवारणम् ॥

वीरशैवाचारदीपिकायाम् ।

शिल्पिदोषनिवृत्यर्थं लिंगं स्थाप्यं हृदे तथा ।
प्रसादेन तु गृण्हीयाद्दक्षहस्तेन देशिकः ॥ ४७ ॥

---

ತಗ್ಗು ಹೆಚ್ಚಾದರೆ ಧನನಷ್ಟ, ಬಾಣ ಮತ್ತು ತಗ್ಗು ಇವೆರಡು ಸಮಾನವಾಗಿದ್ದರೆ ಭೋಗ ಮೋಕ್ಷ ಪ್ರದವು. ಇಲ್ಲಿಗೆ ಲಿಂಗಲಕ್ಷಣ, ಪಂಚಸೂತ್ರಗಳ ಅಳತೆಯೂ ಮುಗಿದುದು. ॥ ೪೫ ॥

ಅಷ್ಟಬಂಧ:- ಲಾಕ್ಷಾ (ಅರಗು) ಸರ್ಜರಸ (ಧೂಪ) ಶಿಕ್ಥ (ಜೇನಮೇಣ) ಕುರುವಿಂದ (ಭದ್ರಮುಸ್ತೆ) ಗುಗ್ಗಳ, ಗೈರಿಕ (ಕಾವಿ) ಬೆಲ್ಲ, ಎಣ್ಣೆ ಇವು ಎಂಟಕ್ಕೆ ಅಷ್ಟಬಂಧವೆನ್ನುತ್ತಾರೆ. ಇವನ್ನು ಚೆನ್ನಾಗಿ ಅರೆದು ಇದರಿಂದ ಬಾಣವನ್ನು ಪೀಠದಲ್ಲಿ ಗಟ್ಟಿಯಾಗಿ ಕೂಡ್ರಿಸಬೇಕು. ॥ ೪೬ ॥

— ಶಿಲ್ಪಿದೋಷ ನಿವಾರಣೆ —

ವೀರಶೈವಾಚಾರ ಪ್ರದೀಪಿಕೆಯಲ್ಲಿ ಶಿಲ್ಪಿದೋಷ ನಿವೃತ್ತಿಗಾಗಿ ಗುರುವು ಲಿಂಗವನ್ನು ಹೃದಯದಲ್ಲಿ ಇಟ್ಟುಕೊಂಡು ಆ ಮೇಲೆ ಪ್ರಸಾದ ಮಂತ್ರದಿಂದ ಅದನ್ನು ಬಲಗೈಯಿಂದ ಗ್ರಹಿಸಬೇಕು. ॥ ೪೭ ॥ ಅತ್ತಮನಾದ ಗುರುವು ತನ್ನ ಹಸ್ತಪೀಠದಲ್ಲಿ

स्वहस्तपीठे तल्लिंगमादाय परमो गुरुः । अनन्तरं शिल्पिदोषनिवृत्त्यर्थं । नमो वःकिरिकेभ्यो देवानाँ हृदयेभ्यो नमोविक्षीणकेभ्यो देवानाँ हृदयेभ्यो नमो विचिन्वत्केभ्यो देवानाँ हृदयेभ्यो नम आनिर्हतेभ्यो देवानाँ हृदयेभ्यो नम आमीवत्केभ्योदेवानाँ हृदयेभ्यः । अनेन हृदयमन्त्रेण लिङ्ग शुद्धस्थले संस्थाप्य । ॐ न्हां न्हीं न्हूं न्हैं न्हौं न्हः नमः शिवाय । अनेन पञ्चाक्षरीमन्त्रेण देशिको दक्षिणहस्तेन लिंगं गृहीत्वा स्ववामहस्तपीठे संस्थाप्य ।

तल्लिंगं क्षालयेत्तोयैरजन्यामलकादिभिः।
पञ्चगव्येन संस्नाप्य विल्वपत्रेण घर्षयेत् ॥ ४८ ॥
पञ्चामृतेन संस्नाप्य गन्धोदैर्नारिकेलकैः ।
गन्धपुष्पादिभिश्चैव नैवेद्यान्तं समर्चयेत् ॥ ४९ ॥

वातुलतन्त्रे । गृहस्येशानदिग्भागे स्थंडिलं तु प्रकल्पयेत् ।
नवहस्तप्रमाणेन वस्त्रं कुर्याद्विचक्षणः ॥ ५० ॥

---

ಆ ಲಿಂಗವನ್ನು ಇಟ್ಟುಕೊಂಡು ಶಿಲ್ಪಿದೋಷನಿವೃತಿಗಾಗಿ ನಮೋ ವಃ ಕಿರಿಕೇಭ್ಯ.... ಇತ್ಯಾದಿ ಹೃದಯ ಮಂತ್ರದಿಂದ ಲಿಂಗವನ್ನು ಶುದ್ಧಸ್ಥಲದಲ್ಲಿ ಸ್ಥಾಪಿಸಿ ಓಂ ಹ್ರಾಂ ಇತ್ಯಾದಿ ಈ ಪಂಚಾಕ್ಷರೀ ಮಂತ್ರದಿಂದ ದೇಶಿಕನು ಬಲಗೈಯಿಂದ ಲಿಂಗವನ್ನು ಹಿಡಿದು ತನ್ನ ಎಡಗೈಯಲ್ಲಿ ಇಟ್ಟುಕೊಂಡು ಅರಿಷಿಣ, ನೆಲ್ಲಿಚಟ್ಟು ಮೊದಲಾದವುಗಳಿಂದ ಕೂಡಿದ ನೀರಿನಿಂದ ತೊಳೆಯಬೇಕು. ಆ ಮೇಲೆ ಪಂಚಗವ್ಯದಿಂದ ತೊಳೆದು ಬಿಲ್ವ ಪತ್ರಿಯಿಂದ ಘರ್ಷಣ ಮಾಡಬೇಕು. (ತಿಕ್ಕಬೇಕು) ॥ ೪೮ ॥ ಪಂಚಾಮೃತದಿಂದ ಅಭಿಷೇಕ ಮಾಡಿ ಮತ್ತು ಗಂಧೋದಕ, ನಾರಿಕೇಲೋದಕ ಮೊದಲಾದವುಗಳಿಂದ ಸ್ನಾನ ಮಾಡಿಸಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯದ ವರೆಗೂ ಪೂಜಿಸಬೇಕು. ॥ ೪೯ ॥ ವಾತುಲಾಗಮದಲ್ಲಿ ಮನೆಯ ಈಶಾನ್ಯ ಮೂಲೆಯಲ್ಲಿ ಒಂದು ಸ್ಥಾನವನ್ನು ಸಮ್ಮಾರ್ಜನೆ ರಂಗವಲ್ಲಿಗಳಿಂದ ತಯಾರ ಮಾಡಿ, ಒಂಭತ್ತು ಮೊಳದ ಹೊಸ ಅರಿವೆಯನ್ನು ಚತುರನಾದವೈದಿಕನು ತಯಾರ ಮಾಡಿಕೊಂಡು ॥ ೫೦ ॥

तत्रैव नवधान्यानां स्थण्डिलं तु समाचरेत् ।
पञ्चाढ़कप्रमाणेन स्थण्डिलं तु पृथक् पृथक् ॥ ५१ ॥
श्यामाकश्च प्रियंगुश्च मुद्ग गोधूम व्रीहिकम् ।
यवैश्चं माष चणकैस्तिलैश्चैव क्रमेण तु ॥ ५२ ॥
उपर्युपरि संस्थाप्य तद्वस्त्रोपरि विन्यसेत् ।
लिखेदष्टदलं पद्मं मध्यकर्णिकया सह ॥ ५३ ॥
धान्योपरि न्यसेल्लिंगं यामे धान्याधिवासनम् ।
नववस्त्रेण संवेष्टय गन्धपुष्पाक्षतादिभिः ॥ ५४ ॥
नैवेद्यं दापयेद्धीमान् तांबूलं दापयेत्ततः ।
जलाधिवासं यामं वा तदर्धं स्थण्डिलं चरेत् ॥ ५५ ॥
व्रीहिपञ्चाढकं न्यस्य तण्डुलं तु तदर्धकम् ।
तदर्धन्तु तिलं न्यस्य पद्ममष्टदलं लिखेत् ॥ ५६ ॥

---

ಆ ವಸ್ತ್ರದಲ್ಲಿಯೇ ನವಧಾನ್ಯಗಳ ಮಂಡಲವನ್ನು ರಚಿಸಬೇಕು. ಒಂದೊಂದು ಧಾನ್ಯವನ್ನು ಪ್ರತ್ಯೇಕವಾಗಿ ೫ ಕೊಳವಿಯಂತೆ ಹಾಕಬೇಕು. ॥ ೫೧ ॥ ಆ ಒಂಭತ್ತು ಧಾನ್ಯಗಳು ಯಾವವೆಂದರೆ– ಸಾವಿ, ನವಣೆ, (ರಾಗಿ,) ಹೆಸರು, ಗೋಧಿ. ಭತ್ತ, ಜವಿ, ಉದ್ದು ಕಡಲೆ. ಎಳ್ಳು ॥ ೫೨ ॥ ಇವುಗಳನ್ನು ಒಂದರ ಮೇಲೊಂದರಂತೆ ವಸ್ತ್ರದ ಪದರಿನಲ್ಲಿ ಹಾಕಬೇಕು. ಅವುಗಳಲ್ಲಿ ಅಷ್ಟದಳ ಕಮಲವನ್ನು ಮಧ್ಯಕರ್ಣಿಕಾ ಸಹಿತ ಬರೆಯಬೇಕು. ॥ ೫೩ ॥ ಆ ಧಾನ್ಯದ ಮೇಲೆ ಲಿಂಗಮೂರ್ತಿಯನ್ನು ಮೂರು ತಾಸಿನ ವರೆಗೂ ಇಟ್ಟು, ಧಾನ್ಯಾಧಿ ವಾಸವನ್ನು ಮಾಡಬೇಕು. ಅನಂತರ ಹೊಸ ವಸ್ತ್ರದಲ್ಲಿ ಸುತ್ತಿ ಗಂಧಾದಿಗಳಿಂದ ಪೂಜಿಸಿ ॥ ೫೪ ॥ ನೈವೇದ್ಯ ತಾಂಬೂಲವನ್ನು ಕೊಟ್ಟು ಮೂರು ತಾಸು ಅಥವಾ ಒಂದೂವರೆ ತಾಸಿನ ವರೆಗೆ ಜಲಾಧಿ ವಾಸವನ್ನು ಮಾಡಬೇಕು. ॥ ೫೫ ॥ ಆ ಮೇಲೆ ಮತ್ತೊಂದು ಕಡೆಯಲ್ಲಿ ೫ ಕೊಳವಿ ಭತ್ತವನ್ನು ಹರಡಿ ಅದರ ಮೇಲೆ ೨½ ಕೊಳಿವಿ ಅಕ್ಕಿ, ೧¼ ಕೊಳಿವಿ ಎಳ್ಳು, ಹಾಕಿ ಅಷ್ಟದಳದ ಕಮಲವನ್ನು ಬರೆಯಬೇಕು. ॥ ೫೬ ॥ ಅದರ ಮೇಲೆ ಒಂದು ಕಲಶವನ್ನು ಸ್ಥಾಪಿಸಿ ಅದನ್ನು ಹಣ್ಣು, ಚಿಗುರೆಲೆ ಮೊದಲಾದವುಗಳಿಂದ ಅಲಂಕರಿಸಿ ಗಂಧೋದಕವನ್ನು ತುಂಬಿ ಅದರಲ್ಲಿ ಭಂಗಾರದ ಹೂವನ್ನು ಹಾಕಬೇಕು. ॥ ೫೭ ॥ ಗಂಧಪುಷ್ಪಾದಿಗಳಿಂದ

एकं तु कलशं न्यस्य फलपल्लवसंयुतम् ।
गन्धोदकं समापूर्य सुवर्णं तत्र निक्षिपेत् ॥ ५७ ॥
गन्धपुष्पादिभिश्चैव पूजयेत्तद्यथाविधि ।
मम पञ्चाक्षरीमन्त्रं कुम्भं स्पृष्ट्वाजपेद्गुरुः ॥ ५८ ॥
कांस्यपात्रे विनिक्षिप्य जलधाराभिषेचयेत् ।
यामं वापि तदर्धं वा कारयेद्विधिपूर्वकम् ॥ ५९ ॥
पूजितं कलशं चैकं लिंगमूर्ध्न्यभिषेचयेत् ।
पञ्चामृतेन संस्नाप्य ह्युदकेनाभिषेचयेत् ॥ ६० ॥
गन्धपुष्पादिनाभ्यर्च्य नैवेद्यं दापयेत्ततः ।
शयनं कल्पयेत्तस्मिन् तदर्थं गुरुसत्तमः ॥ ६१ ॥
वेद्यधः स्थण्डिलं कुर्याद्व्रीहिपञ्चाढकं ततः ।
तदर्धं तण्डुलं न्यस्य तदर्धं तु तिलं न्यसेत् ॥ ६२ ॥

---

ಆ ಕಲಶವನ್ನು ಯಥಾವಿಧಿ ಪೂಜಿಸಬೇಕು. ಆ ಮೇಲೆ ಗುರುವು ಆ ಕಲಶವನ್ನು ಹಿಡಿದುಕೊಂಡು ಪಂಚಾಕ್ಷರೀ ಮಂತ್ರದ ಜಪವನ್ನು ಮಾಡಬೇಕು. ॥ ೫೮ ॥ ಆ ಮೇಲೆ ಕಂಚಿನ ಪಾತ್ರೆಯಲ್ಲಿ ಆ ಲಿಂಗವನ್ನಿಟ್ಟು ನೀರಿನಿಂದ ಧಾರಾರೂಪವಾಗಿ ಅಭಿಷೇಕ ಮಾಡಬೇಕು. ಒಂದು ಪ್ರಹರ ಅಥವಾ ಅರ್ಧ ಪ್ರಹರದ ವರೆಗೂ ವಿಧಾನೋಕ್ತವಾಗಿ ಅಭಿಷೇಕ ಮಾಡಬೇಕು. ಆ ಪೂಜಿಸಲ್ಪಟ್ಟ ಕಲಶೋದಕದಿಂದ ಲಿಂಗಕ್ಕೆ ಅಭಿಷೇಕ ಮಾಡಬೇಕು. ಆ ಮೇಲೆ ಪಂಚಾಮೃತದಿಂದ ಹಾಗು ಶುದ್ಧೋದಕದಿಂದ ಅಭಿಷೇಕ ಮಾಡಿ ಗಂಧ ಪುಷ್ಪಾದಿ ನೈವೇದ್ಯದ ವರೆಗೂ ಪೂಜಿಸಬೇಕು. ಆ ಮೇಲೆ ಆ ಶ್ರೇಷ್ಠನಾದ ಗುರುವು ಶಯನಾಧಿವಾಸವನ್ನು ಮಾಡಿಸಬೇಕು. ॥ ೫೯–೬೧ ॥

ಆ ಮೇಲೆ ವೇದಿಕೆಯ ಕೆಳಗೆ ೫ ಕೊಳಗ ಭತ್ತದಿಂದ ಒಂದು ಮಂಡಲವನ್ನು ರಚಿಸಬೇಕು. ಆ ಭತ್ತದ ಮೇಲೆ ೨½ ಕೊಳಗ ಅಕ್ಕಿ ೧¼ ಕೊಳಗ ಎಳ್ಳು ಇವುಗಳನ್ನು ಹಾಕಬೇಕು. ॥ ೬೨ ॥ ಅದರ ಮಧ್ಯದಲ್ಲಿ ಅಷ್ಟದಳ ಕಮಲವನ್ನು ಕರ್ಣಿಕಾ ಸಹಿತ

तन्मध्ये पद्ममालिख्य साष्टपद्मं सकर्णिकम् ।
तन्मध्ये विन्यसेत्कुम्भं सहिरण्यं सवस्त्रकं ।
नारिकेलसमायुक्तं पल्लवैरुपशोभितम् ॥ ६३ ॥
तस्यैव पूर्वदिग्भागे लिंगं तु स्थापयेत्सुधीः ।
रक्तवस्त्रेण संवेष्टच गन्धपुष्पादिनार्चयेत् ॥ ६४ ॥
आचार्यो मनसा ध्यात्वा शयनं कल्पयेच्छिवे ।
कुम्भे हस्तं निधायाशु पञ्चाक्षरमनुं स्मरेत् ॥ ६५ ॥
सहस्रं वा तदर्धं वा शतमष्टोत्तरं तु वा ।
कृतांजलिपुटो भूत्वा नमस्कृत्य महेश्वरम् ॥ ६६ ॥
शयनमन्त्रः । नमस्ते परमेशाय नमस्ते पार्वतीपते ।
नमः कैलासवासाय नमः संसारतारिणे ।
एवं स्तुत्वा महेशानं शयनं क्रियतां प्रभो ॥ ६७ ॥
अनेन मन्त्रेन शयनं कारयेत् । स्वयम्भुवागमे ।

---

ವಾಗಿ ಬರೆದು ಅದರ ಮಧ್ಯದಲ್ಲಿ ಕೊಡವನ್ನು ಇಟ್ಟು, ಅದರಲ್ಲಿ ಭಂಗಾರದ ಚೂರನ್ನು ಹಾಕಿ ಪಂಚಪಲ್ಲವ, ತೆಂಗಿನಕಾಯಿಗಳಿಂದ ಶೋಭಿಸುವಂತೆ ಮಾಡಿ ಆ ಕೊಡಕ್ಕೆ ಒಂದು ವಸ್ತ್ರವನ್ನು (ಖಣವನ್ನು) ಹಾಕಬೇಕು. ‖ ೬೩ ‖ ಆ ಕೊಡದ ಮುಂಭಾಗ ದಲ್ಲಿ ಲಿಂಗವನ್ನು ಸ್ಥಾಪಿಸಿ ಕೆಂಪು ವಸ್ತ್ರದಿಂದ ಸುತ್ತಿ ಗಂಧಪುಷ್ಪಾದಿಗಳಿಂದ ಪೂಜಿಸ ಬೇಕು. ‖ ೬೪ ‖ ಆಚಾರ್ಯನು ಮನಸ್ಸಿನಿಂದ ಧ್ಯಾನಮಾಡಿ ಶಯನವನ್ನು ಮಾಡಿಸಬೇಕು. ಆ ಕೊಡದ ಮೇಲೆ ಕೈಯನ್ನಿಟ್ಟು ಪಂಚಾಕ್ಷರ ಮಂತ್ರವನ್ನು ‖೬೫‖ ಒಂದು ಸಾವಿರ ಅಥವಾ ಅದರ ಅರ್ಧ ಅಥವಾ ೧೦೮ ಸಾರೆ ಜಪಿಸಬೇಕು. ಆ ಮೇಲೆ ಕೈ ಜೋಡಿಸಿಕೊಂಡು ಶಿವನಿಗೆ ನಮಸ್ಕಾರ ಮಾಡಿ ‖ ೬೬ ‖ ಶಯನ ಮಂತ್ರ ನಮಸ್ತೆ ಇತ್ಯಾದಿ ಹೀಗೆ ಸ್ತೋತ್ರ ಮಾಡಿ ಎಲೈ ಪ್ರಭುವೆ ಮಲಗಬೇಕು ಎಂದು ಸ್ತೋತ್ರ ಮಾಡಬೇಕು. ಈ ಮಂತ್ರದಿಂದ ಶಯನವನ್ನು ಮಾಡಿಸಬೇಕು. ‖ ೬೭ ‖ ಸ್ವಯಂಭೂ ಆಗಮದಲ್ಲಿ ಅರ್ಧೋದಯದಲ್ಲಿ ಅಂದರೆ ಗರ್ಭಧಾರಣವಾದ ಎಂಟನೇ

अर्धोदयेऽथवा तस्य पतने चैव देशिकः ।
पूर्वं संस्कारितं लिंगं शिशोः कण्ठे च धारयेत् ॥ ६८ ॥
वीरशैवाचारकौस्तुभे । अत्र मूलसिद्धान्तशेखरे शिवागमे ज्ञेयम् ।
अधिवासं ततः कुर्यादाचार्यो यजमानकैः ।
तल्लिंगं च समादाय सर्ववाद्यरवैः सह ॥ ६९ ॥
स्वस्तिसूक्तैर्वेदमन्त्रैर्देशिको गृहकर्तृतः
शुद्धिं कृत्वा तु तल्लिंगं क्षालनाद्यैर्यथाक्रमम् ॥ ७० ॥
विन्यसेद्वारुणे भागे स्थण्डिलोपरि देशिकः ।
जलाधिवासं कृत्वाथ पूर्वोक्तेन विधानतः ॥ ७१ ॥
तल्लिंगं च समादाय मूलमन्त्रैर्गुरूत्तमः ।
उद्वर्त्यामलकीचूर्णैं रुद्रसूक्तैरतः परम् ॥ ७२ ॥
सिंचेत्तन्नवभिः कुम्भैर्वारुणस्य च मन्त्रकैः ।

---

ತಿಂಗಳಲ್ಲಿ ಅಥವಾ ಜನನವಾದ ಕೂಡಲೇ ಗುರುವು ಪೂರ್ವದಲ್ಲಿ ಸಂಸ್ಕಾರ ಮಾಡಿದಂಥ ಲಿಂಗವನ್ನು ಶಿಶುವಿನ ಕಂಠದಲ್ಲಿ ಧರಿಸಬೇಕು. ॥೬೮॥ ವೀರಶೈವಾಚಾರ ಕೌಸ್ತುಭ ದಲ್ಲಿ ಅಲ್ಲಿ ಮೂಲಸಿದ್ಧಾಂತ ಶೇಖರದಲ್ಲಿ (ಶಿವಾಗಮದಲ್ಲಿ) ಎಂದು ತಿಳಿಯತಕ್ಕದ್ದು ಮಂಗಲವಾದ್ಯದೊಡನೆ ಆ ಲಿಂಗವನ್ನು ತೆಗೆದುಕೊಂಡು ಬಂದು ಆಚಾರ್ಯನು ಯಜಮಾನನಿಂದ ಅಧಿವಾಸವನ್ನು ಮಾಡಿಸಬೇಕು. ॥ ೬೯ ॥ ಆಚಾರ್ಯನು ಸ್ವಸ್ತಿ ಸೂಕ್ತಗಳಿಂದ, ವೇದ ಮಂತ್ರಗಳಿಂದ ತೊಳೆಯುವದೇ ಮೊದಲಾದ ಕ್ರಿಯೆಗಳಿಂದ ಯಥಾ ಕ್ರಮವಾಗಿ ಆ ಲಿಂಗವನ್ನು ಶುದ್ಧ ಮಾಡಿಕೊಳ್ಳಬೇಕು. ॥ ೭೦ ॥ ಅನಂತರ ದೇಶಿಕನು ಪಶ್ಚಿಮ ಭಾಗದಲ್ಲಿ ಒಂದು ಮಂಡಲವನ್ನು ರಚಿಸಿ ಅದರ ಮೇಲೆ ಹಿಂದೆ ಹೇಳಿದ ಪ್ರಕಾರವಾಗಿ ಜಲಾಧಿ ವಾಸವನ್ನು ಮಾಡಿಸಬೇಕು. ॥ ೭೧ ॥ ಬಳಿಕ ಗುರುವು ಆ ಲಿಂಗವನ್ನು ತೆಗೆದುಕೊಂಡು ಮೂಲ ಮಂತ್ರದಿಂದ ನೆಲ್ಲಿಯ ಪುಡಿಯೊಳಗೆ ಉದ್ವರ್ತನವನ್ನು ಮಾಡಬೇಕು. (ನೆಲ್ಲಿಯ ಪುಡಿಯನ್ನು ಆ ಲಿಂಗಕ್ಕೆ ಒರಿಸಬೇಕು.) ಆ ಮೇಲೆ ರುದ್ರ ಸೂಕ್ತಗಳಿಂದ ಮತ್ತು ವಾರುಣ ಮಂತ್ರಗಳಿಂದ ಕುಂಭೋದಕ ದಿಂದ ಅಭಿಷೇಕ ಮಾಡಬೇಕು. ಬಳಿಕ ಗಂಧ ಅಕ್ಷತೆ ಕುಸುಮಾದಿ ಪಂಚೋಪಚಾರ

पञ्चोपचारैरभ्यर्च्य सुगन्धकुसुमाक्षतैः ।
लिंगमादाय मूलेन विन्यसेच्छांकरीं दिशम् ॥ ७३ ॥
धान्यराशौ निवेश्याथ भूसूक्तेन ततः परम् ।
संस्पृशेन्मूलमन्त्रेण सेचयेत्कलशोदकैः ॥ ७४ ॥
उपचारैः समभ्यर्च्य तण्डुलैश्च ततः परम् ।
निगूहयेन्मुहूर्तान्तं मूलमन्त्रेण संस्पृशेत् ।
कलशैः स्नापयेद्भक्त्या पूजयेच्च शिखिध्वज ॥ ७५ ॥
फलपुष्पैर्निगूह्याथ मुहूर्तान्तं गुरूत्तमः ।
तन्मूलेनैव संस्पृश्य सेचयेत्कलशोदकैः ॥ ७६ ॥
शय्यां विन्यस्य पर्यंके लिङ्गं तत्र विनिक्षिपेत् ।
संस्पृशन्मूलमन्त्रेण स्नापयेत्कलशोदकैः ॥ ७७ ॥
पञ्चोपचारैरभ्यर्च्य विनिद्रं कारयेत्सुत ।
वेदमङ्गलनिर्घोषैराचार्यैर्ऋत्विजैः सह ॥ ७८ ॥

---

ಗಳಿಂದ ಪೂಜಿಸಿ ಆ ಲಿಂಗವನ್ನು ತೆಗೆದುಕೊಂಡು ಮೂಲ ಮಂತ್ರವನ್ನುಚ್ಚರಿಸುತ್ತ ಈಶಾನ್ಯ ದಿಕ್ಕಿನಲ್ಲಿಡಬೇಕು. ॥ ೭೨–೭೩ ॥ ಆ ಮೇಲೆ ಆ ಲಿಂಗವನ್ನು ಧಾನ್ಯದ ರಾಶಿಯಲ್ಲಿಟ್ಟು, ಭೂ. ಸೂಕ್ತವನ್ನು ಹೇಳಬೇಕು. ಅನಂತರ ಮೂಲ ಮಂತ್ರದಿಂದ ಅದನ್ನು ಸ್ಪರ್ಶ ಮಾಡಿ ಕಲಶೋದಕದಿಂದ ಅಭಿಷೇಕ ಮಾಡಬೇಕು. ॥ ೭೪ ॥ ಬಳಿಕ ಪಂಚೋಪಚಾರಗಳಿಂದ ಪೂಜಿಸಿ ಅಕ್ಕಿಯ ರಾಶಿಯಲ್ಲಿ ಒಂದು ತಾಸಿನ ವರೆಗೂ ಇಟ್ಟು, ಮೂಲ ಮಂತ್ರವನ್ನುಚ್ಚರಿಸುತ್ತ ಸ್ಪರ್ಶ ಮಾಡಬೇಕು. ಅನಂತರ ಭಕ್ತಿಯಿಂದ ಕಲಶೋದಕಗಳಿಂದ ಅಭಿಷೇಕ ಮಾಡಿ ಎಲೈ ಷಣ್ಮುಖನೇ ಪೂಜಿಸಬೇಕು. ॥ ೭೫ ॥ ಆ ಮೇಲೆ ದೇಶಿಕನು ಒಂದು ತಾಸಿನ ವರೆಗೂ ಆ ಲಿಂಗವನ್ನು ಹಣ್ಣಿನ ರಾಶಿಯಲ್ಲಿಟ್ಟು ಮೂಲ ಮಂತ್ರವನ್ನು ಉಚ್ಚರಿಸುತ್ತ ಸ್ಪರ್ಶ ಮಾಡಿ ಬಳಿಕ ಕಲಶೋದಕದಿಂದ ಅಭಿಷೇಕ ಮಾಡಬೇಕು. ॥ ೭೬ ॥ ಪಲ್ಲಂಗದ ಮೇಲೆ ಶಯನವನ್ನು ತಯಾರ ಮಾಡಿ ಅದರಲ್ಲಿ ಲಿಂಗವನ್ನು ಇಡಬೇಕು. ಮೂಲ ಮಾತ್ರದಿಂದ ಸ್ಪರ್ಶ ಮಾಡುತ್ತ ಕಲಶೋದಕದಿಂದ ಅಭಿಷೇಕ ಮಾಡಬೇಕು. ॥ ೭೭ ॥ ಪಂಚೋಪಚಾರಗಳಿಂದ ಪೂಜೆ ಮಾಡಿ ಎಲೈ ಷಣ್ಮುಖನೇ ಆ ಲಿಂಗವನ್ನು ಶಯನದಿಂದ ಎಬ್ಬಿಸಬೇಕು. ಮಂಗಲವಾದ್ಯ ಧ್ವನಿ, ವೇದಮಂತ್ರ, ಇವುಗಳಿಂದ ಆಚಾರ್ಯನು ಋತ್ವಿಜರೊಡನೆ ॥ ೭೮ ॥ ಅಧಿವಾಸವನ್ನು

अधिवासं क्रमेणैवं कुर्याद्वै लिंगपीठयोः ।
बन्धयेदष्टबन्धेन धृत्वा द्यौरितिमन्त्रतः ।
अष्टबन्धप्रकारस्तु वक्ष्यतेऽथ यथा तथा ॥ ७९ ॥
वृत्तम् । धाराष्टधा सर्जरसस्तथैव कुन्दाष्टधा गैरिकजातयस्तथा ।
शिलाष्टधा स्फाटिकनिर्मलाद्या हेमादिका रत्नकणादिकाः पुनः ।
मनोद्भवा मांसि मयूरमूलिकाः समीरिताश्चाष्टविधाश्च बन्धाः ॥८०॥
अन्यच्च । भल्लातकीफलं दीपशिखायां संप्रतापयेत् ।
तत्तैलं समभागं तु तिलतैलं विमिश्रयेत् ॥ ८१ ॥
मृत्पात्रश्लक्ष्णचूर्णैश्च शुक्लवस्त्रसुशोधितैः ।
द्वित्रिवारमथो पूर्वं तैलद्वयसुसेचितैः ॥ ८२ ॥
या लता चोगनीनाम्नी तस्याः सारेण मिश्रितैः ।
संपिष्य तेन बध्नीयाद्वीरशैवः प्रयत्नतः ।
षडक्षरेणाभिमंत्र्य पात्रे तद्रसमानयेत् ॥ ८३ ॥

---

ಕ್ರಮದಿಂದ ಲಿಂಗಕ್ಕೂ, ಪೀಠಕ್ಕೂ ಮಾಡಬೇಕು. ಅನಂತರ ಅಷ್ಟಬಂಧದಿಂದ ಆ ಲಿಂಗವನ್ನು ಬಂಧಿಸಿ ಧೃತ್ವಾದ್ಯೌಃ ಎಂಬ ಮಂತ್ರದಿಂದ ಬಂಧಿಸಬೇಕು. ಅಷ್ಟಬಂಧದ ರೀತಿಯು ಮುಂದೆ ಹೇಳಲ್ಪಡುವದು. ॥ ೭೯ ॥ ಧಾರಾ ಎಂಟು ಭಾಗ, ಧೂಪ ಮತ್ತು ಕುಂದ ಇವು ಪ್ರತ್ಯೇಕ ಎಂಟು ಭಾಗ. ಕಾವಿಕಲ್ಲು ಎಂಟು ಭಾಗ, ನಿರ್ಮಲವಾದ ಸ್ಫಟಿಕ ಹಾಗು ಬಂಗಾರ ಮುಂತಾದ ರತ್ನಗಳ ಜೊರು ಇವೆಲ್ಲ ಸೇರಿ ಒಂದು ಭಾಗ, ಮನೋದ್ಭವ, ಜಟಾಮಾಂಸಿ, ಮಯೂರ ಶಿಖಿ ಬೇರು ಇವು ಪ್ರತ್ಯೇಕ ಒಂದೊಂದು ಭಾಗ ಈ ಎಂಟಕ್ಕೆ ಅಷ್ಟಬಂಧವೆನ್ನುವದು. ॥೮೦॥ ಮತ್ತೊಂದು ರೀತಿ ಯಿಂದ ಈ ಅಷ್ಟಬಂಧವನ್ನು ಹೇಳುವನು= ಗೇರು (ಕೇರು)ಬೀಜಗಳನ್ನು ದೀಪ ಜ್ವಾಲೆ ಯಿಂದ ಸುಡಬೇಕು. ಅದರಿಂದ ಬಂದ ಕೇರೆಣ್ಣೆಗೆ ಸಮಭಾಗ ಎಳ್ಳೆಣ್ಣೆಯನ್ನು ಕೂಡಿಸ ಬೇಕು. ಮಣ್ಣಿನ ಪಾತ್ರೆ ಗಡಿಗಿ ಹಂಚು ಮೊದಲಾದುದನ್ನು ಚನ್ನಾಗಿ ಕುಟ್ಟಿ ಆ ಪುಡಿ ಯನ್ನು ಸ್ವಚ್ಛವಾದ ಬಿಳಿ ಅರಿವಿ (ಬಟ್ಟೆ)ಯಲ್ಲಿ ಶೋಧಿಸಿ ಅತಿ ಸೂಕ್ಷ್ಮವಾದ ಪುಡಿ ಯನ್ನು ಮೇಲೆ ಹೇಳಿದ ಎರಡು ವಿಧ ಎಣ್ಣೆಯಿಂದ ೨-೩ ಸಾರೆ ಚನ್ನಾಗಿ ತೋಯಿಸ ಬೇಕು ನಂತರ ಚೋಗನೀ ಎಂಬ ಬಳ್ಳಿಯ ರಸದಲ್ಲಿ ತೋಯಿಸಿ ಕುಟ್ಟಬೇಕು. ಆ ಬಳ್ಳಿಯ ರಸವನ್ನು ಪಾತ್ರೆಯಲ್ಲಿ ಕೂಡಿಸುವಾಗ್ಗೆ ಷಡಕ್ಷರ ಮಂತ್ರವನ್ನು ಉಚ್ಚರಿ ಸುತ್ತಿರಬೇಕು, ಚಳಿಗಾಲದಲ್ಲಿ ಬರ್ಫಿನಂತೆ ಘಟ್ಟಿಯಾದ ಈ ಮಿಶ್ರಣವನ್ನು ನೀರು

हेमन्ततौ हिमान्येव घनीभूतं दृढाश्मनि ।
पेषयेदतियत्नेन सिक्तां किंचिज्जलेन च ॥८४॥

---

ಚಿಮುಕಿಸುತ್ತ ಚಲೋ ಕಲ್ಲಿನ ಮೇಲೆ ಚನ್ನಾಗಿ ಅರೆಯಬೇಕು. ಹೀಗೆ ತಯಾರಾದ ಇದರಿಂದ ಶಿವಲಿಂಗಕ್ಕೆ ಸುತ್ತಲೂ ಬಂಧನವ (ಕಂತಿಯು)ನ್ನು ಮಾಡ ಬೇಕು. ॥೮೧–೮೪॥

— ವಿಶೇಷ ವಿಚಾರ —

ಶಾಸ್ತ್ರದಲ್ಲಿ ಅಷ್ಟಬಂಧವೆಂದು ಹೇಳಿದ್ದರೂ ಕಂತಿಯಲ್ಲಿ ಎಂಟು ಸಾಮಾನ ಗಳು ಕೂಡುವದಿಲ್ಲ. ಮೊದಲು ಹೇಳಿದ ಪ್ರಕಾರ ಧಾರಾ ಮೊದ ಲಾದವು ಎಂಟು ಇರುತ್ತವೆ. ಆದರೆ. ಧಾರಾ, ಕುಂದ, ಮನೋದ್ಭವ, ಮಯೂರ ಮೊದಲಾದವುಗಳ ಸರಿಯಾದ ಅರ್ಥವು ಪ್ರಕೃತ ಕಾರ್ಯಕ್ಕೆ ಅನುಕೂಲವಾಗುವಂತೆ ಹೊರಡುವದಿಲ್ಲ. ಆ ಎಂಟರಿಂದ ಮುಂದೆ ಕಂತಿಯನ್ನು ಹೇಗೆ ತಯಾರ ಮಾಡ ಬೇಕೆಂಬುದು ವಿಶದವಾಗಿ ಹೇಳಲ್ಪಟ್ಟಿಲ್ಲ. ಎರಡನೆಯ ರೀತಿಯಲ್ಲಿ ಕಂತಿಯೊಳಗೆ ನಾಲ್ಕು ಸಾಮಾನಗಳು ಮಾತ್ರ ಕೂಡುವವು. ಆದರೂ ಇದಕ್ಕೆ ಅಷ್ಟಬಂಧವೆಂಬ ಹೆಸರು ಇರುತ್ತದೆ. ಎರಡನೆಯ ರೀತಿಯಿಂದ ತಯಾರ ಮಾಡಿದ ಕಂತಿಯಲ್ಲಿ ಎರಡು ದೋಷಗಳಿರುತ್ತವೆ. ೧ ಮೊದಲು ಸುಟ್ಟು ತಯಾರ ಮಾಡಿದ ಮಣ್ಣಿನ ಪಾತ್ರೆ ಯನ್ನು ಕುಟ್ಟಿ ಪುಡಿ ಮಾಡಿ ಆ ಪುಡಿಯಿಂದ ಈ ಕಂತಿ ತಯಾರಾಗುವದರಿಂದ ಇದು ಬಹಳ ಗಟ್ಟಿಮುಟ್ಟು ಆಗುತ್ತದೆ. ಆದರೆ ಅಕಸ್ಮಾತ್ ಬಿರಿದರೆ, ಅಥವಾ ಸಣ್ಣ ಪೆಣಕಿ (ಜೊಂ) ಹಾರಿದರೆ ಆಗ ಆ ಕಂತಿಯನ್ನು ದೀಪ ಜ್ವಾಲೆಯಿಂದ ಕಾಸಿ ಬಿಚ್ಚಲಿಕ್ಕೆ ಬರುವದಿಲ್ಲ. ಹೇಗೆ ಹೇಗೆ ಕಾಸುವರೊ ಹಾಗೆ ಅದು ಕಾದು ಕೆಂಪಾಗುವದಲ್ಲದೆ ಕರಗಿ ಮಿದುವಾಗುವದಿಲ್ಲ. ಅತಿ ಕಾಸಿದರೆ ಒಳಗಿನ ಮೂರ್ತಿ ಸಿಡಿದು ಭಿನ್ನವಾಗುವ ಸಂಭವ ವಿರುತ್ತದೆ. ೨ ಒಮ್ಮೆ ಸುಟ್ಟು ತಯಾರ ಮಾಡಿದ ಮಣ್ಣಿನ ಗಡಿಗಿ ಹಂಚು ಮುಂತಾದವುಗಳ ಪುಡಿಯಿಂದ ತಯಾರಾಗುವದರಿಂದ ಶುದ್ಧ ಆಚಾರ ಸಂಪನ್ನರಿಗೆ ಇದು ಸರಿಯಾಗುದಲ್ಲ. ಷಟ್‌ಸ್ಥಲ ಕ್ರಿಯಾಬದ್ಧರಾಗುವವರು ಇದನ್ನು ಧರಿಸಲೇ ಬಾರದು. ಮೇಲೆ ಹೇಳಿದ ಎರಡು ರೀತಿಯಿಂದ ತಯಾರ ಮಾಡಿದ ಕಂತಿಯಲ್ಲಿ ಸಂಗ್ರಹಕಾರನಿಗೆ ಸಂಪೂರ್ಣ ವಿಶ್ವಾಸವಿಲ್ಲವಾದುದರಿಂದ, ಕಂತಿಯನ್ನು ತಯಾರ ಮಾಡುವ ಅನುಭವಾನವಾದ ಸಂಪ್ರದಾಯ ಬಲ್ಲವರಿಂದಲೇ ಕಂತಿಯನ್ನು ತಯಾರ ಮಾಡಿಸಿ ಅದರಿಂದ ಲಿಂಗಮೂರ್ತಿಯ ಸುತ್ತಲೂ ಕೂಡ್ರಿಸಬೇಕೆಂದು ಹೇಳಿ ತಾನು ಕಡೆಗಾಗಿರುವನು. ಸಂಪ್ರದಾಯವಾಗಿ ಬಂದ ಕಂತಿಯನ್ನು ತಯಾರ ಮಾಡುವ ಪರಿಶುದ್ಧ ರೀತಿಯು ಹೀಗಿರುತ್ತದೆ— ಪರಿಶುದ್ಧವಾದ ಸ್ಥಾನದಲ್ಲಿ ಗೋಮಯವ(ಆಕಳ ಸಗಣಿಯು)ನ್ನು ಸಂಗ್ರಹಿಸಿ, ಉಂಡಿಕಟ್ಟಿ ಒಣಗಿಸಿ, ಬಟ್ಟೆಹಾಕಿ

तत्पाकं संप्रदायज्ञैर्ज्ञात्वा तेनैव बन्धयेत् ।
वज्रबन्धसमोऽयन्तु वीरमाहेश्वराद्दतः ॥ ८५ ॥
इति बध्वा चेष्टलिंगं प्रतीक्षेत शिशोर्जनिम् ।
संस्कुर्यात्तनयं जातकर्मणा जननात्परम् ॥ ८६ ॥

---

ಸುಡಬೇಕು. ಗ್ರಹಣ, ಪಿಂಡೀಕರಣ, ಶೋಷಣ, ದಹನ ಈ ನಾಲ್ಕು ಕ್ರಿಯೆಗಳನ್ನು ಮಂತ್ರಪೂರ್ವಕವಾಗಿ ಮಾಡಬೇಕು. ಬಳಿಕ ಆ ಬೂದಿಯನ್ನು ಬಂಡೆಯ ಮೇಲೆ ಅರೆದು ಒಂದು ಪಾತ್ರೆಗೆ ಬಿಳಿ ಅರಿವೆ ಕಟ್ಟಿ ಮಂತ್ರಪೂರ್ವಕ ಚೆನ್ನಾಗಿ ಶೋಧಿಸಬೇಕು. ಇಂತಹ ಸೂಕ್ಷ್ಮವಾದ ಪುಡಿಯನ್ನು, ಕೇರುಬೀಜಗಳನ್ನು ಬಟ್ಟಿ ಹಾಕಿ ತೆಗೆದ ಕೇರೆಣ್ಣೆಯಲ್ಲಿ ಮಿಶ್ರ ಮಾಡಿ ೨೪ ತಾಸುಗಳ ವರೆಗೆ ಚೆನ್ನಾಗಿ ಕುಟ್ಟಬೇಕು. ಅವಿಚ್ಛಿನ್ನವಾಗಿ ಕುಟ್ಟುವದಾಗದಿದ್ದರೆ ಚನ್ನಾಗಿ ಹದ ಬರುವ ವರೆಗೆ ಕುಟ್ಟಬೇಕು. ಕೇರೆಣ್ಣೆ, ಶುದ್ಧ ಗೋಮಯದ ಬೂದಿ ಇವೆರಡರಿಂದಲೇ ಕಂತಿಯು ತಯಾರಾಗುತ್ತದೆ. ಈ ವಿಧವಾದ ಕಂತಿಯನ್ನು ಲಿಂಗಮೂರ್ತಿಗೆ ಸುತ್ತಲೂ ಕೂಡ್ರಿಸಿ ಬಳಿಕ ನುಣಪು ಮತ್ತು ಹೊಳಪು ಬರುವದಕ್ಕಾಗಿ ಎರಡು ವಿಧ ಕಾಡಿಗಿಯನ್ನು ಹಚ್ಚಿ ತಿಕ್ಕಬೇಕಾಗುವದು. ೧) ಕುಸಿಬಿ ಎಣ್ಣೆ ಕಾಡಿಗಿ ೨) ತುಪ್ಪದ ಕಾಡಿಗಿ ಇದರಲ್ಲಿ ಎಣ್ಣೆ ಕಾಡಿಗಿ ಹಚ್ಚಿ ತಿಕ್ಕಿ ಕೊಟ್ಟು ಎಣ್ಣೆ ಕಂತಿ ಮಾಡಿರುವೆವೆಂದೂ, ತುಪ್ಪದ ಕಾಡಿಗಿ ಹಚ್ಚಿ ತಿಕ್ಕಿ ಕೊಟ್ಟು ತುಪ್ಪದ ಕಂತಿ ಮಾಡಿರುವೆವೆಂದು, ಕಂತಿ ಕೂಡ್ರಿಸುವವರು ಹೇಳುವ ರೂಢಿಯುಂಟು.... ಕಾಡಿಗಿಯಲ್ಲಿ ಭೇದವಿರುವದಲ್ಲದೆ ಕಂತಿಯಲ್ಲಿ ಭೇದವಿಲ್ಲ. ಕೃತ್ರಿಮ ಕಂತಿ ಮಾಡುವ ಕೆಲವರು ಯಾವುದಾದರೊಂದು ಬೂದಿಯನ್ನು ತಯಾರ ಮಾಡಿಕೊಂಡು ಡಾಂಬರದಲ್ಲಿ ಅದನ್ನು ಕೂಡಿಸಿ ಕುಟ್ಟಿ ಮಾಡಿಕೊಳ್ಳುವರು ಕೊನೆಗೆ ಚಿಮಣಿ ಎಣ್ಣೆ ಕಾಡಿಗಿಯನ್ನು ಹಚ್ಚಿ ತಿಕ್ಕುವರು ಇಂಥವರನ್ನು ನಂಬಬಾರದು. ಇದು ಅಶಾಸ್ತ್ರೀಯವಾದುದು.

ಪರಿಶುದ್ಧ ರೀತಿಯಿಂದ ಮಂತ್ರಪೂರ್ವಕವಾಗಿ ತಯಾರ ಮಾಡಿದ ಗೋಮಯ ಬೂದಿಯ ಕಂತಿಯು ವೀರಮಾಹೇಶ್ವರರ ಪ್ರೀತಿಗೆ ಪಾತ್ರವಾಗಿರುವದು ಮತ್ತು ವಜ್ರಬಂಧಕ್ಕೆ ಸಮಾನವಾಗಿರುವದು. ॥ ೮೫ ॥ ಈ ವಿಧದ ಕಂತಿಯನ್ನು ಲಿಂಗಮೂರ್ತಿಗೆ ಧರಿಸಿ ತಯಾರ ಮಾಡಿಕೊಂಡು ಶಿಶುವಿನ ಜನನವನ್ನು ನಿರೀಕ್ಷಿಸುತ್ತಿರಬೇಕು. ಜನನವಾದ ಕೂಡಲೇ ಶಿಶುವಿಗೆ ಜಾತಸಂಸ್ಕಾರವನ್ನು ಗುರುಗಳ ಕಡೆಯಿಂದ ಮಾಡಿಸಬೇಕು. ॥ ೮೬ ॥ ಶಿಶುವು ಹುಟ್ಟಿದ ಕೂಡಲೇ ಜ್ಞಾನಿಯಾದ ವೀರಶೈವನು ಗುರುಗಳನ್ನು ಕರೆದುಕೊಂಡು ಬಂದು, ಅವರಿಂದ ಈ ಮೊದಲು ಹೇಳಿದ

जातं कुमारं संप्राप्य गुरुणा कारयेद्बुधः ।
पूर्वमेव विनिर्दिष्टं लिंगं पञ्चामृतैः पृथक् ॥ ८७ ॥
संस्नाप्य पञ्चभिर्गव्यैर्लिंगं प्राणप्रतिष्ठितम् ।
असुनीते ऋचा कुर्यादष्टत्रिंशत्कलाः पुनः ॥ ८८ ॥
कलाभिर्न्यस्य तल्लिंगं पञ्चामृतरसैः पृथक् ।
संस्नाप्य फलपुष्पाद्यैरुपचारैस्तु षोडशैः ॥ ८९ ॥
अभ्यर्च्य विधिवद्भक्त्या जङ्गमस्य पदांभसा ।
प्रसादेनेष्टलिंगं च शेषेणाथ कुमारकम् ।
पादोदकप्रसादाभ्यां संपन्नं कारयेत्पिता ॥ ९० ॥

अत्रायमादिग्रहीता प्राणप्रतिष्ठामन्त्रः ।

असुनीते पुनरस्मासु चक्षुः पुनः प्राणमिह नो धेहि भोगम् ।
जोकपश्येम सूर्यमुच्चरन्तमनुमते मृळयानः स्वस्ति ।
अथ वैदिकक्रमस्तु अस्मिन्नेवग्रंथे विस्तरतो द्रष्टव्यः विस्तरभयादत्र न लिखितः । इति जातकर्म संस्कारः ।

अथ नामकरणम्

द्वादशेऽहनि पिता नामकर्म कुर्याज्जातकर्मानंतरं वा कार्यम् ।

---

ಲಕ್ಷಣಗಳುಳ್ಳ, ಲಿಂಗವನ್ನು ಪಂಚಗವ್ಯದಿಂದ ಮತ್ತು ಪಂಚಾಮೃತದಿಂದ ಬೇರೆ ಬೇರೆ ಅಭಿಷೇಕ ಮಾಡಿ ಅಸುನೀತೆ ಎಂಬ ಮಂತ್ರದಿಂದ ಪ್ರಾಣಪ್ರತಿಷ್ಠಾ ಮಾಡಿ ಅನಂತರ ೩೮ ಕಲೆಗಳಿಂದ ಸಂಬಂಧ ಮಾಡಿ ಬಳಿಕ ಪಂಚಾಮೃತದಿಂದ, ಫಲ ಪುಷ್ಪೋದಕಾದಿಗಳಿಂದ ಮತ್ತೊಮ್ಮೆ ಅಭಿಷೇಕ ಮಾಡಿ ಷೋಡಶೋಪಚಾರಗಳಿಂದ ವಿಧಾನಪೂರ್ವಕವಾಗಿ ಪೂಜಿಸಬೇಕು. ॥ ೮೭–೮೮ ॥ ಆ ನಂತರ ಆ ಲಿಂಗಕ್ಕೆ ಗುರುವಿನ ಪಾದೋದಕ ಪ್ರಸಾದಗಳನ್ನು ಸಮರ್ಪಿಸಿ ಆ ಬಾಲಕನಿಗೂ ಪಾದೋದಕ ಪ್ರಸಾದಗಳನ್ನು ತಂದೆಯು ಕೊಡಿಸಬೇಕು. ॥ ೯೦ ॥ ಪ್ರಾಣಪ್ರತಿಷ್ಠಾಮಂತ್ರವು ಹೀಗೆ ಅದೆ. ಮೂಲವನ್ನು ನೋಡಬೇಕು. ವೈದಿಕ ಕ್ರಮವು ಇದೇ ವೀರಶೈವಕೌಸ್ತುಭ ಗ್ರಂಥದಲ್ಲಿ ವಿಸ್ತಾರವಾಗಿ ಬರೆಯಲ್ಪಟ್ಟಿದೆ. ನೋಡಬೇಕು ಇಲ್ಲಿಗೆ ಜಾತಕರ್ಮ ಸಂಸ್ಕಾರ ಮುಗಿದುದು.

— ಅಥ ನಾಮಕರಣ —

ಮಗುವಿನ ತಂದೆಯು ಹನ್ನೆರಡನೆಯ ದಿವಸ ಅಥವಾ ಜಾತಕರ್ಮ ಸಂಸ್ಕಾರ

यस्मिन् शुभदिने वा कार्यम् । तत्पूर्वेद्युर्नांदीसमाराधनार्थं विशिष्टान्माहेश्वरान् भोजयेत् । पुण्याहानंतरं संकल्प्य व्यवहारार्थमावां नाम करवावहै । देवतात्रयपित्रादिनाम कुर्यात् । इदमस्मै नाम भवतीति पिता विशिष्टेभ्यः प्रकाशयेत् । तथैवेति ब्रूयुः । माता पितरौ तन्नाम शिशोर्दक्षिणकर्णे दद्यात् । तन्नाम्ना कुलदेवताभ्यो नमस्कुर्यात् । तन्नाम दीक्षापर्यन्तं गोपयेत् । पिता ग्रामादेत्य शिशुशिरः परिगृह्य जपेत् ।

अंगादंगात्संभवसि हृदयादधिजायसे ।
आत्मा वै पुत्रनामासि स जीव शरदः शतम् ॥ ९१ ॥

इति त्रिवारं जिघ्रेत् । एतयैवावृत्या कुमारीमयुग्माक्षराणि, स्त्रीणां, पुंसां युग्माक್षराणि नाम भवतीति शेषः । इति नामकरणम् ।

---

ವಾದ ನಂತರ ಅಥವಾ ಯಾವ ಶುಭ ದಿವಸದಲ್ಲಿ ನಾಮಕರಣ ಮಾಡುವದಿದೆಯೋ ಅದಕ್ಕಿಂತಲೂ ಮೊದಲನೆಯ ದಿವಸ ನಾಂದೀ ಸಮಾರಾಧನೆಯ ಸಲುವಾಗಿ ಉತ್ತಮರಾದ ಮಾಹೇಶ್ವರ (ಮಠಸ್ಥ)ರನ್ನು ತೃಪ್ತಿಪಡಿಸಬೇಕು. ನಾಮಕರಣದ ದಿವಸದಲ್ಲಿ ಪುಣ್ಯಾಹವಾಚನವನ್ನು ಮಾಡಿದ ನಂತರ ವ್ಯವಹಾರದ ಸಲುವಾಗಿ ನಾವಿಬ್ಬರೂ ನಾಮವನ್ನು ಈ ಶಿಶುವಿಗೆ ಇಡುವೆನೆಂದು ಸಂಕಲ್ಪಮಾಡಿ ಒಂದು ತಾಟಿನಲ್ಲಿ ಅಕ್ಕಿಯನ್ನು ಹರವಿ ದೇವರ ಮೂರು ಹೆಸರಗಳನ್ನು ತನ್ನ ವಂಶದ ಹಿಂದಿನವರ ಹೆಸರನ್ನು ಆ ಅಕ್ಕಿಯಲ್ಲಿ ಬರೆದು ತಂದೆಯು ಈ ಶಿಶುವಿಗೆ ಈ ಹೆಸರು ಇಡಲ್ಪಡುತ್ತಿದೆ ಎಂದು ಮಾಹೇಶ್ವರರಿಗೂ ಮತ್ತು ಇತರರಿಗೂ ಪ್ರಕಾಶಪಡಿಸಬೇಕು. ಆಗ ಮಾಹೇಶ್ವರರು ಮತ್ತು ಇತರ ಜನರೂ ಹಾಗೇ ಆಗಲೆಂದು ಉತ್ತರವನ್ನು ಹೇಳಬೇಕು. ಅನಂತರ ತಾಯಿ–ತಂದೆಗಳು ಆ ಕರೆಯುವ ಹೆಸರನ್ನು ಶಿಶುವಿನ ಬಲಗಿವಿಯಲ್ಲಿ ಮೂರು ಸಾರೆ ಉಚ್ಚರಿಸಬೇಕು. ಆ ಬಳಿಕ ಇಟ್ಟ ಹೆಸರಿನಿಂದ ಮಾಹೇಶ್ವರರಿಗೂ ಮನೆಯ ದೇವರಿಗೂ ನಮಸ್ಕಾರ ಮಾಡಿಸಬೇಕು. ಆ ಹೆಸರು ಮುಂದೆ ದೀಕ್ಷಾ ಸಂಸ್ಕಾರ ಆಗುವವರೆಗೂ ಇರತಕ್ಕದ್ದು. ಆ ನಂತರ ತಂದೆಯು ಬಂದು, ಶಿಶುವಿನ ಮಸ್ತಕದ ಮೇಲೆ ಕೈಯ್ಯನ್ನಿಟ್ಟು ಮೇಲೆ ಹೇಳಿದ ಮಂತ್ರವನ್ನು ಜಪಿಸಬೇಕು. ಆ ಮೇಲೆ ಮೂರು ಸಾರೆ ಮಸ್ತಕವನ್ನು ಘ್ರಾಣಿಸಬೇಕು (ಮೂಸಿ ನೋಡಬೇಕು) ಇದೇ ಪ್ರಕಾರವಾಗಿ ಹೆಣ್ಣು ಕೂಸಿಗೂ ಮಾಡಬೇಕು. ಹೆಣ್ಣಿಗೆ ೩–೫ ಅಕ್ಷರಗಳುಳ್ಳ ಹೆಸರನ್ನು ಗಿರಿಜಾ, ಸರ್ವಮಂಗಲಾ ಇತ್ಯಾದಿ. ಗಂಡಿಗೆ ೨–೪–೬ ಅಕ್ಷರಗಳುಳ್ಳ ಶಿವ, ರುದ್ರ, ಮಹಾದೇವ ಇತ್ಯಾದಿ ಹೆಸರನ್ನು ಇಡಬೇಕು. ಇಲ್ಲಿಗೆ ಶಿಶುವಿನ ನಾಮಕರಣ ಮುಗಿದುದು.

## अथान्नप्राशनमुच्यते

षष्ठे मास्यष्टमे वा दन्ते जाते वा कार्यम्। पूर्वेद्युर्गृहमुपलिप्य अलंकृत्य च स्वस्तिवाचननांदीकर्माणि कुर्यात्। अपरेद्युः शिशुमभ्युज्यालंकृत्य प्रशस्तहव्यं संस्कृत्य संकल्प्य। सर्वकर्मसमृद्ध्यर्थमस्मत्कुमारस्यान्नप्राशनकर्म करिष्ये इति संकल्प्य प्राङ्मुखं शिशुमुपविश्य दधिघृतमिश्रमन्नं प्राशयेत्। सर्वकर्म भवतीति विज्ञायते। अन्नपतेत्यस्य नलकूबरऋषिः अन्नपतिर्देवता उपरिष्टाद्बृहती छन्दः अन्नपतेन्नस्य नो देह्यनमीवस्य शुष्मणः प्रदातारं तारिषमूर्जं नो देहि द्विपदे शं चतुष्पदे। इत्येवं कुमार्यै। ततः शेषस्तूष्णीं प्राशयेत्। इत्यन्नप्राशनविधिः।

## अथ उपनिष्क्रमणविधिः

तदंगत्वेन माहेश्वरान् भोजयेत्। केचिदुपनिष्क्रमणकर्मान्नप्राशनात्पूर्वमुदाहरंति। तदेवं चतुर्थे मासि शुभदिने बहिरानीय

---

### — ಅಥ ಅನ್ನಪ್ರಾಶನ —

ಆರನೆಯ ತಿಂಗಳಲ್ಲಿ ಅಥವಾ ಎಂಟನೆಯ ತಿಂಗಳಲ್ಲಿ ಇಲ್ಲವೇ ಹಲ್ಲು ಬಂದನಂತರ ಅನ್ನ ಪ್ರಾಶನವನ್ನು ಮಾಡಬೇಕು. ಮೊದಲನೆಯ ದಿವಸ ಮನೆಯನ್ನು ಸಾರಣೆ ರಂಗ ವಲ್ಯಾದಿಗಳಿಂದ ಅಲಂಕರಿಸಿ ಸ್ವಸ್ತಿವಾಚನ, ನಾಂದೀ ಕರ್ಮ (ಮಾಹೇಶ್ವರ ಭೋಜನ) ಮುಗಿಸಿ ಮರುದಿವಸ ಮಗುವಿಗೆ ಅಭ್ಯಂಗ ಸ್ನಾನಮಾಡಿಸಿ ಅಲಂಕಾರ ಮಾಡಿ ಎಲ್ಲಾ ಕಾರ್ಯಗಳ ಸಮೃದ್ಧಿಯ ಸಲುವಾಗಿ ಈ ಬಾಲಕನಿಗೆ ಅನ್ನಪ್ರಾಶನ ಮಾಡಿಸುವೆನು ಎಂದು ಸಂಕಲ್ಪಮಾಡಿ ಆ ಶಿಶುವನ್ನು ಪೂರ್ವಕ್ಕೆ ಮುಖಮಾಡಿ ಕೂಡ್ರಿಸಿ ಹಾಲು, ಮೊಸರು, ತುಪ್ಪ ಇವುಗಳಿಂದ ಮಿಶ್ರವಾದ ಅನ್ನವನ್ನು ಪ್ರಾಶನ ಮಾಡಿಸಬೇಕು. ಅನ್ನಪತಿ ಎಂಬ ಮಂತ್ರಕ್ಕೆ ನಲಕೂಬರ ಋಷಿ, ಅನ್ನಪತಿ ದೇವತಾ ಬೃಹತೀ ಛಂದಃ, ಇತ್ಯಾದಿ ಹೇಳಿಕೊಂಡು ಉಣಿಸಬೇಕು. ಇದೇ ರೀತಿ ಹೆಣ್ಣು ಹುಡುಗರಿಗೂ ಮಾಡಬೇಕು. ಆದರೆ ಅನ್ನವನ್ನು ಮಂತ್ರ ಹೇಳದೆ ಸುಮ್ಮನೇ ಉಣಿಸಬೇಕು. ಇಲ್ಲಿಗೆ ಅನ್ನಪ್ರಾಶನ ಮುಗಿದುದು.

### — ಅಥ ಉಪನಿಷ್ಕ್ರಮಣವಿಧಿ —

ಈ ಕಾರ್ಯವನ್ನು ಕೆಲವರು ಅನ್ನಪ್ರಾಶನ ವಿಧಿಗಿಂತಲೂ ಮೊದಲೇ ಮಾಡಬೇಕೆಂದು ಹೇಳುತ್ತಾರೆ. ಆಗ ೪ನೆಯ ತಿಂಗಳಲ್ಲಿ ಮಾಡತಕ್ಕದ್ದು. ಮಗುವನ್ನು ಹೊರಗೆ ತರುವ ಈ ಕಾರ್ಯವನ್ನು ಮಾಡುವ ಶುಭದಿವಸದಲ್ಲಿ ಪುಣ್ಯಾಹ, ನಾಂದಿ,

शिवलिंगं शिवोपासकान् शिवयोगिनः शिशवे दर्शयेत् । तदुपगत पुण्याहं नांदीसमाराधनं च कार्यम् । इत्युपनिष्क्रमणम् ।

अथ चौलविधिः

तृतीये वर्षे चौलं कार्यं तदङ्गत्वेनोदगयनपूर्वपक्षपुण्याहेषु प्रागावर्तनादह्नः स्वस्तिवाचनं माहेश्वरसमाराधनं कुर्यात् । जातं कुमारमायुष्याभिवृद्धयर्थं चौलकर्मणा संस्करिष्ये इति संकल्प्य अथ नापितमनुशास्ते । शिवोष्णाभिः सुरभीकृताभिरद्भिरवसिंच्यकुशली कुर्विंति । त्रिशिखः पञ्चशिखः एकशिखः पुरश्चूडो वा यथाचरं भवतीति यथा कुलधर्ममिति विज्ञायते । नापिताय तांबूलफल-तण्डुलादीन् दद्यात् । इति श्रीमद्वीरशैवसदाचारसंग्रहे वीरशैवा-चारकौस्तुभोक्तप्रकारेण गर्भाधानादिचौलान्तसंस्कारविधिर्नाम दशम प्रकरणं समाप्तम् ।

---

(ಮಹೇಶ್ವರ ಭೋಜನ) ಇವುಗಳನ್ನು ಮಾಡಿ ಕೂಸನ್ನು ಹೊರಗೆತಂದು ಶಿವೋಪಾ ಸಕರು ಶಿವಯೋಗಿಗಳು ಆದ ಗುರುಜಂಗಮರಿಗೆ ಅಥವಾ ಶಿವಲಿಂಗಕ್ಕೆ ದರ್ಶನಮಾಡಿಸಿ ಅವರಿಂದ ಆಶೀರ್ವಾದವನ್ನು ಪಡೆಯಬೇಕು. ಉಪನಿಷ್ಕ್ರಮಣ ಇಲ್ಲಿಗೆ ಮುಗಿದುವು.

— ಅಥ ಚೌಲವಿಧಿ —

ಮೂರನೆಯ ವರುಷದಲ್ಲಿ ಚೌಲಕಾರ್ಯವು ಮಾಡಲ್ಪಡತಕ್ಕದ್ದು, ಉತ್ತರಾ ಯಣ, ಶುಭಮಾಸ, ಶುಭಪಕ್ಷ, ಶುಭದಿವಸಗಳಲ್ಲಿ ಮಧ್ಯಾಹ್ನ ಆರುತಾಸಿನೊಳಗಾಗಿ ಈ ಚೌಲಕರ್ಮವನ್ನು ಮಾಡತಕ್ಕದ್ದು. ಆ ದಿವಸ ಉದಯಕ್ಕೆ ಸ್ವಸ್ತಿವಾಚನವನ್ನು ಹೇಳಿ ಮಗುವನ್ನು ಕರೆತಂದು ಆಯುಷ್ಯಾಭಿವೃದ್ಧಿಯ ಸಲುವಾಗಿ ಚೌಲಸಂಸ್ಕಾರ ವನ್ನು ಮಾಡುವೆನು ಎಂದು ಸಂಕಲ್ಪಮಾಡಿ, ನಾವಿಕ (ಕ್ಷೌರಿಕ) ನಿಗೆ, ಸುಖವನ್ನುಂಟು ಮಾಡುವ ಬಿಸಿಯಾದ ಮತ್ತು ಸುಗಂಧವಾದ ನೀರಿನಿಂದ ಸಿಂಪಡಿಸಿ ಒಳ್ಳೇ ಜಾಣತನ ದಿಂದ ಚೌಲಕಾರ್ಯವನ್ನು ಮಾಡು ಎಂದು ಹೇಳಿ ಕ್ಷೌರಿಕನಿಗೆ ಎಲೆ, ಅಡಿಕೆ, ಅಕ್ಕಿ ಮೊದಲಾದುದನ್ನು ಕೊಟ್ಟು ಒಂದು, ಮೂರು, ಅಥವಾ ಐದು ಅಥವಾ ಮುಂದಿನ ಹಣೆಯಮೇಲೆ ಮಾತ್ರ ಕೂದಲುಗಳು ಉಳಿಯುವಂತೆ ಬಿಟ್ಟು ಅವರವರ ಪದ್ಧತಿಗೆ ಅನುಸರಿಸಿ ಉಳಿದ ಭಾಗವನ್ನೆಲ್ಲಾ ಕ್ಷೌರಮಾಡಿಸುವದು.

ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವಾಚಾರ ಕೌಸ್ತುಭದಲ್ಲಿ ಹೇಳಿದ ಪ್ರಕಾರ ಗರ್ಭಾಧಾನ ಮೊದಲಾದ ಚೌಲದವರೆಗಿನ ಸಂಸ್ಕಾರಗಳನ್ನು ಹೇಳುವ ಹತ್ತನೆಯ ಪ್ರಕರಣದ ಪಂಡಿತ ಶ್ರೀ ಬಸವರಾಜಶಾಸ್ತ್ರಿ ಬೃಹನ್ಮಠ ಪಗಡದಿನ್ನಿ ಇವರಿಂದ ಬರೆಯಲ್ಪಟ್ಟ ಭಾವಾರ್ಥವು ಮುಗಿದುದು.

## ॥ अथ एकादशप्रकरणम् ॥

### वीरशैवदीक्षा वीरमाहेश्वरदीक्षाविधिः

गर्भाधानादिचौलान्तकर्मभिः संस्कृतं सुतम् ।
दीक्षयेदुपनीतं तं यथाशास्त्रं गुरूत्तमः ॥ १ ॥
गर्भाष्टमे कृता दीक्षा मुख्या, सा षोडशावधि ।
गौणा, तदूर्ध्वमधमा वीरशैवान्वयायिनाम् ॥ २ ॥
इत्यादिशिवागमवाक्याद्बालत्व एव दीक्षा कर्तव्येति सिद्धम् ।

वीरशैवकौस्तुभे दीक्षाफलमाह ।

दीक्षया मुच्यते देही त्रिविधाद्भवबन्धनात् ।
शिवत्वं याति सततं न पुनः पशुतां व्रजेत् ॥ ३ ॥

---

## ಅಥ ಹನ್ನೊಂದನೆಯ ಪ್ರಕರಣ

### — ವೀರಶೈವದೀಕ್ಷಾ ವೀರಮಾಹೇಶ್ವರ ದೀಕ್ಷಾವಿಧಿ —

ಗರ್ಭಾಧಾನ ಮೊದಲಾದ ಚೌಲದ ವರೆಗಿನ ಕಾರ್ಯಗಳಿಂದ ಸಂಸ್ಕಾರ ಮಾಡಲ್ಪಟ್ಟ, ಗುರುವಿನ ಸನ್ನಿಧಿಗೆ ಬಂದ ಕುಮಾರನನ್ನು ಗುರುವು ಶಾಸ್ತ್ರೋಕ್ತ ರೀತಿಯಿಂದ ದೀಕ್ಷಾ ಮಾಡಬೇಕು. ॥೧॥ ವೀರಶೈವರಿಗೆ ಗರ್ಭದ ಎಂಟನೆಯ ವರ್ಷದಲ್ಲಿ ಮಾಡುವ ದೀಕ್ಷೆಯು ಮುಖ್ಯವಾದದ್ದು. ಹದಿನಾರು ವರ್ಷಗಳೊಳಗಾಗಿ ಮಾಡುವ ದೀಕ್ಷೆಯು ಗೌಣವು, ಇದಕ್ಕೂ ಮುಂದೆ ಮಾಡುವದು ಕನಿಷ್ಠ ವಾದುದು. ॥೨॥ ಈ ರೀತಿ ಶೈವಾಗಮಗಳ ಪ್ರಮಾಣವಿರುವದರಿಂದ ಬಾಲ್ಯ ದಲ್ಲಿಯೇ ದೀಕ್ಷೆಯನ್ನು ಮಾಡಬೇಕೆಂದು ಸಿದ್ಧವಾಗುತ್ತದೆ. ವೀರಶೈವ ಕೌಸ್ತುಭದಲ್ಲಿ ದೀಕ್ಷೆಯ ಫಲವನ್ನು ಹೀಗೆ ಹೇಳಿರುವರು. ದೀಕ್ಷಾ ಸಂಸ್ಕಾರದಿಂದ ಮಾನವನು ಮೂರು ವಿಧವಾದ ಸಂಸಾರ ಬಂಧನಗಳಿಂದ ಬಿಡುಗಡೆಯನ್ನು ಹೊಂದಿ ಶಿವಸ್ವರೂಪವನ್ನು ಹೊಂದುತ್ತಾನೆ. ಪುನಃ ಜನನ ಮರಣರೂಪ ಸಂಸಾರ ಚಕ್ರದಲ್ಲಿ ಎಂದೂ ಬೀಳುವ ದಿಲ್ಲ. ॥೩॥ ಯಾವ ಪ್ರಕಾರವಾಗಿ ರಸದಿಂದ ಲೇಪಿತವಾದ ತಾಮ್ರವು ತನ್ನ

रसविद्धं यथा ताम्रं ताम्रभावाद्विमुच्यते ।
सुवर्णेन सहैकत्वं गतं तद्याति हेमताम् ॥ ४ ॥
नवनीतं यथा तप्तं तत्स्वभावं परित्यजेत् ।
घृतस्वभावमापन्नं न पुनर्नवनीतताम् ॥ ५ ॥
यथा शुक्तिगतं तोयं मौक्तिकं भवति ध्रुवम् ।
न पुनस्तोयतां याति मौक्तिकत्वं न मुञ्चति ॥ ६ ॥
य एव शिवतां प्राप्तो न पुनः पशुतां व्रजेत् ।
शिवत्वं न च हीयेत विमुक्तो दीक्षया भवेत् ॥ ७ ॥
दीक्षाशब्दनिर्वचनमुच्यते वीरशैवसिद्धान्तदीपिकायाम् ।
दा दाने क्षिक्षय इति धातुद्वयेन दीक्षाशब्दस्य निर्वचनमुच्यते ।
दीयते शिवविज्ञानं क्षीयते पाशबन्धनम् ।
यस्मादतः समाख्याता दीक्षेतीयं विचक्षणैः ॥ ८ ॥

---

ತಾಮ್ರ ಸ್ವಭಾವವನ್ನು ಬಿಟ್ಟು ಭಂಗಾರದೊಡನೆ ಏಕತ್ವವನ್ನು ಹೊಂದಿ ಭಂಗಾರವೇ ಆಗುತ್ತದೆಯೋ ॥ ೪ ॥ ಅಥವಾ ಯಾವ ರೀತಿಯಾಗಿ ಬೆಣ್ಣೆಯು ಕಾಯಿಸಲ್ಪಟ್ಟದ್ದಾಗಿ ತನ್ನ ಸ್ವರೂಪವನ್ನು ಬಿಟ್ಟು ತುಪ್ಪದ ಸ್ವರೂಪವನ್ನು ಹೊಂದಿ ಪುನಃ ಬೆಣ್ಣೆಯ ಸ್ವರೂಪವನ್ನು ಯಾವ ರೀತಿಯಿಂದಲೂ ಹೊಂದುವದಿಲ್ಲವೋ ॥ ೫ ॥ ಅಥವಾ ಯಾವ ರೀತಿಯಾಗಿ ಕಪ್ಪೇ ಚಿಪ್ಪಿನಲ್ಲಿರುವ ನೀರು ಮುತ್ತಾಗಿ ಪುನಃ ನೀರಿನ ಸ್ವರೂಪವನ್ನು ಹೊಂದದೆ ಮೌಕ್ತಿಕದ ಸ್ವರೂಪವನ್ನು ಬಿಡುವದಿಲ್ಲವೋ ॥ ೬ ॥ ಅದೇ ರೀತಿಯಾಗಿ ಮಾನವನು ದೀಕ್ಷಾ ಸಂಸ್ಕಾರದಿಂದ ಶಿವ ಸ್ವರೂಪವನ್ನು ಹೊಂದಿ ಪುನಃ ಮನುಷ್ಯತ್ವವನ್ನು ಹೊಂದುವದಿಲ್ಲ. ಪ್ರಾಪ್ತವಾದ ಶಿವತ್ವವನ್ನು ಕಳೆದುಕೊಳ್ಳದೇ ಮುಕ್ತನೇ ಆಗುತ್ತಾನೆ. ॥ ೭ ॥ ದೀಕ್ಷಾ ಶಬ್ದದ ಉತ್ಪತ್ತಿಯು ವೀರಶೈವ ಸಿದ್ಧಾಂತ ದೀಪಿಕೆಯಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿದೆ. ದಾದಾನೆ (ಕೊಡು) ಕ್ಷಿಕ್ಷಯೇ (ನಾಶವಾಗು) ಎಂಬ ಅರ್ಥವುಳ್ಳ ಎರಡು ಧಾತುಗಳಿಂದ ದೀಕ್ಷಾ ಶಬ್ದದ ನಿರ್ವಚನವು ಹೇಳಲ್ಪಡುತ್ತದೆ. ಈ ದೀಕ್ಷಾ ಸಂಸ್ಕಾರದಿಂದ ಶಿವಜ್ಞಾನವು ಕೊಡಲ್ಪಡುತ್ತದೆ (ಪ್ರಾಪ್ತವಾಗುತ್ತದೆ) ಹಾಗು ಸಂಸಾರದ ಪಾಶಬಂಧನವು ನಾಶ ಮಾಡಲ್ಪಡುತ್ತದೆ. ಹೀಗೆಮಾಡುವದರಿಂದಲೇ ಜ್ಞಾನಿಗಳು ಈ ಸಂಸ್ಕಾರಕ್ಕೆ ದೀಕ್ಷಾ ಎಂದು ಹೆಸರಿಟ್ಟಿರುವರು. ॥ ೮ ॥

अस्य श्लोकस्य तात्पर्यं किमिति चेत् ।
ज्ञानक्रियात्मिका शिवभक्तिरेव दीक्षाशब्दवाच्येति भावः ।
ततो व्युत्क्रमेण दीक्षात्रयं निरूप्यते ।
दीक्षा सा त्रिविधा प्रोक्ता शिवज्ञानविशारदैः ।
वेधारूपा क्रियारूपा मन्त्ररूपा च तापस ॥ ९ ॥
तस्य दीक्षात्रयस्य लक्षणं निरूप्यते ।
गुरोरालोकमात्रेण हस्तमस्तकयोगतः ।
यः शिवत्वसमावेशो वेधादीक्षेति सा मता ॥ १० ॥
मांत्री दीक्षेति सा प्रोक्ता मन्त्रमात्रोपदेशिनी ।
कुण्डमण्डलकोपेता क्रियादीक्षेति कथ्यते ॥ ११ ॥
अस्य तात्पर्यं । श्रीगुरुहस्तकमलजातस्यात्मनः शिवत्वोपदेश एव वेधादीक्षा । सोऽहमिति मन्त्ररूपस्यात्मनः पञ्चाक्षरमन्त्रोपदेश एव

---

ಈ ಪದ್ಯದ ಸಾರಾಂಶವೇನಂದರೆ ಜ್ಞಾನ ಮತ್ತು ಕ್ರಿಯಾ ಉಭಯ ರೂಪವಾದ ಶಿವಭಕ್ತಿಯೇ ದೀಕ್ಷಾ ಶಬ್ದದ ಅರ್ಥವು. ಮುಂದೆ ಈ ದೀಕ್ಷೆಯಲ್ಲಿಯ ಮೂರು ಭೇದಗಳು ನಿರೂಪಿಸಲ್ಪಡುತ್ತವೆ. ಎಲೈ ಮುನಿಯೇ ಈ ದೀಕ್ಷಾ ಸಂಸ್ಕಾರವು. ವೇಧಾದೀಕ್ಷಾ, ಕ್ರಿಯಾದೀಕ್ಷಾ, ಮಂತ್ರದೀಕ್ಷಾ ಎಂದು ಮೂರು ಪ್ರಕಾರವಾಗಿ ಶಿವಾನುಭವಿಗಳಿಂದ ಹೇಳಲ್ಪಟ್ಟಿದೆ. ॥ ೯ ॥

ಈ ಮೂರು ವಿಧವಾದ ದೀಕ್ಷೆಯ ಲಕ್ಷಣವು ಬೇರೆ ಬೇರೆಯಾಗಿ ಹೇಳಲ್ಪಡುವದು. ಗುರುವಿನ ಕೃಪಾದೃಷ್ಟಿ ಆದ ಕೂಡಲೇ ಗುರುವಿನ ಹಸ್ತಕ್ಕೂ ಶಿಷ್ಯನ ಮಸ್ತಕಕ್ಕೂ ಸಂಯೋಗವಾಗುವದರಿಂದ ಶಿಷ್ಯನಲ್ಲಿ ಶಿವತ್ವದ ಸಮಾವೇಶವಾಗುವದೇ ವೇಧಾದೀಕ್ಷೆಯು ॥ ೧೦ ॥ ಮಂತ್ರೋಪದೇಶವನ್ನು ಮಾಡುವದಕ್ಕೆ ಮಂತ್ರದೀಕ್ಷಾ ಎನ್ನುತ್ತಾರೆ. ಮತ್ತು ಕಲಶಾದಿಗಳನ್ನು ಹೂಡಿ ಶಿಷ್ಯನ ಹಸ್ತ, ಮಸ್ತಕಾದಿ ಸಂಸ್ಕಾರ ವಿಧಿಯೆಲ್ಲವೂ ಕ್ರಿಯಾದೀಕ್ಷೆ ಎನಿಸಿಕೊಳ್ಳುವದು. ॥ ೧೧ ॥ ಇದರ ತಾತ್ಪರ್ಯವೇನೆಂದರೆ ಶ್ರೀ ಗುರುವು ದೀಕ್ಷಾ ಸಂಸ್ಕಾರಕ್ಕಾಗಿ ತನ್ನ ಬಳಿಗೆ ಬಂದ ಶಿಷ್ಯನನ್ನು ಕೃಪಾದೃಷ್ಟಿಯಿಂದ ನೋಡಿ ಹತ್ತಿರ ಕರೆದು, ತನ್ನ ವರದ ಹಸ್ತವನ್ನು ಶಿಷ್ಯನ ಮಸ್ತಕದ ಮೇಲೆ ಇಟ್ಟು, ನೀನು ಈಗ ಗುರುಕರ ಜಾತನಾದಿ, ನೀನು ಕೇವಲ ಶಿವ

मांत्री दीक्षा। कलशबन्धयुक्तलिंगधारणक्रियैव क्रियादीक्षा इति अस्य श्लोकस्य तात्पर्यम्। अन्यच्चात्रैव।

तनुत्रयगतानादिमलत्रयमसौ गुरुः।
दीक्षात्रयेण निर्दग्ध्वा लिंगत्रयमुपादिशत् ॥ १२ ॥
यथा पुरत्रयं दग्धं युगपत्पुरवैरिणा।
तथा मलत्रयं दग्धं युगपद्देशिकात्मना ॥ १३ ॥
त्रिष्वंगेष्वस्य शिष्यस्य लिंगत्रयमसौ गुरुः।
संयुयोज त्रिधाभूतपरदीक्षाबलेन तु ॥ १४ ॥
योगांगे भावलिंगं तु वेधादीक्षाबलेन तु।
मांत्रीदीक्षाबलेनैव भोगांगे प्राणलिंगकम् ॥ १५ ॥
क्रियादीक्षाबलेनैव देशिकः सत्यचिद्घनः।
इष्टलिंगं तथा चैव त्यागांगे समयोजयत् ॥ १६ ॥

---

ಸ್ವರೂಪಿಯೇ ಇರುವಿ. ಎಂದು ಉಪದೇಶ ಮಾಡುವದೇ ವೇಧಾದೀಕ್ಷೆಯು. ಸೋಽಹಂ ಆ ಶಿವನೇ ನಾನು ಎಂಬ ಅರ್ಥವುಳ್ಳ ಮಂತ್ರಸ್ವರೂಪವಾದ ತನಗೆ ಪಂಚಾಕ್ಷರ ಮಂತ್ರೋಪದೇಶ ಮಾಡುವದೇ ಮಂತ್ರದೀಕ್ಷೆಯು. ಕಲಶಗಳನ್ನು ಹೂಡಿ, ಅಂಗ ಲಿಂಗ ಸಂಸ್ಕಾರಗಳನ್ನು ಮಾಡಿ, ಷಡಧ್ವಶೋಧನ, ಕಲಾನ್ಯಾಸಾದಿ ಯಾವತ್ತೂ ಕ್ರಿಯಾ ಕಲಾಪ ಪೂರ್ವಕವಾಗಿ ಲಿಂಗಧಾರಣ ಮಾಡುವದೇ ಕ್ರಿಯಾದೀಕ್ಷೆಯು. ಎಂದು ಭಾವಾರ್ಥವು ಮತ್ತು ಇದೇ ಕ್ರಿಯೆಯಲ್ಲಿ ಶ್ರೀ ಗುರುವು ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಶರೀರಗಳಲ್ಲಿರುವ ಕಾರ್ಮಿಕ, ಮಾಯಾ, ಆಣವ ಎಂಬ ಮಲಗಳನ್ನು ಮೂರು ವಿಧವಾದ ದೀಕ್ಷೆಗಳಿಂದ ಹೋಗಲಾಡಿಸಿ ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಸಂಬಂಧ ಮಾಡಿ ಉಪದೇಶ ಮಾಡುವನು. ॥ ೧೨ ॥ ಪರಮಾತ್ಮನಿಂದ ತ್ರಿಪುರಗಳು ಒಂದೇ ಸಾರೆ ಹೇಗೆ ನಾಶ ಮಾಡಲ್ಪಟ್ಟವೋ ಹಾಗೆ ಗುರುವಿನಿಂದ ಮೂರು ಮಲಗಳು ಒಂದೇ ಸಾರೆ ನಾಶ ಮಾಡಲ್ಪಡುತ್ತವೆ. ಶಿಷ್ಯನ ಮೂರು ಶರೀರ ಗಳಲ್ಲಿ ಮೂರು ಲಿಂಗಗಳನ್ನು ಮೂರು ವಿಧವಾದ ದೀಕ್ಷೆಯಿಂದ ಶ್ರೀ ಗುರುವು ಸಂಬಂಧ ಮಾಡುವನು. ॥ ೧೪ ॥ ಶಿವಜ್ಞಾನ ಸಂಪನ್ನನಾದ ಶ್ರೀ ಗುರುವು ಶಿಷ್ಯನ ಯೋಗಾಂಗ (ಕಾರಣ ಶರೀರ)ದಲ್ಲಿ ಭಾವಲಿಂಗವನ್ನು ವೇಧಾದೀಕ್ಷೆಯ ಬಲದಿಂದ, ಶಿಷ್ಯನ ಭೋಗಾಂಗ (ಸೂಕ್ಷ್ಮ ಶರೀರ)ದಲ್ಲಿ ಪ್ರಾಣಲಿಂಗವನ್ನು ಮಂತ್ರದೀಕ್ಷಾ ಬಲದಿಂದ ಮತ್ತು ಶಿಷ್ಯನ ತ್ಯಾಗಾಂಗ (ಸ್ಥೂಲ ಶರೀರ)ದಲ್ಲಿ ಇಷ್ಟಲಿಂಗವನ್ನು ಕ್ರಿಯಾದೀಕ್ಷೆಯ ಬಲದಿಂದ ಸಂಬಂಧ ಮಾಡುವನು. ॥ ೧೫-೧೬ ॥

योगांगमात्मसंगत्वात्कारणांगमितीरितम् ।
भोगांगमन्तरंगत्वात्सूक्ष्मांगमिति संमतम् ।
त्यागांगं बहिरंगत्वात्स्थूलांगमिति कीर्तितम् ॥ १७ ॥
विश्वो जाग्रदवस्थायां स्वप्नाख्यायां तु तैजसः ।
प्राज्ञः सुषुप्त्यवस्थायां लिंगत्रयमुपासते ॥ १८ ॥
उपासनैव संयोगः संयोगो द्वैतसंलयः ।
द्वैतस्य विलयश्चैव निवृत्तिः परिकीर्तिता ॥ १९ ॥
निवृत्तिरेव विश्रांतिर्विश्रान्तिः परमं सुखम् ।
एवं लिंगांगसंयोगविधिना स्वात्मनि स्थिता ॥ २० ॥
बीजरूपा पराशक्तिः प्ररोहति समन्ततः ।
आत्मा क्षेत्रं भवेच्छक्तिर्बीजं बीजी महेश्वरः ॥ २१ ॥

---

ಯೋಗಾಂಗವು ಆತ್ಮನ ಸಂಬಂಧವುಳ್ಳದ್ದಾದುದರಿಂದ (ಆತ್ಮನು ಯೋಗಾಂಗದಲ್ಲಿರುವದರಿಂದ) ಕಾರಣಾಂಗ ಎನಿಸಿಕೊಳ್ಳುತ್ತಿದೆ. ಭೋಗಾಂಗವು ಅಂತರಂಗವಾಗಿರುವದರಿಂದ (ಅಂತಃಕರಣ ಇಂದ್ರಿಯಾದಿಗಳಿಂದ ತಯಾರಾಗಿರುವದರಿಂದ) ಅದಕ್ಕೆ ಸೂಕ್ಷ್ಮಾಂಗವೆಂದು ಕರೆಯುತ್ತಾರೆ. ತ್ಯಾಗಾಂಗವು ಹೊರಗಿನ ಅಂಗವಾಗಿರುವದರಿಂದ ಸ್ಥೂಲಾಂಗವೆಂದು ಹೇಳಲ್ಪಟ್ಟಿದೆ. ॥ ೧೭ ॥ ಜಾಗ್ರದವಸ್ಥೆಯಲ್ಲಿ ವಿಶ್ವನೆಂಬ ಆತ್ಮನು, ಇಷ್ಟಲಿಂಗವನ್ನು, ಸ್ವಪ್ನಾವಸ್ಥೆಯಲ್ಲಿ ತೈಜಸನೆಂಬ ಹೆಸರುಳ್ಳ ಆತ್ಮನು ಪ್ರಾಣಲಿಂಗವನ್ನು ಮತ್ತು ಸುಷುಪ್ತಿ ಅವಸ್ಥೆಯಲ್ಲಿ ಪ್ರಾಜ್ಞನೆಂಬ ಹೆಸರುಳ್ಳ ಆತ್ಮನು ಭಾವಲಿಂಗವನ್ನು ಉಪಾಸನೆ ಮಾಡುವರು. ॥ ೧೮ ॥ ಉಪಾಸನೆ ಮಾಡುವದು ಎಂದರೆ ಲಿಂಗದೊಡನೆ ಸಂಯೋಗ ಹೊಂದುವದು. ಲಿಂಗಸಂಯೋಗವೆಂದರೆ ಲಿಂಗ ಬೇರೆ ನಾನು ಬೇರೆ ಎಂಬ ದ್ವೈತ ಭಾವ ಇಲ್ಲದಂತಾಗುವದು. ಈ ದ್ವೈತ ಭಾವದ ನಾಶವೇ ನಿವೃತ್ತಿ ಎನಿಸಿಕೊಳ್ಳುವದು. ॥ ೧೯ ॥ ನಿವೃತ್ತಿಯೇ ವಿಶ್ರಾಂತಿಯು ಈ ವಿಶ್ರಾಂತಿಯೇ ಆತ್ಯಂತಿಕ ಸುಖವು. ಈ ರೀತಿಯಾಗಿ ಲಿಂಗ ಮತ್ತು ಅಂಗ ಇವೆರಡರ ಸಂಯೋಗ ವಿಧಿಯಿಂದ ಆತ್ಮ ಸ್ವರೂಪದಲ್ಲಿರುವಂಥ ॥ ೨೦ ॥ ಬೀಜರೂಪವಾದ ಪರಾಶಕ್ತಿಯು ಎಲ್ಲ ಕಡೆಯಲ್ಲಿಯೂ ಹರಡುತ್ತದೆ. ಇಲ್ಲಿ ಆತ್ಮನು ಕ್ಷೇತ್ರವಾಗಿಯೂ, ಶಕ್ತಿಯು ಬೀಜವಾಗಿಯೂ, ಪರಮಾತ್ಮನು ಬೀಜದ ಒಡೆಯನಾಗಿಯೂ ಇರುವನು. ॥ ೨೧ ॥ ಆದು

तस्मात्क्षेत्रस्य वीजस्य वीजिनश्च कदाचन ।
वियोगो नेष्यते क्वापि सदा संयोग एव हि ॥ २२ ॥

इत्यादिना उक्तदीक्षात्रयमध्ये आद्यदीक्षाद्वयस्य कारणसूक्ष्मशरीरगतभावप्राणयोरुपदेशरूपेण कर्तुं योग्यत्वात्तु प्रवुद्धावस्थां विना न संघटते । क्रियादीक्षायास्तु रक्तरेतोत्पन्नत्वादत्यन्ताशुचिभूतस्थूलशरीरस्यैव क्रियासंस्कारेण पवित्रीकर्तव्यकत्वात्केवलाज्ञानबालावस्थायामेव सा, गर्भाष्टमे कृता दीक्षा मुख्येत्युपरितनवचनेन कर्तुं योग्या भवति ।

लिंगं तु त्रिविधं प्रोक्तं स्थूलं सूक्ष्मं परात्परम् ।
इष्टलिंगमिदं स्थूलं यद्वाह्यं धार्यते तनौ ॥ २३ ॥
प्राणलिंगं तु तत्सूक्ष्मं यदन्तर्भावनामयम् ।
परात्परं तु यत्प्रोक्तं तृप्तिलिंगं तदुच्यते ॥२४ ॥

---

ದರಿಂದ ಕ್ಷೇತ್ರ, ಬೀಜ ಮತ್ತು ಬೀಜದ ಒಡೆಯ ಈ ಮೂರರ ಸಂಯೋಗವೇ ಯಾವಾಗಲೂ ಇಷ್ಟವಾದುದಲ್ಲದೇ ವಿಯೋಗವು ಯಾವ ರೀತಿಯಿಂದಲೂ ಇಷ್ಟವಾದುದಲ್ಲ. ॥ ೨೨ ॥ ಇವೇ ಮೊದಲಾದ ಪ್ರಮಾಣ ವಾಕ್ಯದಿಂದ ಪೂರ್ವದಲ್ಲಿ ಹೇಳಿದ ಮೂರು ವಿಧ ದೀಕ್ಷೆಗಳ ಮಧ್ಯದಲ್ಲಿ ಮೊದಲಿನ ಎರಡು ದೀಕ್ಷೆಗಳು ಕಾರಣ ಮತ್ತು ಸೂಕ್ಷ್ಮ ಶರೀರಗಳಲ್ಲಿರುವ ಭಾವ ಮತ್ತು ಪ್ರಾಣ ಎಂಬ ಲಿಂಗಗಳಿಗೆ ಉಪದೇಶ ರೂಪವಾಗಿ ಮಾಡಲಿಕ್ಕೆ ಯೋಗ್ಯಗಳಾಗಿರುತ್ತವೆ. ಆದುದರಿಂದ ಈ ವಿಧವಾದ ಉಪದೇಶವು ಪ್ರೌಢಾವಸ್ಥೆಯಿಲ್ಲದೆ ಘಟಿಸುವದಿಲ್ಲ. ಕ್ರಿಯಾದೀಕ್ಷೆಯು ಹೀಗೆ ಇರುವದಿಲ್ಲ ಏಕೆಂದರೆ ಆ ಕ್ರಿಯಾದೀಕ್ಷೆಯು ಮಾತಾಪಿತೃಗಳ ರೇತೋರಕ್ತದಿಂದ ಉತ್ಪನ್ನವಾದ ಅತ್ಯಂತ ಅಶುಚಿಯಾದ ಸ್ಥೂಲ ಶರೀರಕ್ಕೆ ಮಾಡುವಂಥಾದ್ದಾಗಿರುವದರಿಂದ ಶರೀರದ ಪಾವಿತ್ರ್ಯತೆಗಾಗಿ ಮಾಡಬೇಕಾದುದರಿಂದ ಅಜ್ಞಾನಾವಸ್ಥೆಯಲ್ಲಿಯೂ, ಗರ್ಭದ ಆನೆಯ ವರ್ಷದಲ್ಲಿ ಮಾಡಿದ ದೀಕ್ಷೆಯು ಮುಖ್ಯವಾದುದೆಂದು ಮೇಲೆ ಹೇಳಿದ ಮಾತಿನಿಂದ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ. ಲಿಂಗವು ಸ್ಥೂಲ, ಸೂಕ್ಷ್ಮ, ಪರಾತ್ಪರ (ಕಾರಣ) ಎಂದು ಮೂರು ವಿಧವಾಗಿರುತ್ತದೆ. ಶರೀರದ ಮೇಲೆ ಧರಿಸುವ ಇಷ್ಟಲಿಂಗವು ಸ್ಥೂಲವೆನಿಸಿಕೊಳ್ಳುತ್ತದೆ. ॥ ೨೩ ॥ ಅಂತರಂಗದಲ್ಲಿ ಭಾವನಾರೂಪವಾದ ಪ್ರಾಣಲಿಂಗವು ಸೂಕ್ಷ್ಮವೆನಿಸಿಕೊಳ್ಳುವದು ಮತ್ತು ತೃಪ್ತಿ ಲಿಂಗವೆಂದು

अस्मिन् श्लोके क्रमेण कथितलिंगत्रयस्य ज्ञानं दीक्षात्रयेणैव भवति नान्यथा । अतः क्रियादीक्षा सप्रपंचं निरूप्यते ।

शुभमासे शुभतिथौ शुभकाले शुभेऽहनि ।
विभूतिं शिवभक्तेभ्यो दत्वा तांबूलपूर्वकम् ॥ २५ ॥

यथाविधि यथायोगं शिष्यमानीय देशिकः ।
स्नातं शुक्लांबरधरं दन्तधावनपूर्वकम् ॥ २६ ॥

मण्डले स्थापयेच्छिष्यं प्राङ्मुखं गुरुरुदङ्मुखः ।
शिवस्य नाम संकीर्त्य चिंतनं चापि कारयेत् ॥ २७ ॥

विभूतिपट्टं कृत्वाग्रे यथास्थानं यथाविधि ।
पञ्चब्रह्ममयैस्तत्र स्थापितैः कलशोदकैः ।
आचार्यः सह ऋत्विग्भिस्त्रिवारमभिषिंचयेत् ॥ २८ ॥

---

ಯಾವದಕ್ಕೆ ಹೇಳುವರೋ ಅದು ಪರಾತ್ಪರ (ಕಾರಣ) ಲಿಂಗವೆನಿಸಿಕೊಳ್ಳುವದು. ॥೨೪॥ ಈ ಶ್ಲೋಕದಲ್ಲಿ ಕ್ರಮದಿಂದ ಹೇಳಿದ ಮೂರು ಲಿಂಗಗಳ ಜ್ಞಾನವು ಮೂರು ವಿಧ ದೀಕ್ಷೆಯಿಂದಲೇ ಆಗುತ್ತದೆ. ಬೇರೆ ರೀತಿಯಿಂದ ಆಗಲು ಶಕ್ಯವಿಲ್ಲ ಆದುದರಿಂದ ಕ್ರಿಯಾದೀಕ್ಷೆಯು ವಿಸ್ತಾರವಾಗಿ ನಿರೂಪಿಸಲ್ಪಡುತ್ತಿದೆ. ಶುಭಮಾಸ, ಶುಭತಿಥಿ, ಶುಭವಾರ, ಶುಭಕಾಲ (ಲಗ್ನ) ಇದ್ದ ಸಮಯದಲ್ಲಿ ಶಿವಭಕ್ತಿ ಸಂಪನ್ನರಾದ ಭಕ್ತ ಮಾಹೇಶ್ವರರಿಗೆ ತಾಂಬೂಲ ಮತ್ತು ವಿಭೂತಿಯನ್ನು ಕೊಟ್ಟು ಗುರುವು ದೀಕ್ಷಾ ಕಾರ್ಯವನ್ನು ಪ್ರಾರಂಭಿಸಬೇಕು. ॥ ೨೫ ॥ ದೀಕ್ಷೆಯಾಗುವ ವಟುವನ್ನು ದಂತ ಧಾವನ ಪೂರ್ವಕವಾಗಿ ಸ್ನಾನ ಮಾಡಿಸಿ ಬಿಳೀ ಬಟ್ಟೆಗಳನ್ನು ಧರಿಸಿ ವಿಧಾನಪೂರ್ವಕ ಯೋಗ್ಯ ರೀತಿಯಿಂದ ಅವನನ್ನು ಬರಮಾಡಿಕೊಂಡು ॥ ೨೬ ॥ ಮಂಡಲದ ಮೇಲೆ ಶಿಷ್ಯನನ್ನು ಪೂರ್ವಾಭಿಮುಖವಾಗಿ ಕೂಡ್ರಿಸಬೇಕು. ಗುರುವು ಉತ್ತರಾಭಿಮುಖನಾಗಿ ಕೂತು ಶಿಷ್ಯನಿಗೆ ಶಿವನ ನಾಮೋಚ್ಚಾರವನ್ನು ಶಿವಧ್ಯಾನವನ್ನು ಮಾಡಲಿಕ್ಕೆ ತಿಳಿಸ ಬೇಕು. ಮೊದಲಿಗೆ ಆಯಾಯ ಸ್ಥಾನಗಳಲ್ಲಿ ವಿಧಿಪೂರ್ವಕವಾಗಿ ವಿಭೂತಿಯನ್ನು ಧರಿಸಿ ಅನಂತರ ಮೊದಲು ಸ್ಥಾಪಿಸಿದ ಪಂಚಬ್ರಹ್ಮಸ್ವರೂಪಗಳಾದ ಪಂಚಕಲಶಗಳ ಉದಕಗಳಿಂದ ಆಚಾರ್ಯನು ಋತ್ವಿಜರೊಡನೆ ಶಿಷ್ಯನಿಗೆ ಸಿಂಪಡಿಸಬೇಕು. ॥ ೨೮ ॥

ततो भूतशुद्धि पापपुरुषदहन भूतप्रविलापादिभिः संस्कारैर्मांसपिण्डं वारयित्वा मन्त्रपिंडं कर्तुं मन्त्रोपदेशो निगद्यते ।

अभिषिंच्य गुरुः शिष्यमासीनं पुरतः शुचिम् ।
ततः पञ्चाक्षरीं शैवीं संसारभयतारिणीम् ॥ २९ ॥
तस्य दक्षिणकर्णे तु निगूढमपि कीर्तयेत् ।
छन्दोरूपं ऋषींश्चापि देवतां न्यासपद्धतिम् ॥ ३० ॥

आज्ञाचक्रस्थितं ॐकारबीजरूपं महालिंगं करकमलं प्रतिदातुं आधारादिचक्रस्थ नकारादिबीजाक्षराणि आचारादिलिंगानि शिवाग-मोक्तप्रकारेणोपदेशं कुर्यादिति श्लोकार्थः ।

अथ लिंगधारणविधानं प्रतिपाद्यते

सुप्तावस्थास्थिते अतएव गुरुणा पुनर्दीक्षासमये स्वकर-कमलपूजिते तस्मिन् लिङ्गे शिवकलाप्रतिष्ठा निरूप्यते । सर्वलक्षण-

---

ಅನಂತರ ಭೂತಶುದ್ಧಿ, ಪಾಪಪುರುಷದಹನ, ಭೂತಪ್ರವಿಳಾಪ ಇತ್ಯಾದಿ ಸಂಸ್ಕಾರ ಗಳಿಂದ ಶಿಷ್ಯನ ಮಾಂಸಪಿಂಡವನ್ನು ಹೋಗಲಾಡಿಸಿ ಮಂತ್ರಪಿಂಡವನ್ನು ಮಾಡುವದಕ್ಕಾಗಿ ಮಂತ್ರೋಪದೇಶವು ಮಾಡಲ್ಪಡತಕ್ಕದ್ದು.. ಗುರುವು ತನ್ನ ಮುಂದೆ ಪವಿತ್ರ ಪಾಣಿಯಾಗಿ ಕೂತಿರುವ ಶಿಷ್ಯನಿಗೆ ಅಭಿಷೇಕ ಮಾಡಿ ಸಂಸಾರ ಭಯವನ್ನು ಹೋಗಲಾಡಿಸತಕ್ಕಂಥ ಶಿವಪಂಚಾಕ್ಷರೀ ಮಂತ್ರವನ್ನು ಶಿಷ್ಯನ ಬಲಗಿವಿಯಲ್ಲಿ ಗುಪ್ತವಾಗಿ ಹೇಳಬೇಕು. ಆ ಪಂಚಾಕ್ಷರೀ ಮಂತ್ರದ ಋಷಿ, ಛಂದಸ್ಸು, ದೇವತಾ ಮೊದಲಾದ ಪಲ್ಲವಗಳನ್ನು ಮತ್ತು ನ್ಯಾಸ ಮಾಡುವ ಪದ್ಧತಿಯನ್ನು ತಿಳಿಸಿ ಕೊಡಬೇಕು. ॥ ೨೯–೩೦ ॥

ಸಾರಾಂಶ:— ಆಜ್ಞಾ ಚಕ್ರದಲ್ಲಿರುವ ಓಂಕಾರ ಬೀಜರೂಪ, ಮಹಾಲಿಂಗ ವನ್ನು ಕರಕಮಲಕ್ಕೆ ತಂದು ಕೊಡುವದಕ್ಕಾಗಿ ಆಧಾರ ಮೊದಲಾದ ಚಕ್ರಗಳಲ್ಲಿ ಇರುವ ನಕಾರಾದಿ ಬೀಜಾಕ್ಷರಗಳನ್ನು ದಳಗಳನ್ನೂ ಆಚಾರಾದಿ ಲಿಂಗಗಳನ್ನೂ ಶಿವಾಗಮಗಳಲ್ಲಿ ಹೇಳಿದ ಪ್ರಕಾರ ಎಲ್ಲವನ್ನೂ ಉಪದೇಶ ಮಾಡಬೇಕು. ಲಿಂಗಧಾರಣ ವಿಧಾನವೂ ಹೇಳಲ್ಪಡುವದು. ಮಗುವು ಜನಿಸಿದ ಕೂಡಲೇ ಧಾರಣ ಮಾಡಿದ ಲಿಂಗವು ಸುಪ್ತಾವಸ್ಥೆಯಲ್ಲಿರುವದರಿಂದ ಗುರುವು ದೀಕ್ಷಾ ಸಮಯದಲ್ಲಿ ಆ ಲಿಂಗವನ್ನು ತನ್ನ ಕರಕಮಲದಲ್ಲಿ ಪೂಜಿಸಿ ಅದರಲ್ಲಿ ಮತ್ತೊಮ್ಮೆ ಶಿವಕಲಾ ಪ್ರತಿಷ್ಠೆಯನ್ನು ಮಾಡ

सम्पन्ने तस्मिन् लिङ्गे विशोधिते ।
जातकर्माधिसुप्ते च पुनर्गंधादिपूजिते ।
मन्त्रपूते कलां शैवीं योजयेद्विधिना गुरुः ॥ ३१ ॥

शिल्पशास्त्रोक्तसकललक्षणयुक्ते जातकर्मणि सुप्तावस्थास्थिते पुनः पञ्चामृताभिषिक्ते श्रीरुद्रमध्यगतपञ्चाक्षरमंत्रपवित्रे करपीठ-स्थलिङ्गे शिष्यमस्तकस्थितजीवकलां तत्रत्यचिन्मयशिवकलां च विध्युक्तमार्गेण गुरुर्योजयेदित्यस्य श्लोकस्यार्थः। पश्चाल्लिङ्गप्राणयोः सामरस्यं कृत्वा शिष्यकरकमले शिवलिङ्गं स्थापयेदिति निरूप्यते।

शिष्यस्य प्राणमादाय लिङ्गे तत्र निधापयेत् ।
तल्लिङ्गं तस्य तु प्राणे स्थापयेदेकभावतः ।
एवं कृत्वा गुरुर्लिंगं शिष्यहस्ते निधापयेत् ॥ ३२ ॥

---

ಬೇಕೆಂದು ನಿರೂಪಿಸಲ್ಪಡುತ್ತಿದೆ. ಪೂರ್ವದಲ್ಲಿ ಶುದ್ಧ ಮಾಡಲ್ಪಟ್ಟ ಲಿಂಗದ ಎಲ್ಲಾ ಲಕ್ಷಣಗಳಿಂದ ಕೂಡಿದಂಥ ಜಾತಕರ್ಮ ಸಂಸ್ಕಾರವಾದಂದಿನಿಂದ ನಿದ್ರಾವಸ್ಥೆಯಲ್ಲಿರುವ ಆ ಲಿಂಗವನ್ನು ಗುರುವು ತನ್ನ ಕರದಲ್ಲಿ ಗಂಧಾದಿಗಳಿಂದ ಪೂಜಿಸಿ ಮಂತ್ರದಿಂದ ಪವಿತ್ರವಾದ ಆಲಿಂಗದಲ್ಲಿ ಶಿವಕಲೆಯಃನ್ನು ವಿಧಾನಪೂರ್ವಕವಾಗಿ ಸಂಬಂಧ ಮಾಡಬೇಕು. ॥ ೩೧ ॥

ಸಾರಾಂಶ:— ಶಿಲ್ಪಶಾಸ್ತ್ರದಲ್ಲಿ ಹೇಳಿದ ಎಲ್ಲ ಲಕ್ಷಣಗಳಿಂದ ಕೂಡಿಕೊಂಡಂತಹ ಜಾತಕರ್ಮ ಆದಂದಿನಿಂದ ಇಂದಿನ ವರೆಗೆ ನಿದ್ರಾವಸ್ಥೆಯಲ್ಲಿದ್ದ ಆ ಲಿಂಗವನ್ನು ಪುನಃ ಪಂಚಾಮೃತಾದಿಗಳಿಂದ ಅಭಿಷೇಕ ಮಾಡಿ ಷಡಧ್ವ ಶೋಧನಾದಿಗಳಿಂದ ಪವಿತ್ರ ಮಾಡಿದ ತನ್ನ ಅಂಗೈಯಲ್ಲಿರುವ ಲಿಂಗದಲ್ಲಿ ಗುರುವು ಶಿಷ್ಯನ ಮಸ್ತಕದಲ್ಲಿರುವ ಜೀವ ಕಲೆಯನ್ನು ಮತ್ತು ಆ ಮಸ್ತಕದಲ್ಲಿರುವ ಚಿದ್ರೂಪವಾದ ಶಿವಕಲೆಯನ್ನು ವಿಧಾನ ಪೂರ್ವಕವಾಗಿ ಸಂಬಂಧ ಮಾಡಬೇಕೆಂಬುದೇ ಸಾರವು. ಈ ರೀತಿಯಾಗಿ ಲಿಂಗ ಪ್ರಾಣಗಳ ಸಾಮರಸ್ಯವನ್ನು ಮಾಡಿ ಶಿಷ್ಯನ ಕರಕಮಲದಲ್ಲಿ ಆ ಲಿಂಗವನ್ನು ಸ್ಥಾಪಿಸ ಬೇಕು ಎಂಬುದನ್ನು ಹೇಳುವನು. ಹೇಗಂದರೆ– ಶಿಷ್ಯನ ಪ್ರಾಣವನ್ನು ತಂದು ಲಿಂಗದಲ್ಲಿ ಸ್ಥಾಪಿಸಬೇಕು. ಆ ಲಿಂಗವನ್ನು ಶಿಷ್ಯನ ಪ್ರಾಣದಲ್ಲಿ ಸ್ಥಾಪಿಸಬೇಕು. ಈ ಪ್ರಕಾರ ಅವೆರಡರ (ಲಿಂಗ ಪ್ರಾಣಗಳ) ಸಾಮರಸ್ಯವನ್ನು ಮಾಡಿ ಗುರುವು ಆ ಲಿಂಗವನ್ನು ಶಿಷ್ಯನ ಕೈಯಲ್ಲಿ ಸ್ಥಾಪಿಸಬೇಕು. ॥ ೩೨ ॥ ಸ್ಥಾಪಿಸಿದ ಬಳಿಕ

ततः शिष्यं प्रति आज्ञा प्रतिपाद्यते ।
प्राणवद्धारणीयं तु प्राणलिङ्गमिदं तव ।
कदाचित्कुत्रचिद्वापि न वियोजय देहतः ॥ ३३ ॥
यदि प्रमादात्पतिते लिङ्गे देहान्महीतले ।
प्राणान् विमुन्च सहसा प्राप्तये मोक्षसंपदः ॥ ३४ ॥
इति संबोधितः शिष्यो गुरुणा शास्त्रवेदिना ।
धारयेच्छांकरं लिङ्गं शरीरे प्राणयोगतः ॥ ३५ ॥
ततो दीक्षालिङ्गधारणेन सर्वपापक्षय इत्युच्यते ।
ब्रह्मोपनिषदि । यदक्षरं परं ब्रह्म तत्सूत्रमिति धारयेत् ।
धारणात्तस्य सूत्रस्य नोच्छिष्टो नाशुचिर्भवेत् ॥ ३६ ॥
तथा योगसारे । संस्यूतत्वात्समस्तेषु वस्तुष्वपि तु संततम् ।
सूचनात्परमेशस्य सूत्रं लिङ्गमितीरितम् ॥ ३७ ॥

---

ಶಿಷ್ಯನಿಗೆ ಈ ರೀತಿಯಾಗಿ ಬೋಧ ಮಾಡಬೇಕು. ಎಲೈ ಶಿಷ್ಯನೇ ಇದು ನಿನ್ನ ಪ್ರಾಣ ಲಿಂಗವು ನಿನ್ನ ಪ್ರಾಣದಂತೆ ಇದನ್ನು ಧರಿಸಿಕೊಂಡಿರಬೇಕು. ಎಂಥ ಪ್ರಸಂಗದಲ್ಲಿಯೂ, ಯಾವ ಕಾಲದಲ್ಲಿಯೂ, ಯಾವ ಸಮಯದಲ್ಲಿಯೂ ಈ ಲಿಂಗವನ್ನು ನಿನ್ನ ಶರೀರ ದಿಂದ ಅಗಲಿಸಬಾರದು. ॥ ೩೩ ॥ ಅಕಸ್ಮಾತ್ ಪ್ರಮಾದದಿಂದ ಈ ಲಿಂಗವು ನಿನ್ನ ಶರೀರದಿಂದ ನೆಲದ ಮೇಲೆ ಬಿದ್ದರೆ ಆ ಕೂಡಲೇ ಮೋಕ್ಷ ಸಿದ್ಧಿಗಾಗಿ ನೀನು ನಿನ್ನ ಪ್ರಾಣವನ್ನು ಬಿಟ್ಟು ಬಿಡಬೇಕು. ॥ ೩೪ ॥ ಈ ಪ್ರಕಾರ ಶಾಸ್ತ್ರವನ್ನು ಬಲ್ಲ ಗುರುವಿ ನಿಂದ ಆಜ್ಞಾ ಮಾಡಲ್ಪಟ್ಟ ಶಿಷ್ಯನು ಆ ಶಿವಲಿಂಗವನ್ನು ತನ್ನ ಶರೀರದ ಮೇಲೆ ಪ್ರಾಣದಂತೆ ಧರಿಸಿಕೊಂಡಿರಬೇಕು. ॥ ೩೫ ॥ ಅನಂತರ ದೀಕ್ಷಾಪೂರ್ವಕ ಲಿಂಗ ಧಾರಣದಿಂದ ಸರ್ವವಿಧವಾದ ಪಾಪಗಳ ನಾಶವಾಗುವದೆಂದು ಹೇಳುವನು. ಬ್ರಹ್ಮೋಪನಿಷತ್ತಿನಲ್ಲಿ ನಾಶರಹಿತವಾದಂಥಾ ಯಾವ ಪರಬ್ರಹ್ಮವುಂಟೋ ಅದೇ ಸೂತ್ರವೆನಿಸಿಕೊಳ್ಳುವದು. ಅದನ್ನು ಧರಿಸಿಕೊಳ್ಳಬೇಕು. ಆ ಸೂತ್ರದ ಧಾರಣದಿಂದ ಮಾನವನು ಅಪವಿತ್ರನೂ ಮತ್ತು ಉಚ್ಛಿಷ್ಟಾದಿ ದೋಷವುಳ್ಳವನೂ ಆಗುವ ದಿಲ್ಲ. ॥ ೩೬ ॥ ಇದೇ ರೀತಿಯಾಗಿ ಯೋಗಸಾರ ಗ್ರಂಥದಲ್ಲಿ ಎಲ್ಲ ಪದಾರ್ಥಗಳಲ್ಲಿ ಯಾವಾಗಲೂ ಸೇರಿಕೊಂಡಿರುವದರಿಂದ ಮತ್ತು ಪರಮಾತ್ಮನನ್ನು ಸೂಚಿಸು ವದರಿಂದ ಸೂತ್ರವೆಂದರೆ ಲಿಂಗವೆಂದು ಹೇಳಲ್ಪಟ್ಟದೆ. ॥ ೩೭ ॥ ಶಂಕರ ಸಂಹಿತೆಯಲ್ಲಿ

शङ्करसंहितायाम्। स्वप्नकाले कृतं पापं ब्रह्महत्यादिकं च यत्।
यथा प्रबोधसमये तन्मिथ्या भवति स्फुटम् ॥ ३८ ॥
तथैव सुकृतं पापं लिङ्गधारणतः पुरा।
यदस्ति तल्लयं याति लिङ्गधारणतः परम् ॥ ३९ ॥
बृहत्कालोत्तरे। व्रतानि दुश्चराणीह तपांस्युग्राणि यानि च।
न्यूनानि तानि सर्वाणि दीक्षालिङ्गस्य धारणात् ॥ ४० ॥
अतो दीक्षालिङ्गं धारयेत्। ततोऽग्रे सर्वं यथाचारं कार्यम्।
एवं वीरशैवदीक्षाविधिः निरूपितः।
वीरमाहेश्वरदीक्षाभेदो निरूप्यते। सुप्रभेदागमे।

ईश्वर उवाच

पञ्चगोत्रसमुद्भूताः पञ्चसूत्रानुसारिणः

---

ಸ್ವಪ್ನಕಾಲದಲ್ಲಿ ಮಾಡಿದ ಬ್ರಹ್ಮಹತ್ಯ ಮೊದಲಾದ ಪಾಪವು ಯಾವ ರೀತಿಯಾಗಿ ಜಾಗ್ರತಾವಸ್ಥೆಯಲ್ಲಿ ಸಂಪೂರ್ಣ ಸುಳ್ಳಾಗಿರುತ್ತದೆಯೋ ॥ ೩೮ ॥ ಅದೇ ಪ್ರಕಾರ ವಾಗಿ ಲಿಂಗಧಾರಣವಾಗುವದಕ್ಕಿಂತಲೂ ಮೊದಲಿಗೆ ಮಾಡಿದ ಪಾಪದ ರಾಶಿಯು ಯಾವದಿರುವದೋ ಅದೆಲ್ಲವೂ ಲಿಂಗಧಾರಣವಾದ ನಂತರ ಸಂಪೂರ್ಣ ನಾಶವಾಗಿ ಹೋಗುವದು. ॥ ೩೯ ॥

ಬೃಹತ್ ಕಾಲೋತ್ತರ ಗ್ರಂಥದಲ್ಲಿ ಈ ಪ್ರಪಂಚದಲ್ಲಿ ಮಾಡಲಿಕ್ಕೆ ಅಸಾಧ್ಯ ಗಳಾದ ವ್ರತಗಳು ಯಾವವುಂಟೋ ಮತ್ತು ಉಗ್ರವಾದ ತಪಸ್ಸುಗಳು ಯಾವವುಂಟೋ ಅವೆಲ್ಲವುಗಳು ದೀಕ್ಷಾಪೂರ್ವಕ ಲಿಂಗಧಾರಣ ಮಾಡಿಕೊಳ್ಳುವದಕ್ಕಿಂತಲೂ ಬಹಳ ಕಡಿಮೆಯ ಯೋಗ್ಯತೆಯುಳ್ಳವುಗಳು ॥ ೪೦ ॥ ಆದುದರಿಂದ ದೀಕ್ಷಾಪೂರ್ವಕವಾಗಿ ಲಿಂಗಧಾರಣವನ್ನು ಮಾಡಿಕೊಳ್ಳಬೇಕು. ಲಿಂಗಧಾರಣ ಮಾಡಿಕೊಂಡ ನಂತರ ಹಿಂದೆ ಹೇಳಿದ ಪ್ರಕಾರ ಎಲ್ಲಾ ಆಚರಣೆಗಳನ್ನು ಮಾಡಬೇಕು. ಈ ರೀತಿಯಾಗಿ ವೀರಶೈವ ದೀಕ್ಷಾವಿಧಿಯು ಹೇಳಲ್ಪಟ್ಟಿರುವದು ಮುಂದೆ

ವೀರಮಾಹೇಶ್ವರ ದೀಕ್ಷೆಯ ಭೇದವು ನಿರೂಪಿಸಲ್ಪಡುವದು. ಸುಪ್ರಭೇದಾಗಮ ದಲ್ಲಿ ಪರಮಾತ್ಮನು ಹೇಳಿರುವನು. ಐದು ಜನ ಮಹಾಚಾರ್ಯರ ಗೋತ್ರಗಳಲ್ಲಿ

गुरुस्थलसमाख्याता गुरवः सर्वलिङ्गिनाम् ।
तेषां स्थितिं प्रवक्ष्यामि शृणु देवि समाहिता ॥ ४१ ॥
न ब्रह्मचर्यनियमो न वा गार्हस्थ्यमुत्तमम् ।
वानेप्रस्थाश्रमो नैव नैव सन्यासलक्षणम् ॥ ४२ ॥
अतिवर्णाश्रमी लिङ्गी ज्ञानकाण्डी भवेद्गुरुः ।
तत्रापि कर्म कुर्वीत ज्ञानैकफलसाधनम् ॥ ४३ ॥
जपस्तपोऽर्चनं ध्यानं ज्ञानं चेति समासतः ।
एवं पञ्चविधान्यज्ञान्कुर्वीत नियतेंद्रियः ॥ ४४ ॥
अतो विशिष्टवीरेति वीरमाहेश्वरेति च ।
पर्यायो वर्तते देवि जङ्गमस्य महात्मनः ॥ ४५ ॥
माहेश्वरस्थलप्रोक्तलक्षणैर्युतशिष्यकम् ।

---

ಹುಟ್ಟಿದಂಥಾ ಐದು ಸೂತ್ರಗಳನ್ನು ಅನುಸರಿಸುವಂಥಾ ಗುರುಸ್ಥಲದವರು ಎಂದು ಪ್ರಸಿದ್ಧರಾದ ಮಠಸ್ಥರು ಎಲ್ಲ ಲಿಂಗಾಯತರಿಗೆ ಗುರುಗಳಾಗಿರುವರು. ಎಲೈ ದೇವಿಯೇ ಈ ಗುರುಸ್ಥಲದ ಮಾಹೇಶ್ವರರ ಸ್ಥಿತಿಯನ್ನು ಹೇಳುವೆನು ಸಾವಧಾನಳಾಗಿ ಕೇಳು. ॥ ೪೧ ॥ ಇವರಿಗೆ ಬ್ರಹ್ಮಚರ್ಯಾಶ್ರಮದ ನಿಯಮವು, ಉತ್ತಮವಾದ ಗೃಹಸ್ಥಾಶ್ರಮವೂ, ವಾನಪ್ರಸ್ಥಾಶ್ರಮವೂ ಮತ್ತು ಸನ್ಯಾಸಾಶ್ರಮವೂ ಇವು ಯಾವುಗಳ ಲಕ್ಷಣ, ನೇಮಾದಿಗಳಿರುವದಿಲ್ಲ. ॥ ೪೨ ॥ ಈ ಮಾಹೇಶ್ವರನಾದ ಗುರುವು ಅತಿವರ್ಣಾಶ್ರಮಿಯೂ, ಲಿಂಗಧಾರಿಯೂ ಆಗಿ ಜ್ಞಾನ ಕಾಂಡಿಯೆನಿಸಿ ಕೊಳ್ಳುವನು. ಜ್ಞಾನಕಾಂಡದಲ್ಲಿ ಜ್ಞಾನರೂಪ ಫಲವನ್ನು ಕೊಡತಕ್ಕಂತಹ ಕರ್ಮವನ್ನು ಮಾಡಬೇಕು. ॥ ೪೩ ॥ ಇಂದ್ರಿಯಗಳನ್ನು ತನ್ನ ಸ್ವಾಧೀನದಲ್ಲಿಟ್ಟು ಕೊಂಡು ಮಾಹೇಶ್ವರನಾದ ಈ ಗುರುವು ಜಪ, ತಪ, ಪೂಜಾ, ಧ್ಯಾನ, ಜ್ಞಾನ, ಎಂಬ ಐದು ವಿಧವಾದ ಯಜ್ಞಗಳನ್ನು ಮಾಡಬೇಕು. ॥ ೪೪ ॥ ಎಲೈ ದೇವಿಯೇ ಈ ಮಹಾನುಭಾವನಿಗೆ ವಿಶಿಷ್ಟ ವೀರನೆಂದೂ, ವೀರಮಾಹೇಶ್ವರನೆಂದು, ಜಂಗಮನೆಂದು ಪರ್ಯಾಯ ನಾಮಗಳಿರುತ್ತವೆ. ॥ ೪೫ ॥ ಮಾಹೇಶ್ವರ ಸ್ಥಲದಲ್ಲಿ ಹೇಳಿದ ಲಕ್ಷಣ ಗಳು ಯಾರಲ್ಲಿರುತ್ತವೆಯೋ ಅವರನ್ನು ಗುರುವು ಮೊದಲಿಗೆ ಬೆರಳು, ಉಗುರು,

गुरुरादौ परीक्षेत नखनेत्रादिलक्षणैः ।
पश्चात्तं योजयेद्देवि दीक्षया विधिपूर्वकम् ॥ ४६ ॥
दीयते लिङ्गसंबन्धः क्षीयते कर्मसंचयः ।
दीयते क्षीयते यस्माद्दीक्षेति परिकीर्तिता ॥ ४७ ॥
वीरशैवाभिधा दीक्षा वीरमाहेश्वराभिधा ।
एवं हि भिद्यते दीक्षा भक्तमाहेश्वरेषु च ॥ ४८ ॥
कलशान्पञ्च संस्थाप्य सद्योजातादिनामतः ।
शंखमुद्रान्वितः पूज्यो घनलिंगी च दक्षिणे ॥ ४९ ॥
अग्रतः पट्टबद्धं च चतुरो ऋत्विजानपि ।
संपूज्य दक्षिणां दत्वा सभाभ्यः शिवयोगिनाम् ॥ ५० ॥
गुरुर्गृहीत्वा तं बालं दीक्षितं सव्यपाणिना ।
सभां प्रदक्षिणीकृत्य साष्टांगं प्रणिपत्य च ॥ ५१ ॥

---

ಕಣ್ಣುಗಳು, ಕಿವಿ ಮೊದಲಾದ ಎಲ್ಲಾ ಅವಯುವಗಳನ್ನು ನ್ಯೂನವಾಗದೇ ಇರುವದನ್ನು ಪರೀಕ್ಷಿಸಿ ಅಂಥವರನ್ನು ದೀಕ್ಷಾ ಕಾರ್ಯದಲ್ಲಿ ವಿಧಿಪೂರ್ವಕವಾಗಿ ನಿಯೋಗಿಸಬೇಕು ||೪೬|| ಯಾವ ಕ್ರಿಯೆಯಿಂದ ಕರ್ಮಗಳ ಸಮೂಹವು ನಾಶಮಾಡಲ್ಪಡುತ್ತದೆಯೋ ಆ ಕ್ರಿಯೆಗೆ ದೀಕ್ಷಾ ಎಂದು ಹೆಸರು ||೪೭|| ಈ ದೀಕ್ಷೆಯು ವೀರಶೈವ ದೀಕ್ಷಾ ಮತ್ತು ವೀರಮಾಹೇಶ್ವರ ದೀಕ್ಷಾ ಎಂದು ಎರಡು ಪ್ರಕಾರವಾಗಿರುತ್ತದೆ. ಭಕ್ತವರ್ಗದವರಿಗೆ ಮಾಡುವ ದೀಕ್ಷೆಯು, ವೀರಶೈವ ದೀಕ್ಷೆ ಎನಿಸಿಕೊಳ್ಳುವದು. ಮಾಹೇಶ್ವರ ವರ್ಗದವರಿಗೆ ಮಾಡುವ ದೀಕ್ಷೆಯು, ಮಾಹೇಶ್ವರ ದೀಕ್ಷಾ (ಅಯ್ಯಾಚಾರ ಅಥವಾ ಜಂಗಮ ದೀಕ್ಷಾ) ಎನಿಸಿಕೊಳ್ಳುವದು.

ಸದ್ಯೋಜಾತ ಮೊದಲಾದ ಪಂಚಕಲಶಗಳನ್ನು ಸ್ಥಾಪನಾ ಮಾಡಿ ಶಂಖ ಮುದ್ರಾ ಮೊದಲಾದವುಗಳಿಂದ ಕೂಡಿಕೊಂಡಿರುವಂಥ ಪೂಜ್ಯನಾದಂಥಾ ಘನಲಿಂಗಿ ಆದ ಪಟ್ಟಾಧಿಕಾರಿಯು ದಕ್ಷಿಣ ದಿಕ್ಕಿನಲ್ಲಿ ಕೂಡ್ರಬೇಕು. || ೪೯ || ಸೂತ್ರದ ಮುಂದಿನ ಗುರುವು ದೀಕ್ಷೆಯಾಗುವ ವಟುವನ್ನು ಎಡಗೈಯಿಂದ ಹಿಡಿದುಕೊಂಡು ಬಂದು ಮೊದಲಿಗೆ ಪಟ್ಟಾಧಿಕಾರಿಯನ್ನು ನಂತರ ನಾಲ್ಕು ಜನ ಋತ್ವಿಜರನ್ನು ಪೂಜಿಸಿ ಅವರಿಗೆಕ್ಷಿಣೆಯನ್ನು ಕೊಟ್ಟು ಆ ಸಭೆಯಲ್ಲಿರುವ ಶಿವಯೋಗಿಗಳಿಗೆಲ್ಲಾ ದಕ್ಷಿಣೆ, ತಾಂಬೂಲವನ್ನು ಕೊಟ್ಟು ಸಭೆಗೆ ಪ್ರದಕ್ಷಿಣೆ ಮಾಡಿ ಪಟ್ಟಾಧಿಕಾರಿಗೆ ನಮಸ್ಕಾರ ಮಾಡಿದ ನಂತರ ಆ ಸಭೆಯಲ್ಲಿರುವ ಭಕ್ತರಿಗೂ ಮಾಹೇಶ್ವರರಿಗೂ ವಿಜ್ಞಾಪಿಸಿಕೊಂಡು ಅವರ ಅನುಮತಿಯಿಂದ ಆ ವಟುವನ್ನು ಆಸನದಲ್ಲಿ ಕೂಡ್ರಿಸ

गुरुर्विज्ञाप्य सर्वेषामनुमत्याऽऽसने विशेत् ।
स्वपादसंभवं शिष्यं स्वशाखोक्तविधानतः ॥ ५२ ॥
वीरमाहेश्वरीं दीक्षा कारयेदृत्विजैः सह ।
भिक्षापात्रं दण्डकाष्ठं कन्थां काषायवस्त्रकाम् ॥ ५३ ॥
दद्यात्कमण्डलुं चैव विभूतेर्घुण्टिकामपि ।
ततो भिक्षां चरेद्भक्त्या स्वशाखोक्तविधानतः ॥ ५४ ॥
दत्वा लिंगांगसंबन्धबोधशास्त्रं समादिशेत् ।
स्वासने सन्निवेश्याथ नमस्कुर्यात्स्वयं गुरुः ॥ ५५ ॥
एवं गुरुपदोद्भूता जङ्गमाः परिकीर्तिताः ।
योगिनीसहिताः केचित्केचिद्देशिकसंज्ञकाः ।

---

ಬೇಕು. ಅನಂತರ ಆ ಸೂತ್ರದ ಮರಿಯಾದ ಗುರುವು ತನ್ನ ಪಾದಕ್ಕೆ ಶರಣು ಬಂದ ವಟುವಿಗೆ ತನ್ನ ಶಾಖಾದಲ್ಲಿ ಹೇಳಿದ ಪ್ರಕಾರವಾಗಿ ॥ ೫೦-೫೩ ॥ ಋತ್ವಿಜರೊಡನೆ ಕೂಡಿಕೊಂಡ ಪಟ್ಟಾಧಿಕಾರಿಯಿಂದ ವೀರಮಾಹೇಶ್ವರ ದೀಕ್ಷೆಯನ್ನು ಮಾಡಿಸಬೇಕು. ಭಕ್ತವರ್ಗದವರಿಗೆ ಮಾಡುವ ವೀರಶೈವ ದೀಕ್ಷೆಯಲ್ಲಿ ಹೇಳಿದ ಎಲ್ಲಾ ಕಾರ್ಯ ಕಲಾಪ ಗಳನ್ನು ಮಾಹೇಶ್ವರ ವರ್ಗದವರಿಗೂ ಕ್ರಮವಾಗಿ ಮಾಡಿದ ಬಳಿಕ ಮಾಹೇಶ್ವರ ವರ್ಗದವರಿಗೆ ಮಾಡತಕ್ಕಂಥಾ ವಿಶೇಷ ಸಂಸ್ಕಾರಗಳನ್ನು ಮಾತ್ರ ಮುಂದೆ ಹೇಳಿರು ವನು. ಆ ವಿಶೇಷ ಸಂಸ್ಕಾರವೆಂದರೆ ಪಂಚಮುದ್ರಾ ಧಾರಣ ಮತ್ತು ಆಸನ (ಗದ್ದುಗೆ) ಪ್ರದಾನ ಇವುಗಳನ್ನು ಹೇಳುವನು. ಮಾಹೇಶ್ವರ ವಟುವಿಗೆ ಅವರವರ ಶಾಖೆಯಲ್ಲಿ ಹೇಳಿದಂತೆ ದಂಡ, ಭಿಕ್ಷಾಪಾತ್ರೆ, ಕಂಥಾ (ಕಪನಿ), ಕಮಂಡಲು, ಭಸ್ಮ ಘುಟಿಕಾ ಇವೇ ಪಂಚಮುದ್ರೆಗಳು ಇವುಗಳನ್ನು ಕೊಟ್ಟು ಅವರವರ ಶಾಖೆಯಲ್ಲಿ ಹೇಳಿದ ಪ್ರಕಾರ ಭಿಕ್ಷಾಟನವನ್ನು ಮಾಡಿಸಬೇಕು. ಪಟ್ಟಾಧಿಕಾರಿಯು ಆ ಮಾಹೇಶ್ವರ ವಟುವಿಗೆ ಲಿಂಗಾಂಗ ಸಂಬಂಧವಾದ ವಿಷಯವನ್ನೆಲ್ಲಾ ಉಪದೇಶ ಮಾಡಬೇಕು. ಅನಂತರ ಸೂತ್ರ ಮರಿಯಾದ ಗುರುವು ದೀಕ್ಷಿತನಾದ ಮಾಹೇಶ್ವರ ವಟುವನ್ನು ಗದ್ದಿಗೆ ಮೇಲೆ ಕೂಡ್ರಿಸಿ ಅವನಿಗೆ ಸಾಷ್ಟಾಂಗ ಹಾಕಿ (ನಮಸ್ಕಾರ ಮಾಡಿ) ಆತನಿಂದ ಕ್ರಿಯೆಯನ್ನು ಮಾಡಿಕೊಳ್ಳಬೇಕು. ಈ ಪ್ರಕಾರವಾಗಿ ಮಾಹೇಶ್ವರ ದೀಕ್ಷೆಯಿಂದ ಗುರುಕರೋದ್ಭವರಾದವರಿಗೆ ಜಂಗಮರು (ಅಯ್ಯನವರು) ಎಂದು ರೂಢಿ ಇರುತ್ತದೆ. ಮಾಹೇಶ್ವರ ದೀಕ್ಷಾ ಸಂಪನ್ನರಾದ ಈ ಜಂಗಮರಲ್ಲಿ ಕೆಲವರು ವಿವಾಹಿತರಾಗಿ ಗೃಹಸ್ಥರಾಗಿರುತ್ತಾರೆ. ಕೆಲವರು ದೇಶಿಕರಾಗಿರುತ್ತಾರೆ. ಕೆಲವರು ಚರಾಧಿಕಾರಿ ಹಾಗು

स्वेच्छाश्रमविहारास्ते लिङ्गभोगोपभोगिनः ॥ ५६ ॥

पञ्चमुद्राधारणविषये समन्त्रकं प्रमाणम् । वीरागमे ।

जटाधारणसंपन्नो धारयेत्पञ्चमुद्रिकाम् ।

अस्त्रेण प्रोक्षयेद्दण्डं कन्थां कवचमन्त्रतः ॥ ५७ ॥

पात्रं हृदयमन्त्रेण वामेन तु कमण्डलुम् ।

अग्निरित्यादिभिर्मन्त्रैः सद्योजातादिमन्त्रतः ॥ ५८ ॥

विभूतिघुटिकां प्रोक्ष्य भूत्या तन्त्रोक्तमार्गतः

पञ्चमुद्राः सुसंपूज्याः स्वस्य दक्षिणभासके ।

शिष्यमादाय मुद्रास्ता दद्यात्पञ्चाक्षरेण तु ॥ ५९ ॥

एतद्विस्तरस्तु बृहद्दीक्षाप्रयोगे द्रष्टव्यः ।

इति श्रीमद्वीरशैवसदाचारसंग्रहे वीरशैवदीक्षावीरमाहेश्वरदीक्षाविधिर्नामैकादशप्रकरणं समाप्तम् ।

---

ಪಟ್ಟಾಧಿಕಾರಿಗಳಾಗಿರುತ್ತಾರೆ. ಹೀಗೆ ಲಿಂಗ ಭೋಗೋಪಭೋಗಿಗಳಾದ ಈ ಮಾಹೇಶ್ವರರು ತಮತಮಗೆ ಇಷ್ಟವಾದ ಆಶ್ರಮದಲ್ಲಿ ಇರುತ್ತಿರುವರು. ॥ ೫೩–೫೬ ॥

ಪಂಚಮುದ್ರಾಧಾರಣ ವಿಷಯದಲ್ಲಿ ಮಂತ್ರಪೂರ್ವಕವಾದ ಪ್ರಮಾಣವು ವೀರಾಗಮದಲ್ಲಿ ಹೇಳಿದೆ. ಜಟಾಧಾರಣ ಮಾಡಿಕೊಂಡು ಪಂಚಮುದ್ರೆಗಳನ್ನು ಧರಿಸಿಕೊಳ್ಳಬೇಕು. ಆ ಮುದ್ರಾಧಾರಣ ಕಾಲದಲ್ಲಿ ಅಸ್ತ್ರಮಂತ್ರದಿಂದ ದಂಡವನ್ನು ಸಂಪ್ರೋಕ್ಷಣ ಮಾಡಿ ಕವಚ ಮಂತ್ರದಿಂದ ಕಪನಿಯನ್ನು ಸಂಪ್ರೋಕ್ಷಣ ಮಾಡಿ ವಾಮದೇವ ಮಂತ್ರದಿಂದ ಕಮಂಡಲವನ್ನು ಸಂಪ್ರೋಕ್ಷಣ ಮಾಡಿ ಅಗ್ನಿ ಇತ್ಯಾದಿ ಮಂತ್ರಗಳಿಂದ ಮತ್ತು ಸದ್ಯೋಜಾತಾದಿ ಮಂತ್ರಗಳಿಂದ ಭಸ್ಮಘುಟಿಕೆಯನ್ನು ಸಂಪ್ರೋಕ್ಷಣ ಮಾಡಿ ನಂತರ ಆಗಮದಲ್ಲಿ ಹೇಳಿದ ಪ್ರಕಾರ ಈ ಪಂಚಮುದ್ರೆಗಳನ್ನು ಗುರುವು ತನ್ನ ಬಲಭಾಗದಲ್ಲಿಟ್ಟುಕೊಂಡು ಪೂಜಿಸಿ ಶಿಷ್ಯನಿಗೆ ಆ ಪಂಚಮುದ್ರೆಗಳನ್ನು ಪಂಚಾಕ್ಷರೀ ಮಂತ್ರಪೂರ್ವಕವಾಗಿ ಕೊಡತಕ್ಕದ್ದು. ॥ ೫೭–೫೯ ॥

ಈ ದೀಕ್ಷಾಕ್ರಮದ ವಿಸ್ತಾರವು ಬೃಹದ್ದೀಕ್ಷಾ ಪ್ರಯೋಗವೆಂಬ ಗ್ರಂಥದಲ್ಲಿ ಹೇಳಲ್ಪಟ್ಟದೆ. ಅದನ್ನು ನೋಡಿಕೊಳ್ಳಬೇಕು. ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವದೀಕ್ಷಾ ಮತ್ತು ವೀರಮಾಹೇಶ್ವರದೀಕ್ಷಾ ವಿಧಿಯನ್ನು ಹೇಳುವಂಥಾ ಹನ್ನೊಂದನೆಯ ಪ್ರಕರಣದ ಪಂಡಿತ ಶ್ರೀ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

# ॥ अथ द्वादशप्रकरणम् ॥

## लघुदीक्षाप्रयोगः

देवालये मठे वापि देशिकस्य गृहेऽपि वा ।
मण्डपं कारयित्वा तु चतुरस्रं सुशोभितम् ॥ १ ॥
षोडशस्तंभसंयुक्तमथवा द्वादशैरपि ।
दर्भमूलसमायुक्तं शुभ्रवस्त्रैश्च शोभितम् ॥ २ ॥
घण्टातोरणसंयुक्तं पुष्पमालाविभूषितम् ।
चूतपल्लवसंयुक्तं गन्धपुष्पाक्षतैर्युतम् ॥ ३ ॥
पताकाध्वजसंयुक्तं शंखदुन्दुभिघोषितम् ।
वेदघोषसमायुक्तं मण्डपं कारयेद्बुधः ॥ ४ ॥
तत्र वेदिं कारयित्वा चतुरस्रां सुशोभनाम् ।
पद्माकृतिं वा तद्वेदिं वर्तुलाकारमेव वा ।
दर्पणोदरसंकाशां निम्नोन्नतविवर्जिताम् ॥ ५ ॥

---

# ಅಥ ಹನ್ನೆರಡನೆಯ ಪ್ರಕರಣವು

## — ಲಘುದೀಕ್ಷಾ ಪ್ರಯೋಗ —

ವೀರಶೈವ ಪ್ರಕಾಶಿಕೆಯಲ್ಲಿ ಶಿವಾಲಯ, ಮಠ, ಗುರುವಿನ ಸ್ಥಾನ ಇವುಗಳೊಂದರಲ್ಲಿ ಮಂಟಪವನ್ನು ಚೌಕಾಗಿ ಹದಿನಾರು ಕಂಬಗಳಿಂದ ಅಥವಾ ಹನ್ನೆರಡು ಕಂಬಗಳಿಂದ ಚನ್ನಾಗಿ ಶೋಭಿಸುವಂತೆ ರಚಿಸಬೇಕು. ಆ ಮಂಟಪಕ್ಕೆ ಸುತ್ತಲೂ ದರ್ಭೆಯನ್ನು ಬಿಳೇ ಅರಿವೆಯನ್ನು ಮತ್ತು ತೋರಣವನ್ನು ಕಟ್ಟಬೇಕು, ಅಲ್ಲಲ್ಲಿ ಘಂಟೆಗಳನ್ನು ಮಾವಿನ ತಳಿರನ್ನು ಕಟ್ಟಿ, ಗಂಧಾಕ್ಷತಾದಿಗಳಿಂದಲೂ ನಿಶಾನೆಗಳಿಂದಲೂ ಶೋಭಿಸುವಂತೆ ಮಾಡಬೇಕು. ಶಂಖ, ನಗಾರಿಗಳ ಶಬ್ದವು, ವೇದಘೋಷವು ನಡೆಯುತ್ತಿರಬೇಕು. ॥ ೧-೪ ॥ ಇಂತಹ ಮಂಟಪದಲ್ಲಿ ಚಚ್ಚೌಕವಾದ ಅಥವಾ ಕಮಲಾಕಾರವಾದ ಇಲ್ಲವೇ ದುಂಡಾಕಾರವಾದ ಕನ್ನಡಿಯ ಒಳಭಾಗದಂತೆ ತಗ್ಗು ದಿನ್ನೆಗಳಿಲ್ಲದೆ ಸಪಾಟಾದ ಒಂದು ವೇದಿಕೆ (ಜಗಲಿ)ಯನ್ನು ರಚಿಸಬೇಕು. ಅದರ ಮೇಲೆ

अपसर्पन्तु ये भूता ये भूता भुवि संस्थिताः ।
ये भूता विघ्नकर्तारस्ते गच्छन्तु शिवाज्ञया ॥ ६ ॥
इति मन्त्रेण भूशुद्धिं पञ्चगव्यैश्च मार्जयेत् ।
तत्र रंगं समास्थाय पद्मपत्रदलं न्यसेत् ॥ ७ ॥
सुस्नात्वाऽऽचम्य विधिना पुण्याहं वाचयेत्ततः ।
रुद्रसूक्तेन चांगानि शिरः फालं च कर्णकम् ॥ ८ ॥
जिह्वायां च भुजद्वंद्वे कुक्षौ नाभौ च पृष्ठके ।
ककुदेकाशस्थाने विभूत्या चिन्हितो गुरुः ।
रुद्राक्षधारणं कृत्वा कलशान्स्थापयेद्बुधः ॥ ९ ॥
अच्छिद्रान्बहुसंतप्तान्पाषाणस्फोटवर्जितान् ।
खर्पराकाररहितान् लघुस्थूलविवर्जितान् ॥ १० ॥

---

ಪಂಚಗವ್ಯ (ಆಕಳದ ಮೂತ್ರ, ಸಗಣಿ, ಹಾಲು, ಮೊಸರು, ತುಪ್ಪ)ಗಳಿಂದ ಸಾರಣಿ ಮಾಡುವಾಗ್ಗೆ "ಅಪಸರ್ಪಂತು ಇತ್ಯಾದಿ ಶಿವಾಜ್ಞಯಾ'' ಅಲ್ಲಿಯ ವರೆಗೆ ಮಂತ್ರವನ್ನು ಹೇಳುತ್ತ ಭೂ ಶುದ್ಧಿಯನ್ನು ಮಾಡಬೇಕು. (ಈ ಭೂಮಿಯ ಮೇಲೆ ಇರುವಂತಹ ಮತ್ತು ಕಾರ್ಯಕ್ಕೆ ವಿಘ್ನವನ್ನುಂಟು ಮಾಡುವಂತಹ ಯಾವ ಭೂತ ಪ್ರೇತಗಳಿರು ವವೊ ಅವೆಲ್ಲವೂ ಶಿವನ ಅಪ್ಪಣೆಯಿಂದ ದೂರವಾಗಿ ಹೋಗಲಿ) ಎಂಬುದು ಮಂತ್ರಾರ್ಥವು. ಹೀಗೆ ಪರಿಶುದ್ಧವಾದ ವೇದಿಕೆಯ ಮೇಲೆ ರಂಗವಲ್ಲಿಯನ್ನು ಹಾಕಿ ಕಮಲದ ದಳವನ್ನು ರಚಿಸಬೇಕು. ॥ ೬-೭ ॥

ಗುರುವು ಸ್ನಾನಾಚಮನಗಳನ್ನು ಮಾಡಿಕೊಂಡು ವಿಧಿವತ್ತಾಗಿ ಪುಣ್ಯಾಹ ವಾಚನವನ್ನು ಮಾಡಬೇಕು. ಬಳಿಕ ಗುರುವು ತನ್ನ ಅವಯವಗಳಿಗೆ ಅಂದರೆ ತಲೆ, ಹಣೆ, ಕಿವಿ, ನಾಲಿಗೆ, ಎರಡು ಭುಜಗಳು, ಹೊಟ್ಟೆ, ಹೊಕ್ಕಳ, ಬೆನ್ನು, ಎರಡು ಹೆಗಲು ಈ ೧೧ ಸ್ಥಾನಗಳಲ್ಲಿ ಭಸ್ಮಧಾರಣ ಮಾಡಿಕೊಂಡು ಹಾಗು ರುದ್ರಾಕ್ಷಿಗಳನ್ನು ಆಯಾಯ ಸ್ಥಾನದಲ್ಲಿ ಧರಿಸಿಕೊಂಡು ಬಳಿಕ ಕಲಶ ಸ್ಥಾಪನೆ ಮಾಡಬೇಕು. ಸ್ಥಾಪನೆ ಮಾಡುವ ಕಲಶಗಳು ರಂಧ್ರವಿಲ್ಲದವು, ಹರಳು ಬಿರಕು ಇಲ್ಲದವು, ಭಿಕ್ಷಾ ಪಾತ್ರೆಯ ಆಕಾರವಿಲ್ಲದವು, ಒಂದು ಕಡೆಗೆ ತಿಳುವು ಮತ್ತೊಂದು ಕಡೆಗೆ ದಪ್ಪ ಹೀಗೆ ಇಲ್ಲದವು, ಹಸಿ ಬಿಸಿ ಇರದೆ ಚನ್ನಾಗಿ ಸುಡಲ್ಪಟ್ಟವುಗಳು ಆಗಿರಬೇಕು. ॥ ೮-೧೦ ॥

रेणुकस्य हरिद्वर्णं दारुकस्य च ताम्रकम् ।
शंखुकर्णस्य कापोतं धेनुकर्णस्य कांस्यकम् ॥ ११ ॥
विश्वकर्णस्य सौवर्णं कलशान्स्थापयेद्बुधः ।
अथवा मृन्मयान्कुर्यात्तत्तद्वर्णैश्च संयुतान् ॥ १२ ॥
आचार्याणां पञ्चके तु यः पीठमधिरोहति ।
तदाऽसौ गुरुशब्देन वाच्य इत्यभिधीयते ।
शेषाश्चत्वार आचार्या उपदेशस्य साक्षिणः ॥ १३ ॥
गुरुस्तस्यां वेदिकायां तण्डुलानर्पयेत्ततः ।
तस्योपरि स्वकं कुम्भं मध्मे च स्थापयेत्ततः ॥ १४ ॥
तच्छेषान् कलशांश्चैव स्थापयेच्च यथाक्रमम् ।
ईश्वरस्य मुखान्येव कलशानि न संशयः ॥ १५ ॥
एतादृशकरीराणां नवसूत्रेण वेष्टयेत् ।
प्रत्येकं नववस्त्रेण वेष्टयेद्देशिकोत्तमः ॥ १६ ॥

---

ರೇಣುಕ ಶಾಖೆಯವರ ಕಲಶ ಹಸುರು ಬಣ್ಣದ್ದು, ದಾರುಕ ಶಾಖೆಯವರ ಕಲಶ ತಾಮ್ರ ವರ್ಣದ್ದು, ಶಂಖುಕರ್ಣ ಶಾಖೆಯವರ ಕಲಶ ಬೂದ ಬಣ್ಣದ್ದು, ಧೇನುಕರ್ಣ ಶಾಖೆಯವರದು ಬಂಗಾರ ವರ್ಣದ್ದು ಇರಬೇಕು. ಈ ಕಲಶಗಳು ಆಯಾಯ ವರ್ಣದ ಲೋಹಗಳಿಂದಲೇ ತಯಾರಾದವು ಇದ್ದರೆ ಸರ್ವಶ್ರೇಷ್ಠ ಅದು ಸಾಧ್ಯವಿಲ್ಲದಾಗ ಆಯಾ ಬಣ್ಣದ, ಮಣ್ಣಿನ ಪಾತ್ರೆಗಳಾದರೂ ಆಗಬಹುದು. ||೧೧-೧೨||

ಈ ಐದು ಜನ ಆಚಾರ್ಯರಲ್ಲಿ ಯಾವ ಆಚಾರ್ಯರ ಶಾಖೆಯವರ ದೀಕ್ಷೆಯು ಆಗಬೇಕಾಗಿರುತ್ತದೆಯೋ ಆ ಆಚಾರ್ಯರು ಆಗ ಗುರುಗಳೆಂದೂ ಉಳಿದ ನಾಲ್ಕು ಜನ ಆಚಾರ್ಯರು ಆ ದೀಕ್ಷಾ ಕಾರ್ಯಕ್ಕೆ ಸಾಕ್ಷಿ ಭೂತರೆಂದು ತಿಳಿಯಬೇಕು. ಅನಂತರ ಗುರುವು ಆ ವೇದಿಕೆಯ ಮೇಲೆ ಅಕ್ಕಿಯನ್ನು ಹರವಿ ಆ ಅಕ್ಕಿಯ ಗುಂಪಿಯ ಮಧ್ಯಭಾಗದಲ್ಲಿ ಗುರುವಿನ ಕಲಶವನ್ನು ಉಳಿದ ಆಚಾರ್ಯರ ನಾಲ್ಕು ಕಲಶಗಳನ್ನು ಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿ ಅವರವರ ಪ್ರಣವಗಳನ್ನು ಬರೆದು ಸ್ಥಾಪಿಸಬೇಕು. ||೧೩-೧೪|| ಈ ಐದು ಕಲಶಗಳು ಈಶ್ವರನ ಐದು ಮುಖಗಳೆಂದೇ ಭಾವಿಸಬೇಕು. ಈ ಕಲಶಗಳಿಗೆ ಹೊಸ ದಾರವನ್ನು ಐದು ಸುತ್ತು ಬರುವಂತೆ ಸುತ್ತಿ ಗುರುವಿನ ಕಡೆಗೊಂದು ದೀಕ್ಷೆಯಾಗುವವನ ಕಡೆಗೊಂದು ಬರುವಂತೆ ಸೂತ್ರವನ್ನು

गङ्गादिसर्वतीर्थानामंभसा परिपूरयेत् ।
संपूर्य पञ्चकलशानिमं मे इति मन्त्रतः ॥ १७ ॥
तेषु तीर्थांबुपूर्णेषु सन्निधायाम्रपल्लवान् ।
दूर्वांकुरान्सपूगांश्च नागवल्लीदलान्वितान् ॥ १८ ॥
तेषु संस्थाप्य रत्नानि निक्षिप्य परिपूजयेत् ।
नानाविधैश्च कुसुमैर्गन्धपत्राक्षतादिभिः ॥ १९ ॥
एवं शास्त्रोक्तविधिना पञ्चकान् कलशानपि ।
संपूज्य फलनैवेद्यैः सतांबूलैः सदक्षिणैः ।
दशधा तत्र निक्षिप्तैरर्हणैः परिपूजयेत् ॥ २० ॥

पार्वत्युवाच

पञ्चैव कलशास्तत्र निक्षिप्ताः परिपूजिताः ।
किमर्थं दशधा तेषामर्हणानि विनिक्षिपेत् ॥ २१ ॥

---

ಹಚ್ಚಬೇಕು. ಬಳಿಕ ಆಯಾ ಬಣ್ಣದ ಅಥವಾ ಬಿಳಿ ಬಣ್ಣದ ಹೊಸ ವಸ್ತ್ರಗಳನ್ನು ಆಯಾ ಕಲಶಗಳಿಗೆ ಸುತ್ತಬೇಕು. ಆ ಕಲಶಗಳಲ್ಲಿ ಗಂಗಾದಿ ಪವಿತ್ರ ನದಿಗಳ ನೀರನ್ನಾಗಲಿ, ಗುರು ಜಂಗಮರ ಪಾದತೀರ್ಥವನ್ನಾಗಲಿ ಇಮಂಮೇ ಎಂಬ ಮಂತ್ರ ಹೇಳುತ್ತ ತುಂಬಬೇಕು. ॥ ೧೭-೧೮ ॥ ಅನಂತರ ಆ ಕಲಶಗಳಲ್ಲಿ ಪಂಚರತ್ನಗಳನ್ನು ಹಾಕಿ ಮೇಲೆ ಮಾವಿನ ಚಿಗರು, ಕರಿಕೆ, ಎಲಿ ಇವನ್ನು ಇಟ್ಟು ಅಡಿಕೆ ಬೆಟ್ಟ, ಕಾರಿಕಾ, ಕೊಬರಿ ಬಟ್ಟಲ, ಅರಿಷಿಣ ಬೇರು ಮುಂತಾದವುಗಳನ್ನು ಪ್ರತ್ಯೇಕ ಸೇರಿಸಿ ಹತ್ತು ಪರಡಿಗಳನ್ನು ದಕ್ಷಿಣ ಸಹಿತ ಇಡಬೇಕು. ಅ ನಂತರ ಗುರುವು ತನ್ನ ಕಲಶವನ್ನು ಉಳಿದ ನಾಲ್ಕು ಜನ ಋತ್ವಿಜರು ತಮ್ಮ ತಮ್ಮ ಕಲಶಗಳನ್ನು ಗಂಧ, ಅಕ್ಷತ, ಪತ್ರ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣ ಇವುಗಳಿಂದ ವಿಧಿವತ್ತಾಗಿ ಪೂಜಿಸಬೇಕು. ॥ ೧೮-೨೦ ॥

ಆಗ ಪಾರ್ವತಿಯು ಪರಮಾತ್ಮನನ್ನು ಕುರಿತು ದೇವಾಧಿದೇವ ಐದು ಜನ ಆಚಾರ್ಯರಿಗೆ ಐದು ಕಲಶಗಳನ್ನು ಸ್ಥಾಪಿಸಿ ಪೂಜಿಸಲು ಅಪ್ಪಣೆಯಾಯಿತು. ಆದರೆ ಪರಡಿಗಳನ್ನು ಹತ್ತು ಇಡಬೇಕೆಂದು ಏಕೆ ಹೇಳುವಿರಿ ಎಂದು ಪ್ರಶ್ನೆ ಮಾಡುವಳು. ॥ ೨೧ ॥ ಆಗ ಪರಶಿವನು ಎಲೈ ದೇವಿಯೇ ಆಚಾರ್ಯರು ಐದೇ ಜನರು

ईश्वर उवाच

महाचार्याः पञ्चविधा वृत्त्याचार्याश्च पञ्चधा ।
एवं दशविधानां तु भागाश्च परिकल्पिताः ॥ २२ ॥
तस्माद्दशविधं तत्र फलनैवेद्यकम् न्यसेत् ।
पञ्च पूर्णानि निक्षिप्य तदर्धं पञ्चधा क्षिपेत् ॥ २३ ॥
पूर्णभागान्महाचार्याश्चाहरेयुर्यथाक्रमम् ।
उपसूत्रैश्च युक्तानां चैवमेव हि निर्णयः ॥ २४ ॥
तदर्धं च गृण्हीयाद्वृत्त्याचार्यास्ततः परम् ।
एकस्य भागमेकस्तु गृहीतुं नैव चार्हति ॥ २५ ॥
बलादपि च गृण्हीयात्समानस्कंदता भवेत् ।
तेन दोषफलं भुक्त्वा नरकानेव विंदति ॥ २६ ॥

---

ಅವರಿಗಾಗಿ ಐದು ಪರಡಿಗಳು ಸಹಜ. ಆದರೆ ಕಾರ್ಯಮಾಡುವಂಥ ವೃತ್ತ್ಯಾಚಾರ್ಯರು ಬೇರೆ ಐದುಜನರಿರುವರು ಅವರಿಗಾಗಿ ಐದು ಪರಡಿಗಳು ಅಂತು ಹತ್ತು ಪರಡಿಗಳನ್ನಿಡುವದು ಶಾಸ್ತ್ರಸಮ್ಮತವಾದುದು ಎಂದು ಅಪ್ಪಣೆ ಮಾಡಿದನು. ಈ ಹತ್ತು ಪರಡಿಗಳಲ್ಲಿ ಪಂಚಾಚಾರ್ಯರ ಐದು ಪರಡಿಗಳು ಪೂರ್ಣಗಳಾಗಿಯೂ, ಉಪಾಚಾರ್ಯರ ಐದು ಪರಡಿಗಳು ಆಚಾರ್ಯರ ಅರ್ಧದಷ್ಟು ಪದಾರ್ಥಗಳಿಂದ ಕೂಡಿದವುಗಳಾಗಿಯೂ ಇರತಕ್ಕದ್ದು. ॥ ೨೨–೨೩ ॥

ಕಾರ್ಯವು ಪೂರ್ಣವಾದನಂತರ ಈ ಹತ್ತು ಪರಡಿಗಳಲ್ಲಿ ಪೂರ್ಣ ಪದಾರ್ಥಗಳಿಂದ ಕೂಡಿದ ಐದು ಪರಡಿಗಳನ್ನು ಐದು ಜನ ಆಚಾರ್ಯರು ತಮ್ಮ ತಮ್ಮ ಉಪಸೂತ್ರದವರೊಡನೆ ಸ್ವೀಕರಿಸತಕ್ಕದ್ದು. ಉಳಿದ ಅರ್ಧ ಪದಾರ್ಥಗಳುಳ್ಳ ಐದುಪರಡಿಗಳನ್ನು ಮಠ, ಮಠಪತ್ತಿ, ಗಣಾಚಾರಿ, ಸ್ಥಾವರ, ಕೌಮಾರ ಎಂಬ ಉಪಾಚಾರ್ಯರು ಗ್ರಹಿಸತಕ್ಕದ್ದು. ಈ ಮಹಾಚಾರ್ಯ ಉಪಾಚಾರ್ಯರಲ್ಲಿ ಒಬ್ಬರ ಪರಡಿಯನ್ನು ಮತ್ತೊಬ್ಬರು ಗ್ರಹಿಸಬಾರದು. ಹಾಗೆ ಬಲಾತ್ಕಾರದಿಂದ ಗ್ರಹಿಸಿದರೆ ಸಮಾನಸ್ಕಂದತೆಯಾಗುವದರಿಂದ ಉಪಾಚಾರ್ಯರು ದೋಷಭಾಗಿಗಳಾಗುವದಲ್ಲದೆ ನರಕವನ್ನೇ ಹೊಂದುವರು. ಉಪಾಚಾರ್ಯರ ಪರಡಿಗಳನ್ನು ಮಹಾಚಾರ್ಯರು ತೆಗೆದುಕೊಂಡರೆ ಅವರಿಗೆ ನ್ಯೂನತೆಯುಂಟಾಗುವದು ಆದಕಾರಣ ಹಾಗೆ ಮಾಡ

वृत्त्याचार्यपदार्थं तु महाचार्या यदाहरन् ।
तदा तेषां च महतां न्यूनता भवति ध्रुवम् ॥ २७ ॥
एवं शास्त्रोक्तविधिना पञ्चकान्कलशानपि ।
प्राणप्रतिष्ठां कुर्वीत ब्रह्ममन्त्रैर्न्यसेद्बुधः ॥ २८ ॥
पूर्णकुम्भं प्रतिगृह्य करद्वयसमन्वितम् ।
उत्तमांगादिसर्वांगे स्नानं तु शिवशासनात् ॥ २९ ॥
विधाय मङ्गलस्नानं धौतवस्त्रपरिच्छदः ।
गृहीत्वा फलपुष्पादीन् विभूत्या च समन्वितान् ॥ ३० ॥
गुरुसन्निधिमासाद्य भक्त्या वित्तानुसारतः ।
तदर्हणं गृहीत्वाथ निधाय गुरुसन्निधौ ॥ ३१ ॥
साष्टांगनमनं कृत्वा सर्वेषामृत्विजामपि ।
गुरुं संप्रार्थयेच्छिष्यस्त्वहं पापमयो यतः ॥ ३२ ॥
तस्मादुद्धर पूर्वस्मात्पापादेव मया कृतात् ।
गुरो कृपांबुधे सुप्तं मम लिंगं प್रतिष्ठितम् ॥ ३३ ॥

---

ಬಾರದು ॥೨೬-೨೭॥ ಈ ಪ್ರಕಾರ ಗುರುವು ಶಾಸ್ತ್ರಾನುಸಾರವಾಗಿ ಆ ಪಂಚಕಲಶ ಗಳಲ್ಲಿ ಪಂಚಬ್ರಹ್ಮ ಮಂತ್ರಗಳಿಂದ ಪ್ರಾಣಪ್ರತಿಷ್ಠಾ ಮಾಡಿಕೊಂಡು ಸಿದ್ಧವಾಗಿರ ಬೇಕು. ಬಳಿಕ ದೀಕ್ಷಾ ಸಂಸ್ಕಾರ ಹೊಂದುವ ವಟುವು ತುಂಬಿದ ಕೊಡವನ್ನು ಎರಡೂ ಕೈಗಳಿಂದ ಎತ್ತಿ ಶಿವನ ಆಜ್ಞಾನುಸಾರವಾಗಿ ಮಸ್ತಕವೇ ಮೊದಲಾದ ಸರ್ವಾಂಗದಲ್ಲಿ ಸ್ನಾನಮಾಡಬೇಕು ॥೨೮-೨೯॥ ಈ ಮಂಗಲ ಸ್ನಾನವಾದಬಳಿಕ ತೊಳೆದ ಹೊಸಬಟ್ಟೆಗಳನ್ನು ಧರಿಸಿಕೊಂಡು ಭಸ್ಮ ಹಚ್ಚಿಕೊಳ್ಳಬೇಕು. ಅನಂತರ ಒಂದು ತಟ್ಟೆಯಲ್ಲಿ ಟೆಂಗು, ಎಲೆ, ಅಡಿಕೆ, ಹಣ್ಣುಗಳು, ಭಸ್ಮಗಟ್ಟಿ, ಹೂಪತ್ರಿ ಮೊದ ಲಾದವನ್ನು, ತನ್ನ ಯೋಗ್ಯತೆಗೆ ತಕ್ಕಂತೆ ಗುರುದಕ್ಷಿಣವನ್ನು ಇಟ್ಟುಕೊಂಡು ಬಂದು ಗುರುವಿನ ಸನ್ನಿಧಿಯಲ್ಲಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿ, ಬಳಿಕ ಋತ್ವಿಜರಿಗೂ ನಮಸ್ಕಾರಮಾಡಿ, ಗುರುವಿನ ಮುಂಭಾಗದಲ್ಲಿ ಕೈಮುಗಿದುಕೊಂಡು ನಿಂತು ಹೀಗೆ ಪ್ರಾರ್ಥಿಸಬೇಕು. ಭೋಗುರುದೇವ ನಾನು ಪಾಪಿಯಾಗಿರುವೆನು ದಯಾಸಾಗರ ನಾದ ಗುರುವೆ ನಾನು ಮಾಡಿದ ಪಾಪದರಾಶಿಯಿಂದ ನನ್ನನ್ನು ಉದ್ಧಾರಮಾಡು,

प्रबुध्य धारयाद्यैव भवाब्धेश्च समुद्धर ।
इति संप्रार्थिताचार्य उपदेष्टुं समारभेत् ॥ ३४ ॥
शिष्यदत्तफलाद्यैश्च कलशं स्वं प्रपूजयेत् ।
ततश्चत्वारः कलशान्पूजयेयुर्यथाक्रमम् ॥ ३५ ॥

पार्वत्युवाच

पूर्वोक्तपञ्चकलशास्ते सर्वे प्रणवान्विताः ।
भिन्नभिन्नाश्च संत्येते वेदाश्चैव तथा परे ।
तेषां संस्थापनविधिं वक्तुमर्हसि सांप्रतम् ॥ ३६ ॥

ईश्वर उवाच

उपदेशविधिं वक्ष्ये पाशुपत्यागमोदितम् ।
तत्र पञ्चविधास्सन्ति प्रणवाः कलशा इमे ॥ ३७ ॥
मुखानि वेदाः पञ्चानामाचार्याणां पृथक् पृथक् ।
तेषां संस्थापनविधिं वक्ष्ये शास्त्रानुनिश्चितम् ॥ ३८ ॥

---

ಪೂರ್ವದಲ್ಲಿ ಸಂಸ್ಕಾರಮಾಡಲ್ಪಟ್ಟ, ಇದುವರೆಗೂ ನಿದ್ರಾವಸ್ಥೆಯಲ್ಲಿದ್ದ ನನ್ನ ಲಿಂಗವನ್ನು ಜಾಗ್ರತಗೊಳಿಸಿ ಇಂದು ಧಾರಣಮಾಡಿ ನನ್ನನ್ನು ಸಂಸಾರ ಸಾಗರದಿಂದ ಪಾರು ಮಾಡು ದೇವಾ ಹೀಗೆ ಪ್ರಾರ್ಥಿಸಲ್ಪಟ್ಟ, ಗುರುವು ಉಪದೇಶಮಾಡಲಿಕ್ಕೆ ಪ್ರಾರಂಭಿಸಬೇಕು. ಶಿಷ್ಯನು ತಂದು ಅರ್ಪಿಸಿದ ಫಲಪುಷ್ಪಾದಿಗಳಿಂದ ಗುರುವು ತನ್ನ ಕಲಶವನ್ನು ಉಳಿದ ಋತ್ವಿಜರು ತಮ್ಮ ತಮ್ಮ ಕಲಶಗಳನ್ನು ಕ್ರಮವಾಗಿ ಪೂಜಿಸಬೇಕು ॥೩೦-೩೫॥ ಪಾರ್ವತಿಯ ಪ್ರಶ್ನೆ— ಅಯಿ ಮಹಾದೇವ, ತಾವು ಪೂರ್ವದಲ್ಲಿ ಹೇಳಿದ ಪಂಚಕಲಶಗಳು ಎಲ್ಲವೂ ಪ್ರಣವಾಕ್ಷರಗಳಿಂದ ಕೂಡಿಕೊಂಡಂತವು ಇರುತ್ತವೆ. ಪ್ರತಿಯೊಂದು ಕಲಶಕ್ಕೂ ಪ್ರಣವವು ಮತ್ತು ವೇದವು ಬೇರೆ ಬೇರೆಯಾಗಿರುತ್ತವೆ. ಇಂತಹ ಕಲಶಗಳ ಸ್ಥಾಪನವನ್ನು ಯಾವ ವಿಧವಾಗಿ ಮಾಡಬೇಕೆಂಬುದನ್ನು ಕೃಪಾ ಮಾಡಿ ಹೇಳಬೇಕೆಂದು ಪ್ರಾರ್ಥಿಸಿದಳು. ॥೩೬॥ ಆಗ ಪರಮಾತ್ಮನು ಹೇಳುವನು– ಎಲೈ ದೇವಿಯೆ ಪಾಶುಪತ್ಯಾಗಮದಲ್ಲಿ ಹೇಳಿದಂಥ ಉಪದೇಶ ವಿಧಿಯನ್ನು ಹೇಳುವೆನು ಕೇಳು ॥ ಐದು ಜನ ಆಚಾರ್ಯರಿಗೆ ಕಲಶಗಳು, ಪ್ರಣವಗಳು, ವೇದಗಳು ಬೇರೆ ಬೇರೆಯಾಗಿರುತ್ತವೆ. ಶಾಸ್ತ್ರಾನುಸಾರವಾಗಿ ಇಂತಹ ಕಲಶಗಳ ಸ್ಥಾಪನ ರೀತಿಯನ್ನು ಪ್ರತ್ಯೇಕವಾಗಿ ಹೇಳುವೆನು. ॥೩೭–೩೮॥ ಪಂಚ ಪ್ರಣವಗಳು, ಗುರುವು, ಆಚಾ-

चरंति पंच प्रणवा गुरुराचार्यकास्तथा ।
वेंदाः पाशुपतानां तु उपदेशानुसारतः ॥ ३९ ॥
तेषां पञ्चविधानां तु दिक्प्रधानं न विद्यते ।
ग्रन्थान्तरेऽपि विद्येत स ग्रन्थो मोहको भवेत् ॥ ४० ॥
मयोदितं प्रधानं स्याद्बहुवेदेषु संमतम् ।
तदेवादरणीयं स्यात्सर्वैरपि न चान्यथा ॥ ४१ ॥
मोहकं तु प्रधानं स्याज्ज्ञातिसांकर्यता भवेत् ।
तस्मात्तदुक्तविधिना दिक्प्रधानं न कारयेत् ॥ ४२ ॥
ज्ञानिनां मोक्षणार्थाय शैवानां तारणाय च ।
एतन्मयोदितं गुह्यं न वाच्यं यस्य कस्य चित् ॥ ४३ ॥

---

ರ್ಯರು, ವೇದಗಳು ಇವೆಲ್ಲ ಉಪದೇಶಾನುಸಾರವಾಗಿ ಭಿನ್ನ ಭಿನ್ನಗಳಾಗುತ್ತವೆ. ॥೩೯॥ ಐದು ವಿಧಗಳಾದ ಇವೆಲ್ಲವುಗಳಿಗೂ ದಿಕ್ಕಿನ ಪ್ರಾಧಾನ್ಯತೆಯಿರುವದಿಲ್ಲ. ಅಂದರೆ ಇಂತಹ ಆಚಾರ್ಯರ ಕಲಶ, ಪ್ರಣವ, ವೇದ ಮೊದಲಾದವು ಇಂತಹ ದಿಕ್ಕಿನಲ್ಲಿ ಯಾವಾಗಲೂ ಇರತಕ್ಕದ್ದು ಎಂಬ ನಿಯಮವಿರುವದಿಲ್ಲ. ಯಾವ ಕಾಲದಲ್ಲಿ ಯಾವ ಗೋತ್ರ ಸೂತ್ರದವರಿಗೆ ಉಪದೇಶ ಮಾಡಬೇಕಾಗಿರುವದೋ ಆ ಉಪದೇಶಕ್ಕೆ ಅನುಗುಣವಾಗಿ ಇವೆಲ್ಲವುಗಳ ದಿಕ್ಕುಗಳು ಭಿನ್ನ ಭಿನ್ನಗಳಾಗುತ್ತವೆ. ಆಕಸ್ಮಾತ್ ಯಾವುದಾದರೊಂದು ಗ್ರಂಥದಲ್ಲಿ ಈ ಐದು ಜನ ಆಚಾರ್ಯರಿಗೆ ಇಂಥ ದಿಕ್ಕೇ ಯಾವಾಗಲು ಇರಬೇಕೆಂದು ಹೇಳಿದ್ದರೆ ಆ ಗ್ರಂಥವು ಮೋಹಕ (ಭ್ರಾಂತಿಯನ್ನು ಹುಟ್ಟಿಸುವಂಥಾದ್ದು) ವಾದದ್ದೆಂದು ತಿಳಿಯಬೇಕು. ಎಲೈ ದೇವಿಯೇ. ನಾನು ಹೇಳುವ ಮಾತು ಸಕಲ ವೇದ ಸಮ್ಮತವಾದದ್ದು, ಮುಖ್ಯವಾದದ್ದು ಇರುತ್ತದೆ. ಇದನ್ನೇ ಎಲ್ಲರೂ ಆದರಿಸಬೇಕು. ಅನ್ಯಥಾ ಆಚರಿಸಬಾರದು. ಮೋಹಕವಾದ ಗ್ರಂಥಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟು, ಇಂತಹ ಆಚಾರ್ಯರಿಗೆ ಈ ದಿಕ್ಕೇ ಯಾವಾಗಲೂ ಇರಬೇಕೆಂದು ಹೇಳಿದರೆ ಜಾತಿ ಸಾಂಕರ್ಯ ಉಂಟಾಗುವದು. ಆದ ಕಾರಣ ದಿಕ್ಕಿಗೆ ಪ್ರಾಧಾನ್ಯತೆಯನ್ನು ಕೊಡಬಾರದು. ॥೪೦-೪೨॥ ಜ್ಞಾನಿಗಳಾದ ವೀರಶೈವರ ಉದ್ಧಾರಕ್ಕಾಗಿಯೂ ಮೋಕ್ಷಪ್ರಾಪ್ತಿಗಾಗಿಯೂ ಅತ್ಯಂತ ಗುಪ್ತವಾದ ಈ ಮಾತನ್ನು ನಿನಗೆ ಹೇಳುವೆನು. ಇದನ್ನು ಸಿಕ್ಕ ಸಿಕ್ಕವರಿಗೆ ಹೇಳಬಾರದು.

रेणुकस्य स्वगोत्राणामुपदेशो यदा भवेत् ।
तदा तत्प्रणवं मध्ये नकारं स्थापयेद्बुधः ॥ ४४ ॥
मकारं पूर्वतः कृत्वा शिकारं दक्षिणे न्यसेत् ।
वाकारं पश्चिमे विद्याद्यकारं चोत्तरे न्यसेत् ॥ ४५ ॥
दारुकस्य स्वगोत्राणामुपदेशो यदा भवेत् ।
तदा मकारं मध्ये तु प्रणवं स्थापयेद्बुधः ॥ ४६ ॥
शिकारं पूर्वदेशे तु वाकारं दक्षिणे न्यसेत् ।
यकारं पश्चिमे विद्यान्नकारं चोत्तरे न्यसेत् ॥ ४७ ॥
शंखुकर्णस्योपदेशे मध्ये कुर्याच्छिकारकम् ।
वाकारं पूर्वतः कृत्वा यकारं दक्षिणे न्यसेत् ॥ ४८ ॥
नकारं पश्चिमे कृत्वा मकारं चोत्तरे न्यसेत् ।
धेनुकर्णस्योपदेशे वाकारं मध्यमं न्यसेत् ॥ ४९ ॥

---

ಯಾವ ಕಾಲದಲ್ಲಿ ರೇಣುಕಾಚಾರ್ಯರ ಗೋತ್ರದವರಿಗೆ ಉಪದೇಶ ಮಾಡ ಬೇಕಾಗಿರುವದೊ ಆ ಸಮಯದಲ್ಲಿ ರೇಣುಕಾಚಾರ್ಯರ ಪ್ರಣವವಾದ ನಕಾರವನ್ನು ಮಧ್ಯದಲ್ಲಿ ಸ್ಥಾಪಿಸಬೇಕು. ಬಳಿಕ ಮಕಾರವನ್ನು ಪೂರ್ವ ದಿಕ್ಕಿನಲ್ಲಿ, ಶಿಕಾರವನ್ನು ದಕ್ಷಿಣದಲ್ಲಿ, ವಕಾರವನ್ನು ಪಶ್ಚಿಮದಲ್ಲಿ ಯಕಾರವನ್ನು ಉತ್ತರದಲ್ಲಿ ಸ್ಥಾಪಿಸ ಬೇಕು. ॥ ೪೫ ॥

ಯಾವ ಕಾಲದಲ್ಲಿ ದಾರುಕಾಚಾರ್ಯರ ಗೋತ್ರದವರಿಗೆ ಉಪದೇಶ ಮಾಡುವ ದಿದೆಯೋ ಆ ಸಮಯದಲ್ಲಿ ದಾರುಕಾಚಾರ್ಯರ ಪ್ರಣವವಾದ ಮಕಾರವನ್ನು ಮಧ್ಯದಲ್ಲಿ ಸ್ಥಾಪಿಸಬೇಕು. ನಂತರ ಶಿಕಾರವನ್ನು ಪೂರ್ವದಲ್ಲಿ, ವಾಕಾರವನ್ನು ದಕ್ಷಿಣ ದಲ್ಲಿ, ಯಕಾರವನ್ನು ಪಶ್ಚಿಮದಲ್ಲಿ, ನಕಾರವನ್ನು ಉತ್ತರದಲ್ಲಿ ಸ್ಥಾಪಿಸ ಬೇಕು. ॥ ೪೬–೪೭ ॥

ಯಾವ ಕಾಲದಲ್ಲಿ ಶಂಖುಕರ್ಣರ ಗೋತ್ರದವರಿಗೆ ಉಪದೇಶ ಮಾಡುವ ದಿದೆಯೋ ಆ ಸಮಯದಲ್ಲಿ ಏಕೋರಾಮಾಚಾರ್ಯರ ಪ್ರಣವವಾದ ಶಿಕಾರವನ್ನು ಮಧ್ಯದಲ್ಲಿ ಸ್ಥಾಪಿಸಬೇಕು, ಬಳಿಕ ವಾಕಾರವನ್ನು ಪೂರ್ವದಲ್ಲಿ, ಯಕಾರವನ್ನು ದಕ್ಷಿಣ ದಲ್ಲಿ, ನಕಾರವನ್ನು ಪಶ್ಚಿಮದಲ್ಲಿ, ಮಕಾರವನ್ನು ಉತ್ತರದಲ್ಲಿ ಸ್ಥಾಪಿಸಬೇಕು.

ಯಾವ ಕಾಲದಲ್ಲಿ ಧೇನುಕರ್ಣರ ಗೋತ್ರದವರಿಗೆ ಉಪದೇಶ ಮಾಡುವ ದಿದೆಯೋ ಆ ಕಾಲದಲ್ಲಿ ಪಂಡಿತಾರಾಧ್ಯರ ಪ್ರಣವವಾದ ವಾಕಾರವನ್ನು ಮಧ್ಯದಲ್ಲಿ

यकारं पूर्वतः कृत्वा नकारं दक्षिणे न्यसेत् ।
मकारं पश्चिमे न्यस्य शिकारं चोत्तरे न्यसेत् ॥ ५० ॥

विश्वकर्णस्योपदेशे मध्ये कुर्याद्यकारकम् ।
नकारं पूर्वतः कृत्वा मकारं दक्षिणे न्यसेत् ।
शिकारं पश्चिमे कृत्वा वाकारं चोत्तरे न्यसेत् ॥ ५१ ॥

रेणुकस्य नकारोऽयं दारुकस्य मकारकः ।
शिकारः शंखुकर्णस्य धेनुकर्णस्य वाऽक्षरः ।
यकारो विश्वकर्णस्य प्रणवाः परिकीर्तिताः ॥ ५२ ॥

यस्याचार्यस्य प्रणवो यस्यां दिशि च वर्तते ।
सा दिक्‌ तस्यैव विज्ञेया दिक्‌प्रधानं न विद्यते ॥ ५३ ॥

दिक्‌ प्रधानं न चैतेषां प्रणवेनैव निर्णयः ।
शिष्यलिंगगुरूणां च कलशानां तथैव च ॥ ५४ ॥

---

ಸ್ಥಾಪಿಸಬೇಕು. ತರುವಾಯ ಯಕಾರವನ್ನು ಪೂರ್ವದಲ್ಲಿ, ನಕಾರವನ್ನು ದಕ್ಷಿಣದಲ್ಲಿ, ಮಕಾರವನ್ನು ಪಶ್ಚಿಮದಲ್ಲಿ, ಶಿಕಾರವನ್ನು ಉತ್ತರದಲ್ಲಿ ಸ್ಥಾಪಿಸಬೇಕು. ॥ ೪೯–೫೦ ॥

ಯಾವ ಕಾಲದಲ್ಲಿ ವಿಶ್ವಕರ್ಣರ ಗೋತ್ರದವರಿಗೆ ಉಪದೇಶ ಮಾಡುವದಿದೆಯೋ ಆ ಕಾಲದಲ್ಲಿ ವಿಶ್ವಾರಾಧ್ಯರ ಪ್ರಣವವಾದ ಯಕಾರವನ್ನು ಮಧ್ಯದಲ್ಲಿ ಸ್ಥಾಪಿಸಬೇಕು. ಅನಂತರ ನಕಾರವನ್ನು ಪೂರ್ವದಲ್ಲಿ, ಮಕಾರವನ್ನು ದಕ್ಷಿಣದಲ್ಲಿ, ಶಿಕಾರವನ್ನು ಪಶ್ಚಿಮದಲ್ಲಿ, ವಾಕಾರವನ್ನು ಉತ್ತರದಲ್ಲಿ ಸ್ಥಾಪಿಸಬೇಕು. ॥ ೫೧ ॥

ರೇಣುಕಾಚಾರ್ಯರಿಗೆ ನಕಾರವೂ, ದಾರುಕಾಚಾರ್ಯರಿಗೆ ಮಕಾರವೂ, ಏಕೋರಾಮಾಚಾರ್ಯರಿಗೆ ಶಿಕಾರವೂ, ಪಂಡಿತಾಚಾರ್ಯರಿಗೆ ವಾಕಾರವೂ, ವಿಶ್ವಾರಾಧ್ಯರಿಗೆ ಯಕಾರವೂ ಮುಖ್ಯ ಪ್ರಣವಗಳೆಂದು ತಿಳಿಯತಕ್ಕದ್ದು. ಯಾವ ಆಚಾರ್ಯರ ಪ್ರಣವವು ಯಾವ ದಿಕ್ಕಿನಲ್ಲಿರುತ್ತದೆಯೋ ಆ ದಿಕ್ಕೇ ಅವರದೆಂದು ತಿಳಿಯಬೇಕು. ಅರ್ಥಾತ್ ಯಾವ ಆಚಾರ್ಯರಿಗೂ ಇಂತಹ ದಿಕ್ಕೇ ಯಾವಾಗಲೂ ಇರಬೇಕೆಂಬ ನಿಯಮವಿರುವದಿಲ್ಲ. ಉಪದೇಶಾನುಗುಣವಾಗಿ ದಿಕ್ಕು ಭಿನ್ನ ಭಿನ್ನವಾಗುತ್ತದೆ. ಪ್ರಣವಾಕ್ಷರಗಳು ಮಾತ್ರ ಯಾವಾಗಲೂ ಒಂದೇರೀತಿಯಿರುತ್ತವೆ.

एकसूत्रं वेष्टयित्वा शिष्यस्याभिमुखो गुरुः ।
शुद्धिं कृत्वा पञ्चगव्यैर्लिंगं शिष्यकरौ तथा ॥५५॥
लिंगं तथाऽर्चयेद्धीमानेकविंशतिपूजनैः ।
मस्तके सप्त पूजाश्च कृत्वा हस्तं तथार्चयेत् ॥५६॥
शास्त्रोक्तविधिना कृत्वा चतुर्भिस्तैश्च संयुतः ।
पञ्चाक्षरीमन्त्रं चैवमुपदिश्य स्वशिष्यकम् ॥५७॥
तल्लिंगं च गले बध्वा गुरुस्तीर्थं प्रदापयेत् ।
तत्सूत्रं दर्भसंयुक्तं कंकणं धारयेत्करे ॥५८॥
एवं हि वीरशैवस्य व्यवहारपरस्य च ।
दीक्षां कुर्याद्यथाशास्त्रं भिक्षुको यदि वर्तते ॥५९॥

---

ಪ್ರಣವಾಕ್ಷರಗಳ ಸೋಲಿಂದಲೇ ದಿಕ್ಕಿನ ನಿರ್ಣಯ ಮಾಡಿಕೊಳ್ಳಬೇಕಲ್ಲದೆ ದಿಕ್ಕಿಗೆ ಪ್ರಾಧಾನ್ಯವಿಲ್ಲ. ಶಿಷ್ಯನಿಗೂ, ಲಿಂಗಕ್ಕೂ, ಗುರುವಿಗೂ ಮತ್ತು ಕಲಶಗಳಿಗೂ ಏಕ ಸೂತ್ರವಾಗುವಂತೆ ದಾರವನ್ನು ಸುತ್ತಿ ತುದಿಗೆ ಎಲೆ, ಅರಿಷಿಣ ಬೇರಿನ ಕಂಕಣವನ್ನು ಕಟ್ಟಿ ಶಿಷ್ಯನ ಸಮ್ಮುಖದಲ್ಲಿ ಗುರುವು ಕೂಡ್ರಬೇಕು. ತರುವಾಯ ನಾಲ್ಕು ಜನ ಋತ್ವಿಜರೊಡನೆ ಕೂಡಿ ಪಂಚಗವ್ಯದಿಂದ ಲಿಂಗ ಮತ್ತು ಶಿಷ್ಯನ ಹಸ್ತಗಳ ಶುದ್ಧಿಯನ್ನು ಮಾಡಿ ಬಳಿಕ ಶಿಷ್ಯನ ಲಿಂಗವನ್ನು ಏಳು ಸಾರೆ, ಶಿಷ್ಯನ ಹಸ್ತಗಳನ್ನು ಏಳು ಸಾರೆ ಹಾಗು ಮಸ್ತಕವನ್ನು ಏಳು ಸಾರೆ ಅಂತು ೨೧ ಸಾರೆ ಪೂಜಾ ಮಾಡಬೇಕು. ನಂತರ ಪಂಚಾಕ್ಷರ ಮಂತ್ರವನ್ನು ತಮ್ಮ ತಮ್ಮ ಶಾಖಾನುಗುಣವಾದುದನ್ನು ಅಂದರೆ ಐದು ವಿಧವಾದ ಪಂಚಾಕ್ಷರ ಮಂತ್ರದಲ್ಲಿ ತಮ್ಮ ತಮ್ಮ ಮಂತ್ರವನ್ನು ಉಪದೇಶ ಮಾಡಿ ಆ ಲಿಂಗವನ್ನು ಶಿಷ್ಯನ ಕಂಠದಲ್ಲಿ ಧರಿಸಿ ಗುರುವು ತೀರ್ಥವನ್ನು ಕೊಡಬೇಕು. ಮೊದಲಿಗೆ ಕೈಗೆ ಕಂಕಣವನ್ನು ಕಟ್ಟಿರಬೇಕು. ॥ ೫೦–೫೮ ॥ ಈ ರೀತಿಯಾಗಿ ವ್ಯವಹಾರದಲ್ಲಿ ತೊಡಗಿದ ವೀರಶೈವನಿಗೆ ಶಾಸ್ತ್ರಾನುಸಾರವಾಗಿ ದೀಕ್ಷೆಯನ್ನು ಮಾಡಬೇಕು.

ಮಾಹೇಶ್ವರ ವರ್ಗದಲ್ಲಿ ಪೂಜ್ಯನಾದ ಮಠಸ್ಥನೊಬ್ಬನನ್ನು ಬಿಟ್ಟು ಉಳಿದ ಗಣಾಚಾರಿ, ಸ್ಥಾವರ, ಮಠಪತಿ, ಕುಮಾರ ಎಂಬ ನಾಲ್ಕು ವಿಧರಾದ ಭಿಕ್ಷಾ ವೃತ್ತಿ

दीक्षान्ते पञ्चमुद्रा वै दत्वा भिक्षां च कारयेत् ।
उपदेशस्त्वेवमेव कर्तव्यो गुरुसत्तमैः ॥ ६० ॥
पञ्चमुद्रांकिताः सर्वे भिक्षुकाः परिकीर्तिताः ।
देहशुद्ध्यर्थमेतेषामुपदेशः कृतो भवेत् ॥ ६१ ॥

इति श्रीमद्वीरशैवसदाचारसंग्रहे वीरशैवप्रकाशिकानुसारेण लघुदीक्षाप्रयोगो नाम द्वादशप्रकरणं समाप्तम् ।

---

ಮಾಡುವವರಿಗೂ ಇದೇ ರೀತಿ ದೀಕ್ಷೆಯನ್ನು ಮಾಡಿದ ಬಳಿಕ ಪಂಚ ಮುದ್ರೆಗಳನ್ನು ಕೊಟ್ಟು ಭಿಕ್ಷಾ ಮಾಡಲಿಕ್ಕೆ ಅಪ್ಪಣೆ ಕೊಡಬೇಕು. ಪಂಚ ಮುದ್ರೆಗಳನ್ನು ಧರಿಸಿ ಕೊಂಡು ಭಿಕ್ಷಾಟನವನ್ನು ಮಾಡುವಂತಹ ಇವರು ಕಾಯಕದ ಗಣಂಗಳೆಂದು ಪ್ರಸಿದ್ಧ ರಾಗಿರುವರು. ಇವರೆಲ್ಲರಿಗೂ ದೇಹಶುದ್ಧಿಗಾಗಿ ದೀಕ್ಷೆಯನ್ನು ಮಾಡಬೇಕು. ಇವರೆಲ್ಲ ರಿಗೂ ಪಂಚ ಮುದ್ರೆಗಳನ್ನು ಕೊಟ್ಟಿದ್ದರೂ ಆಸನಪ್ರದಾನ (ಗದ್ದುಗೆ ಕೊಡುವ) ಸಂಸ್ಕಾರವನ್ನು ಮಾಡದೇ ಇರುವುದರಿಂದ ಇವರೆಲ್ಲರೂ ಅಪೂಜ್ಯರು, ಧರ್ಮ ರಕ್ಷಣೆ ಗಾಗಿ ಪಂಚಮುದ್ರೆಗಳನ್ನು ಧರಿಸಿಕೊಂಡು ಕಾಯಕ ಮಾಡುವವರು.

ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವ ಪ್ರಕಾಶಿಕಾನುಗುಣವಾಗಿ ಹೇಳಲ್ಪಟ್ಟ ಲಘುದೀಕ್ಷಾ ಪ್ರಯೋಗವೆಂಬ ಹನ್ನೆರಡನೆಯ ಪ್ರಕರಣದ ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

## ॥ अथ त्रयोदशप्रकरणम् ॥

अथ कालं च देशं च प्रवक्ष्यामि यथा तथा ।
शुभकाले शुभे मासे शुभतिथ्यां शुभेऽहनि ।
शुभप्रदेशनक्षत्रे दीक्षां कुर्याद्विचक्षणः ॥ १ ॥
शरत्कालश्च वैशाख उत्तमः परिकीर्तितः ।
फाल्गुनो मार्गशीर्षश्च ज्येष्ठमासस्तु मध्यमः ॥ २ ॥
श्रावणमाघमासौ तु कनिष्ठौ समुदाहृतौ ।
चैत्रश्चाषाढमासश्च पुष्यो भाद्रपदस्तथा ।
चत्वारो निंदिता मासा दीक्षायां शिवशासनात् ॥ ३ ॥
मन्त्रारंभस्तु चैत्रे चेद्बहुदुःखफलप्रदः ।
वैशाखे मन्त्रलाभः स्याज्ज्येष्ठे च मरणं ध्रुवम् ॥ ४ ॥

---

## ಅಥ ಹದಿಮೂರನೆಯ ಪ್ರಕರಣವು

### — ದೀಕ್ಷೆಯಲ್ಲಿ ಕಾಲ ದೇಶ ನಿರ್ಣಯ —

ವೀರಶೈವಾಚಾರ ಪ್ರದೀಪಿಕೆಯಲ್ಲಿ ಹೇಳಿದ, ದೀಕ್ಷಾ ಕಾರ್ಯದಲ್ಲಿ ಯೋಗ್ಯವಾದ ಕಾಲವನ್ನು ಮತ್ತು ದೇಶವನ್ನು ಹೇಳುವನು. ಬುದ್ಧಿಶಾಲಿಯಾದ ಗುರುವು ಈ ದೀಕ್ಷಾ ಕಾರ್ಯವನ್ನು ಶುಭಕಾಲ, ಶುಭಮಾಸ, ಶುಭತಿಥಿ, ಶುಭದಿನ (ವಾರ), ಶುಭನಕ್ಷತ್ರ ಮತ್ತು ಶುಭ ಪ್ರದೇಶದಲ್ಲಿ ಮಾಡಬೇಕಾಗುತ್ತದೆ. ॥ ೧ ॥ ವೈಶಾಖ, ಆಶ್ವಿನ, ಕಾರ್ತಿಕ ಈ ಮೂರು ತಿಂಗಳು ದೀಕ್ಷಾ ಕಾರ್ಯದಲ್ಲಿ ಅತ್ಯುತ್ತಮವಾದವುಗಳು. ಜ್ಯೇಷ್ಠ, ಮಾರ್ಗಶಿರ, ಫಾಲ್ಗುಣ ಈ ಮೂರು ತಿಂಗಳು ಮಧ್ಯಮವಾದವುಗಳು. ಶ್ರಾವಣ, ಮಾಘ ಮಾಸಗಳು ಕನಿಷ್ಠವಾದವುಗಳು. ಚೈತ್ರ, ಆಷಾಢ, ಭಾದ್ರಪದ, ಪುಷ್ಯ ಈ ನಾಲ್ಕು ತಿಂಗಳು ನಿಂದ್ಯವಾದವುಗಳೆಂದು ಶಿವಾಜ್ಞೆಯಿರುವದು. ॥ ೨-೩ ॥

ಚೈತ್ರ ಮಾಸದಲ್ಲಿ ದೀಕ್ಷಾಪೂರ್ವಕ ಮಂತ್ರಾರಂಭ ಮಾಡುವದು ಬಹು ದುಃಖ ಕರವಾದುದು, ವೈಶಾಖದಲ್ಲಿ ಮಂತ್ರಸಿದ್ಧಿಯಾಗುವದು, ಜ್ಯೇಷ್ಠ ಮಾಸದಲ್ಲಿ ಮರಣಕ್ಕೆ

आषाढे बन्धुनाशः स्यात्पूर्णायुः श्रावणे भवेत् ।
प्रजानाशो भाद्रपदे सर्वतः शुभमाश्विने ॥ ५ ॥
कार्तिके मन्त्रसिद्धिः स्यान्मार्गशीर्षः शुभावहः ।
पुष्ये तु मन्त्रहानिः स्यान्माघे मेधाविवर्धनम् ।
फाल्गुने सर्वसिद्धिः स्यादिति मन्त्रविदो विदुः ॥ ६ ॥
शुक्लपक्षे शुभा दीक्षा कृष्णे वा पञ्चमी दिनम् ।
शुक्लपक्षे बुभुक्षूणां मुमुक्षूणां सितेतरे ॥ ७ ॥
चतुर्थीं नवमीं षष्ठीमष्टमीं च चतुर्दशीम् ।
पौर्णमासीं विना शेषा हितास्तु तिथयो मताः ॥ ८ ॥
चतुर्दशी चतुर्थी च षष्ठी चैवाष्टमी तथा ।
नवमी द्वादशी चैव पक्षतिथ्यः प्रकीर्तिताः ॥ ९ ॥
रोहिणी मृगशीर्षं च मघा पुष्यपुनर्वसू ।

---

ಸಮಾನವಾದ ಕಷ್ಟ ಪ್ರಾಪ್ತವಾಗುವದು, ಆಷಾಢದಲ್ಲಿ ಬಂಧು ನಾಶವಾಗುವದು, ಶ್ರಾವಣದಲ್ಲಿ ಪೂರ್ಣಾಯಸ್ಸು, ಭಾದ್ರಪದದಲ್ಲಿ ಸಂತಾನ ನಾಶವು, ಆಶ್ವಿನದಲ್ಲಿ ಸರ್ವವಿಧ ಶುಭವು, ಕಾರ್ತಿಕದಲ್ಲಿ ಮಂತ್ರಸಿದ್ಧಿಯು, ಮಾರ್ಗಶಿರದಲ್ಲಿ ಶುಭವು, ಪುಷ್ಯದಲ್ಲಿ ಮಂತ್ರಹಾನಿಯು, ಮಾಘದಲ್ಲಿ ಬುದ್ಧಿಯ ವೃದ್ಧಿಯು, ಫಾಲ್ಗುಣದಲ್ಲಿ ಸರ್ವವಿಧವಾದ ಸಿದ್ಧಿಯು ಉಂಟಾಗುವದೆಂದು ಮಂತ್ರ ಶಾಸ್ತ್ರವನ್ನು ಬಲ್ಲವರು ಹೇಳುವರು. ॥ ೪–೬ ॥ ಶುಕ್ಲಪಕ್ಷದಲ್ಲಿ ದೀಕ್ಷಾಕಾರ್ಯವು ಶುಭಕರವಾದುದು ಕೃಷ್ಣಪಕ್ಷದಲ್ಲಿ ಪಂಚಮೀ ವರೆಗೆ ಶುಭವಾದುದು. ವಿಷಯ ಭೋಗಾಪೇಕ್ಷೆಯುಳ್ಳವರಿಗೆ ಶುಕ್ಲಪಕ್ಷವು ಶುಭಕರವಾದುದು, ಮೋಕ್ಷಾಪೇಕ್ಷಿಗಳಿಗೆ ಕೃಷ್ಣಪಕ್ಷವು ಉತ್ತಮವಾದುದು ॥ ೭–೮ ॥ ದೀಕ್ಷಾಕಾರ್ಯದಲ್ಲಿ ಚತುರ್ಥಿ ಷಷ್ಠೀ, ಅಷ್ಟಮೀ, ನವಮೀ, ಚತುರ್ದಶೀ, ಪೂರ್ಣಿಮಾ, ಅಮಾವಾಸ್ಯಾ ಈ ಏಳು ತಿಥಿಗಳನ್ನು ಬಿಟ್ಟು ಉಳಿದ ತಿಥಿಗಳು ಶುಭವಾದವುಗಳು ಚತುರ್ಥಿ, ಷಷ್ಠೀ, ಅಷ್ಟಮೀ, ನವಮೀ, ದ್ವಾದಶೀ, ಚತುರ್ದಶೀ ಇವು ಪಕ್ಷಚ್ಛಿದ್ರ ತಿಥಿಗಳೆಂದು ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವವು ಇವುಗಳಲ್ಲಿ ಶುಭಕಾರ್ಯಗಳನ್ನು ಮಾಡಬಾರದು. ॥ ೮–೯ ॥ ರೋಹಿಣೀ, ಮೃಗಶಿರ,

स्वाती हस्तानुराधा च श्रवणं रेवती तथा ।
त्रीण्युत्तराणि मूला च नक्षत्राणि चतुर्दश ॥ १० ॥
व्याघातं परिघं वज्रं व्यतीपातं च वैधृतिः ।
गंडातिगंडौ शूलं च विष्कंभं वर्जयेच्छुभे ॥ ११ ॥
बवादिवणिजांतानि शुभानि करणानि षट् ।
परितो विपरीतं वा विष्टे नष्टा तु मंगले ॥ १२ ॥
सुतिथेः श्रियमाप्नोति वारादायुष्यवर्धनम् ।
नक्षत्राद्धरते पापं योगाद्रोगनिवारणम् ।
करणात्कार्यसिद्धिः स्यातपञ्चांगं फलमुत्तमम् ॥ १३ ॥
वृषभो वाथ कुम्भो वा वृश्चिकः सिंह एव च ।
मिथुनं वापि कन्या च धनुर्मीनमथापि वा ॥ १४ ॥

---

ಪುನರ್ವಸು, ಪುಷ್ಯ, ಮಘಾ, ಉತ್ತರ, ಹಸ್ತ, ಸ್ವಾತಿ, ಅನುರಾಧ, ಮೂಲ, ಉತ್ತರಾಷಾಢ, ಶ್ರವಣ, ಉತ್ತರಾಭಾದ್ರ, ರೇವತೀ ಈ ಹದಿನಾಲ್ಕು ನಕ್ಷತ್ರಗಳು ದೀಕ್ಷಾಕ್ಕೆ ಶುಭವಾದವುಗಳು. ವಿಷ್ಕಂಭ, ಅತಿಗಂಡ, ಶೂಲ, ಗಂಡ, ವ್ಯಾಘಾತ, ವಜ್ರ, ವ್ಯತೀಪಾತ, ಪರಿಘ, ವೈಧೃತಿ ಈ ಒಂಬತ್ತು ಯೋಗಗಳನ್ನು ಶುಭಕಾರ್ಯದಲ್ಲಿ ತ್ಯಜಿಸತಕ್ಕದ್ದು. ಉಳಿದ ಯೋಗಗಳು ತಮ್ಮ ಹೆಸರಿಗೆ ತಕ್ಕಂತೆ ಶುಭ ಫಲವನ್ನು ಕೊಡುವವು. ಬವ, ಬಾಲವ, ಕೌಲವ, ತೈತುಲ, ಗರಜ, ವಣಿಕ್ ಈ ಆರು ಕರಣಗಳು ಶುಭವಾದವು, ಮುಂದಿನ ಐದು ಕರಣಗಳು ಅಶುಭ ಫಲವನ್ನು ಕೊಡುವಂತವುಗಳು. ಭದ್ರಕರಣದಲ್ಲಿ ಮಾಡಿದ ಕಾರ್ಯವು ನಷ್ಟವಾಗುವದು. ॥ ೧೦–೧೨ ॥

ತಿಥಿ, ವಾರ, ನಕ್ಷತ್ರ, ಯೋಗ, ಕರಣ ಈ ಐದು ಅಂಗಗಳೂ ಶುಭವಾದವುಗಳಾದರೆ ಸರ್ವಶ್ರೇಷ್ಠವಾದ ಉತ್ತಮ ಫಲ ಪ್ರಾಪ್ತಿಯು. ತಿಥಿಯು ಶುಭವಾದದ್ದು ಇದ್ದರೆ ಸಂಪತ್ತು, ವಾರವು ಶುಭವಾದರೆ ಆಯುಷ್ಯವೃದ್ಧಿ, ನಕ್ಷತ್ರ ಶುಭವಾದದ್ದು ಇದ್ದರೆ ಪಾಪವು ನಾಶವಾಗುತ್ತದೆ. ಯೋಗವು ಶುಭವಾದರೆ ರೋಗ ನಿವಾರಣೆಯಾಗುವದು. ಕರಣವು ಶುಭವಾದದ್ದಿದ್ದರೆ ಕಾರ್ಯಸಿದ್ಧಿಯಾಗುವದು. ॥ ೧೩ ॥
ವೃಷಭ, ಸಿಂಹ, ವೃಶ್ಚಿಕ, ಕುಂಭ ಎಂಬ ನಾಲ್ಕು ಸ್ಥಿರ ಲಗ್ನಗಳಲ್ಲಿ ಮತ್ತು ಮಿಥುನ,

एते हि राशयः प्रोक्ताश्चरराशींश्च वर्जयेत् ।
चरौ मकरमेषौ च तुला कर्काटकं तथा ।
दीक्षायां वर्जयेदेतान् शेषेषु च समाचरेत् ॥ १५ ॥
बुधोदयं तु कुर्वीत शुक्रोदयमथापि वा ।
गुरूदयं वा कुर्वीत त्यजेत्पापेन संयुतान् ॥ १६ ॥
अष्टमस्था ग्रहास्सर्वे नेष्टा द्वादशके स्थिताः ।
शुक्रे लग्नगते चास्ति केंद्रस्थानगते रवौ ।
नश्यंति सकला दोषाः शंभुनैवमुदाहृतम् ॥ १७ ॥
दीक्षाकालः समाख्यातो देशश्चाप्यधुनोच्यते ।
गंगायां यमुनायां च सरस्वत्यास्तटेऽथवा ॥ १८ ॥
तथा वृषद्वतीतीरे गोदावर्यामपांनिधौ ।
कावेरी गौतमीतीरे वाप्यास्तीरे महावटे ॥ १९ ॥

---

ಕನ್ಯಾ, ಧನಸ್ಸು, ಮೀನ ಎಂಬ ನಾಲ್ಕು ದ್ವಿಸ್ವಭಾವಲಗ್ನಗಳಲ್ಲಿ ದೀಕ್ಷಾ ಕಾರ್ಯವು ಪ್ರಶಸ್ತವಾದುದು. ಚರಲಗ್ನಗಳಲ್ಲಿ ಅಂದರೆ ಮೇಷ, ಕರ್ಕಾಟಕ, ತುಲಾ, ಮಕರ ಈ ಲಗ್ನಗಳಲ್ಲಿ ದೀಕ್ಷಾಕಾರ್ಯವನ್ನು ಮಾಡಬಾರದು. ॥ ೧೪-೧೫ ॥ ಮತ್ತು ದೀಕ್ಷಾ ಮಾಡುವ ಕಾಲದಲ್ಲಿ ಬುಧ, ಗುರು, ಶುಕ್ರ ಈ ಮೂರು ಗ್ರಹಗಳು ಅಸ್ತಂಗತಗಳಾಗಿರಬಾರದು. ಮತ್ತು ಈ ಮೂರು ಪಾಪಗ್ರಹಗಳಿಂದ ಕೂಡಿಕೊಂಡಿರ ಬಾರದು. ದೀಕ್ಷಾ ಕಾಲದ ಲಗ್ನಕ್ಕೆ ಎಂಟನೆಯ ಮತ್ತು ಹನ್ನೆರಡನೆಯ ಸ್ಥಾನದಲ್ಲಿ ಯಾವ ಗ್ರಹವೂ ಇರಬಾರದು. ಲಗ್ನದಲ್ಲಿ ಶುಕ್ರನು, ಕೇಂದ್ರಗಳಲ್ಲಿ ೧-೪-೭-೧೦ ರಲ್ಲಿ ಸೂರ್ಯನು ಇದ್ದುದಾದರೆ ಸಕಲ ದೋಷಗಳು ನಿವಾರಣೆಯಾಗುವವೆಂದು ಪರಶಿವನು ಅಪ್ಪಣೆ ಮಾಡಿರುವನು. ॥ ೧೬-೧೭ ॥ ಇಲ್ಲಿಯ ವರೆಗೆ ದೀಕ್ಷಾ ಕಾಲವು ಹೇಳಲ್ಪಟ್ಟಿತು. ಇನ್ನು ಸ್ಥಾನವು ಹೇಳಲ್ಪಡುವದು.

ಗಂಗಾ, ಯಮುನಾ, ಸರಸ್ವತೀ, ವೃಷದ್ವತೀ, ಗೋದಾವರೀ, ಕಾವೇರಿ, ಗೌತಮೀ ಈ ನದಿಗಳ ತೀರದಲ್ಲಿ ಅಥವಾ ತೀರದಲ್ಲಿರುವ ಕ್ಷೇತ್ರಗಳಲ್ಲಿ, ಸಮುದ್ರದ ದಂಡೆಯಲ್ಲಿ, ಇತರ ಪುಣ್ಯಕ್ಷೇತ್ರಗಳಲ್ಲಿ, ಹೊಂಡದ ದಂಡೆಯಲ್ಲಿ, ದೊಡ್ಡ ಆಲದ

पुण्यायतनतीर्थेषु नदीनां संगमेषु च ।
भवनेषु च रम्येषु वनेषूपवनेषु च ॥ २० ॥
शिवक्षेत्रशिवारामसमीपे वा शुभे गृहे ।
शिवालयसमीपे वा देशिकस्य मठेऽपि वा ।
स्थानेष्वेतेषु हे गौरि शिवदीक्षां तु कारयेत् ॥ २१ ॥
पारमेश्वरतंत्रे । अपूर्वदीक्षाकरणे विधिरेवमुदाहृतः ।
यद्यवांतरदीक्षा चेत्सर्वकालो न संशयः ॥ २२ ॥

इति दीक्षायां कालदेशनिर्णयो नाम त्रयोदशप्रकरणं समाप्तम् ।

---

ಮರದ ಬುಡದಲ್ಲಿ, ಪುಣ್ಯ ನದಿಗಳ ಸಂಗಮದಲ್ಲಿ ದೀಕ್ಷಾ ಕಾರ್ಯವನ್ನು ಮಾಡುವದು ಅತ್ಯಂತ ಪ್ರಶಸ್ತವು. ಭವ್ಯವಾದ ಮನೆಗಳಲ್ಲಿ, ರಮ್ಯವಾದ ಅರಣ್ಯದಲ್ಲಿ, ಸುಂದರವಾದ ಉಪವನದಲ್ಲಿ, ಶಿವಕ್ಷೇತ್ರ, ಶಿವಾಲಯ ಇವುಗಳ ಸಮೀಪದಲ್ಲಿ, ಗುರುಗಳ ಮಠದಲ್ಲಿ ದೀಕ್ಷಾ ಕಾರ್ಯವನ್ನು ನೆರವೇರಿಸಬೇಕು ॥ ಎಲೈ ದೇವಿಯೆ ಈ ಪ್ರಕಾರವಾಗಿ ದೀಕ್ಷಾ ಕಾರ್ಯಕ್ಕೆ ಪ್ರಶಸ್ತಗಳಾದ ಕಾಲ, ದೇಶಗಳನ್ನು ಹೇಳಿರುವೆನು. ॥ ೧೮-೨೧ ॥ ಇಲ್ಲಿಯ ವರೆಗೆ ಹೇಳಿದ ಕಾಲ ದೇಶಗಳ ವಿವರಣೆಯು ಹೊಸದಾದ ದೀಕ್ಷಾ ಕಾರ್ಯದಲ್ಲಿ ಮಾತ್ರ ನೋಡಲ್ಪಡತಕ್ಕದ್ದು, ಅವಾಂತರ ದೀಕ್ಷೆಯಲ್ಲಿ (ಯಾವುದಾದರೊಂದು ಕಾರಣ ದಿಂದ ಪುನಃ ಪಡೆಯುವ ದೀಕ್ಷೆಯಲ್ಲಿ) ಕಾಲದೇಶಾದಿಗಳನ್ನು ನೋಡಬೇಕಾದುದಿಲ್ಲ. ಗುರುವಿನ ಕೃಪೆಯಾದ ಕಾಲವು ಗುರುವಿನ ಮನಸ್ಸಿಗೆ ಪ್ರಿಯವಾದ ಸ್ಥಾನವು ಶುಭ ವಾದವುಗಳು ಎಂದು ಪಾರಮೇಶ್ವರ ಆಗಮದಲ್ಲಿ ಪರಮಾತ್ಮನು ಅಪ್ಪಣೆ ಮಾಡಿ ರುವನು. ॥ ೨೨ ॥

ಇಲ್ಲಿಗೆ ವೀರಶೈವಾಚಾರ ಪ್ರದೀಪಿಕೆಯಲ್ಲಿ ಹೇಳಿದ ದೀಕ್ಷಾ ಕಾರ್ಯಕ್ಕೆ ಪ್ರಶಸ್ತ ಗಳಾದ ಕಾಲದೇಶಾದಿಗಳನ್ನು ಹೇಳುವ ಹದಿಮೂರನೆಯ ಪ್ರಕರಣದ ಪಂಡಿತ ಬಸವರಾಜಶಾಸ್ತ್ರಿ ಪಗಡದಿನ್ನಿ ಬೃಹನ್ಮಠ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

## ॥ अथ चतुर्दशप्रकरणम् ॥

ब्रह्मवेदस्तदध्येता ब्रह्मचारीति गीयते ।
गुरुशुश्रूषणादेष शिष्य इत्यभिधीयते ॥ १ ॥
वंश्य आगन्तुकश्चेति द्विविधः शिष्य उच्यते ।
मुख्यः सामान्य इत्येवं पुनर्वंश्यो द्विधा मतः ॥ २ ॥
ब्रह्मचारी गृही चेति द्विधा मुख्यो विभिद्यते ।
उक्तलक्षणसंपन्नो ब्रह्मचारी पुनस्त्रिधा ॥ ३ ॥
पट्टाभिषेकवानाद्यः प्रोक्तश्चरपतिस्तथा ।
निराभारस्तृतीयः स्यात्सर्वलोकेषु विश्रुतः
संपाद्य शिष्यं स गुरुर्द्वितीयो विवहेत्पुनः ॥ ४ ॥

---

## ಅಥ ಹದಿನಾಲ್ಕನೆಯ ಪ್ರಕರಣವು

### — ಶಿಷ್ಯವರ್ಗ, ಪುತ್ರವರ್ಗ ಸಂಪ್ರದಾಯ, ಪಟ್ಟ ಚರಾಧಿಕಾರ ಕಥನ —

ಬ್ರಹ್ಮಚರತೀತಿ ಬ್ರಹ್ಮಚಾರೀ ಬ್ರಹ್ಮ ಎಂದರೆ ವೇದ, ದೀಕ್ಷಾ ಸಂಸ್ಕಾರವನ್ನು ಹೊಂದಿದ ನಂತರ ಆ ವೇದವನ್ನು ಅಧ್ಯಯನ ಮಾಡುವವನು ಬ್ರಹ್ಮಚಾರಿಯು. ಈ ಬ್ರಹ್ಮಚಾರಿಯೇ ಗುರುಸೇವೆ ಮಾಡುವದರಿಂದ ಶಿಷ್ಯನೆಂದು ಹೇಳಲ್ಪಡುವನು. ॥೧॥ ಶಿಷ್ಯನು ವಂಶ್ಯ, ಆಗಂತುಕ ಎಂದು ಎರಡು ವಿಧವಾಗಿರುವನು. ವಂಶೀಯ ಶಿಷ್ಯನೆಂದರೆ ಒಂದೇ ಸಂತತಿಗೆ ಸಂಬಂಧಿಸಿದವನು. ಆಗಂತುಕನೆಂದರೆ ಬೇರೆ ಬೇರೆ ಸಂತತಿಗೆ ಸಂಬಂಧಿಸಿದವನು. ವಂಶ್ಯ ಶಿಷ್ಯನು ಮುಖ್ಯ, ಸಾಮಾನ್ಯ ಎಂದು ಮತ್ತೆ ಎರಡು ವಿಧವಾಗಿರುವನು. ಇವರಲ್ಲಿ ಮುಖ್ಯನೆಂದರೆ ಮಹಾಸೂತ್ರಕ್ಕೆ ಸೇರಿದವನು, ಸಾಮಾನ್ಯನೆಂದರೆ ಉಪಸೂತ್ರಗಳಿಗೆ ಸಂಬಂಧಿಸಿದವನು. ॥ ೨ ॥ ಇವರಿಬ್ಬರಲ್ಲಿ ಮುಖ್ಯ ಶಿಷ್ಯನು ಬ್ರಹ್ಮಚಾರಿ, ಗೃಹಸ್ಥ ಎಂದು ಎರಡು ವಿಧವಾಗಿರುವನು. ಮೇಲೆ ಹೇಳಿದ ಲಕ್ಷಣವುಳ್ಳ ಬ್ರಹ್ಮಚಾರಿಯು ಮೂರು ಪ್ರಕಾರವಾಗಿರುವನು. ॥೩॥ ಪಟ್ಟಾಧಿಕಾರಿಯು ಪ್ರಥಮನು, ಚರಾಧಿಕಾರಿಯು ದ್ವಿತೀಯನು, ನಿರಾಭಾರಿಯು ಮೂರನೆಯವನು. ಇವರು ಎಲ್ಲಾ ದೇಶಗಳಲ್ಲಿಯೂ ಪ್ರಸಿದ್ಧರಾಗಿರುವರು. ಅಕಸ್ಮಾತ್ತಾಗಿ ವಂಶವು ನಷ್ಟವಾಗುವ ಪ್ರಸಂಗ ಉಂಟಾದಾಗ ಎರಡನೆಯ ಗುರುವಾದ ಚರಾಧಿಕಾರಿಯು ಶಿಷ್ಯನನ್ನು ತಯಾರ ಮಾಡಿ ತನ್ನ ವಂಶ ವೃದ್ಧಿಗಾಗಿ ವಿವಾಹವನ್ನು ಮಾಡಿಕೊಳ್ಳಬೇಕು. ॥ ೪ ॥ ಬ್ರಹ್ಮಚಾರಿ

पूर्वोक्तपञ्चकानां च वीरनन्द्यादयो मताः ।
गोत्राधिकारिणस्तेषां द्वौ वर्गौ च मठस्थले ॥ ५ ॥
प्रथमः पुत्रवर्गः स्याद्द्वितीयः शिष्यवर्गकः ।
वंशानुसारतो यत्र गुरुपट्टाभिषेचनम् ।
क्रियते सर्वदा तस्मात्पुत्रवर्ग इतीरितः ॥ ६ ॥
तत्सन्ततेरभावे तु शिष्यवर्गः प्रजायते ।
शिष್ಯವರ್ಗमठे तत्र चर पट्टाभिषेचने ॥ ७ ॥
तत्तच्छाखासु जातानां यत्र कुत्रापि वर्तिनाम् ।
वीरमाहेश्वराणां हि स्व स्वगोत्रानुसारतः ॥ ८ ॥

---

ಯಾಗಿದ್ದ ಇವನು ಗೃಹಸ್ಥನಾಗುವುದರಿಂದ ಪತಿತನಾಗುವದಿಲ್ಲ. ಆದಕಾರಣ ತನ್ನ ಅಧಿಕಾರವನ್ನು ಕಳೆದುಕೊಳ್ಳುವದಿಲ್ಲ.

ಹಿಂದೆ ಹೇಳಿದ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಐದು ಜನ ಗೋತ್ರಾಧಿಕಾರಿಗಳಾದ ಮಾಹೇಶ್ವರರ ಸಂತತಿಯವರಲ್ಲಿ ಪುತ್ರವರ್ಗಮಠ, ಶಿಷ್ಯವರ್ಗ ಮಠವೆಂದು ಎರಡು ವಿಧ ಮಠಗಳಿರುತ್ತವೆ. ಪುತ್ರವರ್ಗಮಠವೆಂದರೆ ಆಯಾ ಗೋತ್ರ ಸೂತ್ರಗಳುಳ್ಳ ಮಾಹೇಶ್ವರರ ಒಂದೇ ವಂಶದಲ್ಲಿ ಉತ್ತರೋತ್ತರ ಚರಪಟ್ಟಾಧಿಕಾರಿ ಗಳನ್ನು ಮಾಡಿಕೊಳ್ಳುತ್ತ ಬಂದ ಮಠವು. ಇಂತಹ ಮಠಸ್ಥರಲ್ಲಿ ಆಕಸ್ಮಾತ್ ಸಂತತಿಯು ನಿಂತು ಹೋದರೆ ಅಂತಹ ವಂಶೀಯರ ಅಭಾವ ಕಾಲದಲ್ಲಿ ಆ ಮಠದ ಗೋತ್ರ ಸೂತ್ರಾನುಯಾಯಿಗಳಾದ ಮಾಹೇಶ್ವರ ವಟುಗಳು ಯಾವ ಭಾಗದಲ್ಲಿಯೇ ಇರಲಿ ಅವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿದಾಗ ಆ ಪುತ್ರವರ್ಗ ಮಠವೂ ಶಿಷ್ಯವರ್ಗ ಮಠವಾಗುವದು. ಕೆಲವು ಮಠಗಳು ಆದಿಯಿಂದಲೂ ಶಿಷ್ಯವರ್ಗ ಮಠಗಳಾ ಗಿರುತ್ತವೆ. ಗೃಹಸ್ಥ ಮಾಹೇಶ್ವರರು ಸಾಮಾನ್ಯ ವೀರಶೈವರಿಗೆ ತಾವು ಗುರುಗಳಾಗಿ ದ್ದರೂ ತಮ್ಮ ವಂಶದಲ್ಲಿಯೇ ಜನಿಸಿ ಚರ ಪಟ್ಟಾಧಿಕಾರವನ್ನು ಹೊಂದಿದವರಿಗೆ ತಾವೂ ಶಿಷ್ಯರಾಗುವರು ಮತ್ತು ಅದೇ ಗೋತ್ರ ಸೂತ್ರಗಳಿಗೆ ಸಂಬಂಧಪಟ್ಟ ಬೇರೆ ಸಂತತಿ ಯವರೂ ಶಿಷ್ಯರಾಗುವರು. ಇಂತಹ ಶಿಷ್ಯರಾದ ಮಾಹೇಶ್ವರ ವಟುಗಳನ್ನು ಅಧಿಕಾರಿ

दीक्षां कृत्वा पट्टवद्धान् कुर्वन्ति चरसंज्ञकान् ।
येष्वेवं हि प्रकुर्वन्ति मठास्ते शिष्यवर्गिणाम् ॥ ९ ॥

अथ पुत्रवर्गसंप्रदायः

इतःपरं प्रवक्ष्यामि व्यवस्थां पुत्रवर्गिणाम् ।
गुरुस्थलसमाख्याता वीरमाहेश्वराभिधाः ॥ १० ॥
एते गुरुपदाध्यक्षा नान्ये लांछनधारिणः ।
अतः स्ववंशजान् बालान् गृहीत्वा तान्वरानने ॥ ११ ॥
वीरमाहेश्वरीं दीक्षां कृत्वा ते पुत्रवर्गिणः ।
पट्टाभिषेकयुक्तांश्च शंखमुद्रान्वितान्भुवि ।
षट्स्थलज्ञानसंपन्नाः कुर्वन्ति चरसंज्ञकान् ॥ १२ ॥

---

ಗಳನ್ನಾಗಿ ಮಾಡುವದರಿಂದ ಈ ವಿಧ ಮಠಗಳಿಗೆ ಶಿಷ್ಯವರ್ಗ ಮಠವೆಂಬ ಹೆಸರು ಅನ್ವರ್ಥಕ ವಾಗಿದೆ. ॥ ೫-೯ ॥ ಮೂಲ ಅವತಾರಿಗಳಾದ ಮಹಾಚಾರ್ಯರ ತರುವಾಯ ಆ ಪಂಚಪೀಠಗಳಿಗೆ ಅಂದಿನಿಂದ ಇಂದಿನ ವರೆಗೂ ಆಯಾಯ ಗೋತ್ರ ಸೂತ್ರಗಳುಳ್ಳ ಮಠಸ್ಥರಾದ ಮಾಹೇಶ್ವರ ವಟುಗಳನ್ನೇ ಪೀಠಾಧಿಕಾರಿಗಳನ್ನಾಗಿ ಮಾಡುತ್ತ ಬಂದಿರು ವದು ಶಿಷ್ಯವರ್ಗ ಸಂಪ್ರದಾಯವು.

— ಅಥ ಪುತ್ರವರ್ಗ ಸಂಪ್ರದಾಯ —

ಎಲೈ ದೇವಿಯೇ ಇನ್ನು ಮುಂದೆ ಪುತ್ರವರ್ಗ ಮಠಗಳ ವ್ಯವಸ್ಥೆಯನ್ನು ಹೇಳುವೆನು ಕೇಳು. ಗುರುಸ್ಥಲದವರೆಂದು ಪ್ರಸಿದ್ಧರಾದಂಥ ವೀರಮಾಹೇಶ್ವರರು (ಮಠಸ್ಥರು) ಗುರುಸ್ಥಾನಕ್ಕೆ ಒಡೆಯರು, ಕೇವಲ (ಜಂಗಮ) ವೇಷಧಾರಿಗಳಾದ ಇತರರು ಗುರು ಸ್ಥಾನಕ್ಕೆ ಅರ್ಹರಲ್ಲ. ಆದುದರಿಂದ ಷಟ್‌ಸ್ಥಲ ಜ್ಞಾನಸಂಪನ್ನರಾದ, ಪುತ್ರವರ್ಗ ಮಠಾಧಿಕಾರಿಗಳಾದ ಮಾಹೇಶ್ವರರು ತಮ್ಮ ವಂಶದ ಬಾಲಕರನ್ನು ವಟು ವನ್ನಾಗಿ ಗ್ರಹಿಸಿ, ವೀರಮಾಹೇಶ್ವರ ದೀಕ್ಷೆಯನ್ನು ಮಾಡಿ ಮುಂದೆ ಯೋಗ್ಯ ಕಾಲದಲ್ಲಿ ಶಂಖ, ಮುದ್ರಾ, ಗಳಿಗಿ ಬಟ್ಟಲು (ಗಿಣಿಲು) ಮುಂತಾದ ಗುರುಚಿಹ್ನ ಗಳೊಂದಿಗೆ ಪಟ್ಟಾಧಿಕಾರವನ್ನಾಗಲಿ ಅಥವಾ ಚರಾಧಿಕಾರವನ್ನಾಗಲಿ ಮಾಡುವರು. ಅರ್ಥಾತ್ ಗುರುಸ್ಥಲದ ಮಠಾಧಿಕಾರಿಗಳಾದ ಮಾಹೇಶ್ವರರ ಮಕ್ಕಳೇ ಮಠಾಧಿಕಾರ ವನ್ನು ವಹಿಸಬೇಕು. ॥ ೧೦-೧೨ ॥ ಆದರೆ ವ್ಯವಹಾರಪರರಾದ ಜಂಗಮರು (ಗಣಂ

व्यवहारपरा ये च ये सेवापरजङ्गमाः ।
नास्ति तेषां महादीक्षा वीरमाहेश्वराभिधा ॥ १३ ॥
वीरशैवाभिधा दीक्षा तेषां तु नियता शिवे ।
दीक्षान्ते पञ्चमुद्रा वै देयाः स्वासनमन्तरा ।
पञ्चमुद्रा वहन्तस्ते भिक्षुकाः परिकीर्तिताः ॥ १४ ॥
गुर्वासनविहीनत्वान्नास्त्येषां च गुरोः पदम् ।
*कुण्डानां गोलकानां तु नास्ति दीक्षा वरानने ॥ १५ ॥

इति पुत्रवर्गसंप्रदायकथनम् ।

अथ पट्टाभिषेकविवरणम् वीरशैवप्रकाशिकायाम् ।
पट्टाभिषेचनविधिं वक्तुमिच्छामि सांप्रतम् ।

---

ಗಳ)ಗೂ, ಸೇವಾಪರರಾದ (ಮಠಪತ್ತಿ ಸ್ಥಾವರ ಮುಂತಾದ)ವರಿಗೂ ವೀರಮಾಹೇಶ್ವರ ನಾಮಕವಾದ ಮಹಾದೀಕ್ಷೆಯನ್ನು ಮಾಡಬಾರದು. ॥ ಇವರಿಗೆ ವೀರಶೈವ ನಾಮಕವಾದ ದೀಕ್ಷೆಯೇ ಮಾಡಲ್ಪಡತಕ್ಕದೆಂದು ನಿರ್ಣಯವಾಗಿದೆ. ಎಲೈ ದೇವಿಯೇ ಈ ಸಾಮಾನ್ಯದೀಕ್ಷಾದ ಕೊನೆಯಲ್ಲಿ ಗುರುಸ್ಥಾನವ(ಗದ್ದುಗೆಯ)ನ್ನು ಬಿಟ್ಟು, ಕೇವಲ ಪಂಚಮುದ್ರೆಗಳನ್ನಷ್ಟೇ ಇವರಿಗೆ ಕೊಡತಕ್ಕದ್ದು. ಇವರು ಆ ಪಂಚಮುದ್ರೆಗಳನ್ನು ಧರಿಸಿಕೊಂಡಂಥವರಾಗಿ ಕಾಯಕವನ್ನು ಮಾಡುತ್ತ ಭಿಕ್ಷಾಟನವನ್ನು ಮಾಡುವರು. ಇವರಿಗೆ ಗುರುವಿನ ಆಸನವು (ಗದ್ದುಗೆಯು) ದೊರೆತಿಲ್ಲವಾದುದರಿಂದ ಇವರು ಗುರು ಪೀಠಕ್ಕೆ ಅಧಿಕಾರಿಗಳಾಗಲು ಅರ್ಹರಲ್ಲ. ಇದೇ ರೀತಿಯಾಗಿ ಕುಂಡರಿಗೂ (ಗಂಡನು ಇರುವಾಗ ಸ್ತ್ರೀಯಳು ವ್ಯಭಿಚಾರದಿಂದ ಯಾವ ಮಕ್ಕಳನ್ನು ಹಡೆದಿರುವಳೊ ಅವರು ಕುಂಡರು) ಗೋಲಕರು (ಗಂಡ ಸತ್ತ ಬಳಿಕ ವ್ಯಭಿಚಾರದಿಂದ ಹುಟ್ಟಿದವರು ಗೋಲಕರು) ಇಂಥವರಿಗೆ ವೀರಮಾಹೇಶ್ವರ ದೀಕ್ಷೆಯನ್ನು ಮಾಡತಕ್ಕದ್ದಲ್ಲವೆಂದು ಪರಮಾತ್ಮನು ಪಾರ್ವತಿಯ ಮುಂದೆ ಹೇಳಿರುವನು. ॥ ೧೩-೧೫ ॥ ಹೀಗೆ ಪುತ್ರವರ್ಗ ಸಂಪ್ರದಾಯವು.

**— ಪಟ್ಟಾಭಿಷೇಕ ವಿವರಣೆಯು —**

ವೀರಶೈವ ಪ್ರಕಾಶಿಕೆಯಲ್ಲಿ— ಪರಮಾತ್ಮನು ಪಾರ್ವತಿಯನ್ನು ಕುರಿತು ಎಲೈ ದೇವಿಯೇ ನಿನಗೆ ಈಗ ಪಟ್ಟಾಭಿಷೇಕ ವಿಧಿಯನ್ನು ಹೇಳುವೆನು ಕೇಳು. ಶಂಖ

---

* अमृते जारजः कुण्डो मृते भर्तरि गोलकः ॥

सिंहासनाधिपतिभिः शिखामुद्रादिसंयुतैः ।
पञ्चमुद्रान्वितो भूत्वा गुरुः पट्टाभिषेचयेत् ॥ १६ ॥
पूर्वोक्तविधिना सम्यगुपदिष्टं स्वगोत्रजम् ।
संविदित्वा यथाशास्त्रं कुर्यात्पट्टाभिषेचनम् ॥ १७ ॥
स्वशाखासूत्रगोत्रेषु कलशप्रवरादिषु ।
जटाकाषायदण्डेषु चैकहीनो न पूज्यते ॥ १८ ॥
तस्मादेतल्लक्षणानि पूज्यानि च वरानने ।
बहुभिः संमतो यस्तु गुरुत्वे निहितं पुमान् ।
पट्टाभिषिक्तो बहुभिः स पूज्यो भुवि नापरः ॥ १९ ॥
अथ पट्टाभिषेकस्य वक्ष्ये लक्षणमादरात् ।
उत्तरायणपुण्येऽन्हि चंद्रतारानुकूलतः ।
शुभलग्ने शुभे वारे कुर्यात्पट्टाभिषेचनम् ॥ २० ॥

---

ಮುದ್ರಾದಿ ಗುರು ಚಿಹ್ನಗಳಿಂದ ಕೂಡಿದ ಸಿಂಹಾಸನಾಧಿಪತಿಗಳಿಂದ ಪಂಚಮುದ್ರೆಗಳನ್ನು ಪಡೆದುಕೊಂಡಂಥ ಆ ಪಂಚಮುದ್ರೆಗಳನ್ನು ಧರಿಸಿಕೊಂಡಂಥ ಗುರುವು ಹಿಂದೆ ಹೇಳಿದ ಪ್ರಕಾರ ಅವಯುವ ಪರೀಕ್ಷಾಪೂರ್ವಕ ಉಪದೇಶ ಮಾಡಲ್ಪಟ್ಟಂಥ, ತನ್ನ ಗೋತ್ರದ ವಟುವಿಗೆ ಸಿಂಹಾಸನಾಧಿಪತಿಗಳ ಸಾಕ್ಷಿಪೂರ್ವಕ ಶಾಸ್ತ್ರಾನುಸಾರವಾಗಿ ಪಟ್ಟಾಭಿಷೇಕವನ್ನು ಮಾಡಬೇಕು. ॥ ೧೬-೧೭ ॥ ಪಟ್ಟಾಧಿಕಾರಿಯಾಗುವ ವಟುವು ತನ್ನ ಶಾಖೆ, ಸೂತ್ರ, ಗೋತ್ರ, ಕಲಶ, ಪ್ರವರ, ಜಟಾ, ಕಾಷಾಯವಸ್ತ್ರ. ದಂಡ ಇತ್ಯಾದಿಗಳಲ್ಲಿ ಒಂದು ಕಡಿಮೆಯಾದರೂ ಪೂಜ್ಯನಾಗುವದಿಲ್ಲ. ಎಲೈ ಪಾರ್ವತಿಯೇ ಈ ಲಕ್ಷಣಗಳು ಪೂಜ್ಯಗಳು. ಇವುಗಳ ಕಡೆಗೆ ಅವಶ್ಯ ಲಕ್ಷ ಕೊಡಬೇಕು. ಬಹುಜನರ ಸಮ್ಮತಿಯಿಂದ ಮತ್ತು ಬಹುಜನರು ಕೂಡಿ ಪಟ್ಟಾಭಿಷಿಕ್ತನಾದ ಗುರುವೇ ಜಗತ್ತಿನಲ್ಲಿ ಪೂಜ್ಯನಾಗುವನು. ಜನ ವಿರೋಧವಾದರೆ ಆಗಲಾರನು. ॥ ೧೮-೧೯ ॥

ವೀರಶೈವಾಚಾರ ಕೌಸ್ತುಭದಲ್ಲಿ- ಪಟ್ಟಾಭಿಷೇಕ ಮಾಡುವ ಕಾಲ ಮತ್ತು ಕ್ರಮ ಮುಂತಾದುದನ್ನು ಆದರದಿಂದ ಹೇಳುವನು. ಉತ್ತರಾಯಣದಲ್ಲಿ ತಾರಾಬಲ ಚಂದ್ರಬಲವುಳ್ಳ ಶುಭವಾರ ಪ್ರಶಸ್ತವಾದ ಶುಭಲಗ್ನದಲ್ಲಿ ಪಟ್ಟಾಭಿಷೇಕವನ್ನು

प्राग्भागे मंदिरस्याथ गोमयेनोपलेपिते ।
मण्डलं चतुरस्रं तु वर्णकैः समलंकृतम् ॥ २१ ॥
तत्र भद्रासनं सम्यगर्चयेत्सुमनोहरम् ।
संभासद्भ्योऽथ सद्भक्त्या भस्म तांबूलमर्पयेत् ॥ २२ ॥
यथाशक्त्या दक्षिणाभिस्तदनुज्ञामुपार्जयेत् ।
गङ्गातोयेन संपूर्णस्वर्णकुंभैरनेकशः ॥ २३ ॥
दिग्विदिक्षु स्थितैः शुक्लगन्धमाल्यांबरार्चितैः ।
शतौषधिमूलरत्नहेमसोद्भिज्यपल्लवैः ॥ २४ ॥
मृत्तिकावृषशृंगे तु गजदन्तश्च रोचनम् ।
उत्पलं पद्मकं गंधं मुरारेणुश्च कुंकुमम् ॥ २५ ॥
राजसर्षपमुस्ते च देवदारुसमन्विते ।
एतानि मङ्गलद्रव्याण्युदकुम्भेषु निक्षिपेत् ॥ २६ ॥

---

ಮಾಡಬೇಕು. ಮಂದಿರದ ಪೂರ್ವ ಭಾಗದಲ್ಲಿ ಗೋಮಯದಿಂದ ಸಾರಣೆ ಮಾಡಿ ಶುದ್ಧಗೊಳಿಸಿದ ಒಂದು ಕಡೆಯಲ್ಲಿ ಚೌಕಾಗಿ ಒಂದು ಮಂಡಲವನ್ನು ರಚಿಸಿ ಅದನ್ನು ನಾನಾ ಬಣ್ಣದ ರಂಗವಲ್ಲಿಗಳಿಂದ ಅಲಂಕರಿಸಿ ಅದರ ಮೇಲೆ ಭದ್ರಾಸನವನ್ನು ಹಾಕಿ ಅದನ್ನು ವಿಧಿವತ್ತಾಗಿ ಪೂಜಿಸಬೇಕು. ಅನಂತರ ಆ ಸಭೆಗೆ ಬಂದವರಿಗೆ ಭಸ್ಮ ತಾಂಬೂಲಾದಿಗಳನ್ನು ಕೊಟ್ಟು, ಮಾಹೇಶ್ವರರಿಗೆ ಯಥಾಶಕ್ತಿ ದಕ್ಷಿಣವನ್ನು ಭಕ್ತಿಯಿಂದ ಕೊಟ್ಟು, ಅವರ ಅನುಮತಿಯನ್ನು ಪಡೆಯಬೇಕು. ಅನಂತರ ಗಂಗೋದಕದಿಂದ (ಪವಿತ್ರ ನೀರಿನಿಂದ) ತುಂಬಿದ ಸುವರ್ಣ ಕಲಶಗಳನ್ನು ನಾಲ್ಕು ದಿಕ್ಕುಗಳಲ್ಲಿ ಮತ್ತು ನಾಲ್ಕು ವಿದಿಕ್ಕು (ಮೂಲೆ) ಗಳಲ್ಲಿ ಸ್ಥಾಪಿಸಬೇಕು. ಆ ಕಲಶಗಳನ್ನು ಗಂಧ, ಮಾಲಾ, ವಸ್ತ್ರಾದಿಗಳಿಂದ ಅಲಂಕರಿಸಿ, ಆ ಕಲಶೋದಕದಲ್ಲಿ ಶತೌಷಧಿ (ಶತಾವರಿ) ಯ ಬೇರು, ರತ್ನಗಳು, ಬಂಗಾರದ ಚೂರುಗಳು, ಸದ್ಬೀಜಗಳು, ಪಂಚಪಲ್ಲವಗಳು, ೫ ಸ್ಥಾನದ ಮಣ್ಣು, ಎತ್ತಿನ ಕೊಂಬು, ಆನೆಯ ಕೋರೆ, ಗೋರೋಜನ, ನೈದಿಲೆ, ಕಮಲ, ಚಂದನ, ಮುರಾರೇಣು, ಕುಂಕುಮಕೇಸರಿ, ಬಿಳೀ ಸಾಸಿವೆ, ಜೇಕಿನ ಗಡ್ಡೆ, ದೇವದಾರು ಇವುಗಳನ್ನು ಹಾಕಬೇಕು. ॥ ೨೦-೨೬ ॥ ಬಳಿಕ ದೇವಸ್ಯತ್ವಾ ಎಂಬ ಮಂತ್ರದಿಂದ

देवस्यत्वेति मन्त्रेण आयुःपुष्टियशस्करैः ।
अब्लिंगैर्वेदमन्त्रैश्च शुभलग्ने शुभान्विते ।
भद्रासनस्थयतिना अभिषेकं च कारयेत् ॥ २७ ॥
पञ्चब्रह्ममयैः पञ्चकलशैः सम्यगर्चितैः ।
ऋत्विग्भिर्वेदमन्त्रैश्च कुर्यात्तत्राभिषेचनम् ॥ २८ ॥
ततः पञ्चामृतैर्नानाफलपञ्चामृतादिभिः ।
संप्रदायानुरोधेन देशिकं पूजयेत्क्रमात् ॥ २९ ॥
शुक्लमाल्यांबरधरः प्राङ्मुखस्य गुरोस्ततः ।
पट्टं शिरसि बध्नीयात् सिंहासनगतस्य च ॥ ३० ॥
नीराजनाशीर्वादैश्च मंगलाचारमाचरेत् ।
माहेश्वरान्यथायोगं भोजयेत् षड्रसैरपि ॥ ३१ ॥

---

ಮತ್ತು ಆಯುಷ್ಯ, ಪುಷ್ಟಿ, ಕೀರ್ತಿ ಇವುಗಳನ್ನು ವೃದ್ಧಿಗೊಳಿಸವಂಥ, ಅಬ್ಲಿಂಗ (ವರುಣ) ದೇವತಾಕವಾದ ವೇದಮಂತ್ರಗಳಿಂದ ಶುಭಲಗ್ನದ ಶುಭಾಂಶದಲ್ಲಿ ಭದ್ರಾಸನದ ಮೇಲೆ ಕೂತಯತಿಯಿಂದ (ಗುರುವಿನಿಂದ) ಶಿಷ್ಯನಿಗೆ ಅಭಿಷೇಕ ಮಾಡಿಸಬೇಕು. ಅನಂತರ ಪಂಚಬ್ರಹ್ಮ ಸ್ವರೂಪಗಳಾದ, ಪೂರ್ವದಲ್ಲಿ ಪೂಜಿಸಲ್ಪಟ್ಟ, ಪಂಚಕಲಶಗಳ ಉದಕದಿಂದ ಗುರುವು, ನಾಲ್ಕು ಜನ ಋತ್ವಿಜರೂ ವೇದಮಂತ್ರಗಳನ್ನು ಹೇಳುತ್ತ ವಟುವಿಗೆ ಸಂಪ್ರೋಕ್ಷಣೆ ಮಾಡಬೇಕು. ॥ ೨೭–೨೮ ॥ ತರುವಾಯ ಶಿಷ್ಯನು ತನ್ನ ಗುರುವನ್ನು ಪಂಚಾಮೃತ, ರಸಪಂಚಕ, ಫಲಪಂಚಕ ಮೊದಲಾದವುಗಳಿಂದ ಸಂಪ್ರದಾಯಾನುಸಾರವಾಗಿ ಕ್ರಮದಿಂದ ಪೂಜಿಸಬೇಕು. ಅನಂತರ ಗುರುವು ಬಿಳಿ ವಸ್ತ್ರಗಳನ್ನು ಧರಿಸಿಕೊಂಡು ಹೂವಿನ ಮಾಲೆಗಳಿಂದ ಭೂಷಿತನಾದ ಶಿಷ್ಯನನ್ನು ಸಿಂಹಾಸನದ ಮೇಲೆ ತನ್ನ ಸಮ್ಮುಖದಲ್ಲಿ ಕೂಡ್ರಿಸಿಕೊಂಡು ಬಂಗಾರದ ಪಟ್ಟವನ್ನು ಶಿಷ್ಯನ ತಲೆಗೆ ಕಟ್ಟಬೇಕು. ಬಳಿಕ ಗುರುವಿನ ಬಾಜು ಕೂತಿರುವ ಆ ಪಟ್ಟಧಾರಿಗೆ ನೀರಾಜನವನ್ನು ಮಾಡಿ ಗುರುವಿನ ಆಶೀರ್ವಾದದ ನಂತರ ಮಂಗಲವನ್ನು ಮಾಡಬೇಕು. ಅನಂತರ ತನ್ನ ಯೋಗ್ಯತೆಗೆ ತಕ್ಕಂತೆ ಮಾಹೇಶ್ವರರನ್ನು ಷಡ್ರಸಯುಕ್ತವಾದ ಪಕ್ವಾನ್ನಗಳಿಂದ ತೃಪ್ತಿಪಡಿಸಬೇಕು. ॥ ೨೯–೩೧ ॥ ಲಿಂಗಪುರಾಣದಲ್ಲಿಯೂ ಈ

लैंगेऽपि । काहलाशंखभेर्यादिनिःस्वनैरतिशोभनैः ।
स्त्रीशोभनारवैर्दिव्यैर्वेदघोषैः सुशोभनैः ॥ ३२ ॥
सेचयेत्कूर्चतोयेन प्रोक्षयेद्वा महेश्वरम् ।
रुद्राध्यायेन विधिना भस्मरुद्राक्षके धरेत् ॥ ३३ ॥
शंखचामरभेर्यादीन् छत्रं चंद्रसमप्रभम् ।
शिविकां वैजयंतीं च किरीटं सिंहविष्टरम् ।
पट्टाभिषेकयुक्ताय महेशाय समर्पयेत् ॥ ३४ ॥
वीरशैवप्रकाशिकायाम् । पट्टोपदेशयोर्मध्ये प्रबलो दुर्बलश्च कः ।
एतद्विस्तार्य भगवन्वक्तुमर्हसि सांप्रतम् ॥ ३५ ॥
ईश्वर उवाच
उत्तमः पट्टबद्धः स्यादुपदिष्टस्ततोऽधमः ।
उपदिष्टः परो नान्यद्भुवि पट्टाभिषेकतः ।
तस्माद्दीक्षापट्टबद्धो गुरुरेव न संशयः ॥ ३६ ॥

---

ಪಟ್ಟಾಭಿಷೇಕದ ವಿಷಯವು ಹೇಳಲ್ಪಟ್ಟಿದೆ. ಕಹಳೆ, ಶಂಖ, ಭೇರಿ ಮುಂತಾದ ವಾದ್ಯಗಳ ಆನಂದಕರವಾದ ಧ್ವನಿಯೂ ಮಂಜುಳವಾದ ಸ್ತ್ರೀಯರ ಶೋಭನ ಪದಗಳ ನಾದವು, ಮಂಗಲಕರವಾದ ವೇದಘೋಷವು ನಡೆಯುತ್ತಿರುವಾಗ್ಗೆ ಪಟ್ಟಾಭಿಷೇಕ ವಾಗುತ್ತಿರುವ ಮಾಹೇಶ್ವರ ವಟುವಿಗೆ ದರ್ಭೆಯ ಕೂರ್ಚದಿಂದ ನೀರನ್ನು ಸಂಪ್ರೋಕ್ಷಣೆ ಮಾಡಬೇಕು. ರುದ್ರಮಂತ್ರಗಳನ್ನು ಹೇಳುತ್ತ ಭಸ್ಮ. ರುದ್ರಾಕ್ಷಿಗಳನ್ನು ಧರಿಸಬೇಕು, ಶಂಖ, ಚಾಮರ, ಭೇರಿ ಮೇಣೆ ಮೊದಲಾದವನ್ನು ಚಂದ್ರನಿಗೆ ಸಮಾನ ಪ್ರಭೆಯುಳ್ಳ ಶ್ವೇತಛತ್ರವನ್ನು, ಪಲ್ಲಕ್ಕಿಯನ್ನು, ಧ್ವಜವನ್ನು, ಕಿರೀಟವನ್ನು ಮತ್ತು ಸಿಂಹಾಸನವನ್ನು ಪಟ್ಟಾಭಿಷಿಕ್ತನಾದ ಮಾಹೇಶ್ವರನಿಗೆ ಅರ್ಪಿಸಬೇಕು. ॥ ೩೨-೩೪ ॥ ವೀರಶೈವ ಪ್ರಕಾಶಿಕೆಯಲ್ಲಿ ಪಾರ್ವತಿಯ ಪ್ರಶ್ನೆ- ಎಲೈ ಭಗವಂತನೆ, ಪಟ್ಟಾಧಿಕಾರಿ ಮತ್ತು ದೇಶಿಕ ಇವರಿಬ್ಬರಲ್ಲಿ ಯಾರು ಪ್ರಬಲರು ಯಾರು ದುರ್ಬಲರು ಎಂಬುದನ್ನು ನನಗೆ ವಿಸ್ತಾರವಾಗಿ ಈಗ ಹೇಳಬೇಕು. ಎಂದು ಕೇಳಲು ಆಗ ಪರಮಾತ್ಮನು ಹೇಳುವನು- ಕೇವಲ ಉಪದೇಶವನ್ನು ಪಡೆದ ದೇಶಿಕನಿಗಿಂತಲೂ ಉಪದೇಶಪೂರ್ವಕ ಪಟ್ಟಾಧಿಕಾರ ವನ್ನು ಪಡೆದವನು ಶ್ರೇಷ್ಠನು, ದೇಶಿಕನು ಪಟ್ಟಾಧಿಕಾರಿಗಿಂತಲೂ ಕಡಿಮೆ ಯೋಗ್ಯತೆ ಯುಳ್ಳವನು. ಪಟ್ಟಾಧಿಕಾರಿಗಿಂತಲೂ ಯಾವ ರೀತಿಯಿಂದಲೂ ದೇಶಿಕನು ಅಧಿಕ ನಾಗಲಾರನು. ಆದಕಾರಣ ದೀಕ್ಷಾ ಕಾರ್ಯದಲ್ಲಿ ಪಟ್ಟಾಧಿಕಾರಿಯೇ ಗುರುವು ಇದರಲ್ಲಿ ಸಂಶಯವಿರುವದಿಲ್ಲ. ॥ ೩೫-೩೬ ॥

पार्वत्युवाच

अन्यशाखाप्रसूतस्य दीक्षितस्यापि शङ्कर ।
गुरोः पीठाधिकारस्तु भवेद्वा न कथं वद ॥ ३७ ॥
गोत्रादिलक्षणैर्युक्तं गुरुत्वेन प्रतिष्ठितम् ।
हित्वाऽन्यं भजते यस्तु तस्य किं वा फलं वद ॥ ३८ ॥

ईश्वर उवाच

अन्यशाखाप्रसूतस्य यस्यान्यत्रोपदेशतः ।
गुरोः पीठाधिकारस्तु नास्ति जन्मशतैरपि ॥ ३९ ॥

---

ಪಾರ್ವತಿಯು ಪರಮಾತ್ಮನನ್ನು ಕುರಿತು ಮತ್ತೆ ಎರಡು ಪ್ರಶ್ನೆಗಳನ್ನು ಮಾಡು ವಳು—ಎಲೈ ಶಂಕರನೆ ಬೇರೆ ಶಾಖೆಯಲ್ಲಿ ಹುಟ್ಟಿದಂಥ, ಬೇರೆ ಶಾಖೆಯ ಪ್ರಕಾರ ದೀಕ್ಷಾ ಸಂಸ್ಕಾರವನ್ನೂ ಸಹ ಪಡೆದಂಥ ವಟುವಿಗೆ ಗುರುಪೀಠಾಧಿಕಾರವು ಲಭಿಸು ವದೋ ಇಲ್ಲವೋ? ಎಂಬುದು ಮೊದಲನೆಯ ಪ್ರಶ್ನವು. ಐದು ಜನ ಆಚಾರ್ಯರಿಗೆ ಐದು ಶಾಖೆಗಳು ಬೇರೆ ಬೇರೆ ಇರುತ್ತವೆ. ಇವುಗಳಲ್ಲಿ ರೇಣುಕಾಚಾರ್ಯ ಶಾಖಾ ಮಠಕ್ಕೆ ಅಧಿಕಾರ ಮಾಡಬೇಕಾಗಿದೆಂದು ತಿಳಿದುಕೊಳ್ಳೋಣ. ಆಗ ದಾರುಕಾಚಾರ್ಯ ಶಾಖೆಯುಲ್ಲಿ ಹುಟ್ಟಿದಂಥ ಮತ್ತು ದಾರುಕ ಶಾಖಾನುಗುಣವಾಗಿ ದೀಕ್ಷಾ ಸಂಸ್ಕಾರ ವನ್ನೂ ಸಹ ಪಡೆದಂಥ ವಟುವಿಗೆ, ರೇಣುಕ ಶಾಖಾ ಮಠದ ಗುರುತ್ವಾಧಿಕಾರವು ಪ್ರಾಪ್ತವಾಗುವದೋ ಇಲ್ಲವೋ ಎಂಬುದು ಪ್ರಶ್ನಾರ್ಥವು. ಇದರಂತೆ ಉಳಿದ ನಾಲ್ಕು ಶಾಖೆಗಳಿಗೂ ಅನ್ವಯಿಸಿಕೊಳ್ಳಬೇಕು. ಇನ್ನು ತನ್ನ ಗೋತ್ರ ಸೂತ್ರಾದಿಗಳುಳ್ಳಂಥ, ತನ್ನ ಗೋತ್ರಾನುಸಾರವಾಗಿಯೇ ದೀಕ್ಷಾ ಸಂಸ್ಕಾರವನ್ನು ಹೊಂದಿ ಗುರುವಾಗಿರು ವಂತಹ ಸ್ವಗೋತ್ರದ ಗುರುವನ್ನು ಬಿಟ್ಟು ಬೇರೆ ಗುರುವನ್ನು ಹೊಂದಿದಂಥ ಶಿಷ್ಯನಿಗೆ ಯಾವ ಫಲ ಪ್ರಾಪ್ತವಾಗುವದು ಎಂಬುದುಎರಡನೆಯ ಪ್ರಶ್ನೆ, ಇವೆರಡಕ್ಕೆ ವಿಶದ ವಾಗಿ ಉತ್ತರ ಹೇಳಬೇಕೆಂದು ಕೇಳಲು ಆಗ ಪರಮಾತ್ಮನು ಹೇಳುವನು.

ಯಾವ ಶಾಖೆಯ ಮಠಕ್ಕೆ ಅಧಿಕಾರವಾಗಬೇಕಾಗಿದೆಯೋ ಅದಕ್ಕಿಂತಲೂ ಭಿನ್ನ ಶಾಖೆಯ ಮಠದಲ್ಲಿ ಹುಟ್ಟಿದವನೂ ಹಾಗು ಭಿನ್ನ ಶಾಖಾನುಗುಣವಾಗಿಯೇ ದೀಕ್ಷಾ ಸಂಸ್ಕಾರ ಹೊಂದಿದವನೂ ಆದ ವಟುವಿಗೆ ನೂರು ಜನ್ಮಕ್ಕೂ ಆ ಮಠಕೆ

स्वशाखासु प्रसूतस्य यस्यान्यत्रोपदेशतः ।
न तस्य गुरुपीठादावधिकारस्तु शस्यते ॥ ४० ॥
अन्यशाखाप्रसूतस्य स्वशाखोक्तविधानतः ।
यदि दीक्षा भवेत्तस्य गुरोः पीठं तु गौणतः ॥ ४१ ॥
स्वशाखासु प्रसूतस्य स्वशाखोक्तविधानतः ।
यस्य दीक्षा भवेत्सैव मुख्यतो गुरुरुच्यते ॥ ४२ ॥
तस्यैव गुरुपीठादावधिकारः प्रशस्यते ।
पट्टबन्धनमेकस्य कृत्वा कालान्तरे यदि ॥ ४३ ॥
तदन्यस्य स्वगोत्रस्य त्वन्यगोत्रस्य वा पुनः ।
ये पट्टबन्धं (द्धं) कुर्वन्ति ते यान्त्यन्धतमं ध्रुवम् ॥ ४४ ॥
यस्तु मोहादहंकारात्प्रमादाद्धनलोभतः ।
पुनः पट्टं प्रबध्नाति स याति नरकं ध्रुवम् ॥ ४५ ॥

---

ಅಧಿಕಾರ ಮಾಡಲು ಬರುವದಿಲ್ಲ. ಮತ್ತು ಅಧಿಕಾರವಾಗುವ ಮಠದ ಶಾಖೆಯಲ್ಲಿಯೇ ಹುಟ್ಟಿದ್ದರೂ ಭಿನ್ನ ಶಾಖಾನುಗುಣವಾಗಿ ಉಪದೇಶಾದಿಗಳಾಗಿದ್ದರೆ ಅಧಿಕಾರ ಮಾಡಲು ಬರುವದಿಲ್ಲ. ‖ ೩೯-೪೦ ‖ ಬೇರೆ ಶಾಖೆಯಲ್ಲಿ ಹುಟ್ಟಿದವನಾಗಿದ್ದರೂ ಅಧಿಕಾರ ಮಾಡುವ ಮಠದ ಶಾಖಾನುಗುಣವಾಗಿ ದೀಕ್ಷಾ ಉಪದೇಶಾದಿಗಳು ಮಾಡಲ್ಪಟ್ಟರೆ ಅಂಥವನು ಗೌಣದಿಂದ ಗುರುವಾಗುವನು. ಅಧಿಕಾರ ಮಾಡುವ ಮಠದ ಶಾಖೆಯಲ್ಲಿಯೇ ಹುಟ್ಟಿದವನು ಮತ್ತು ಅದೇ ಶಾಖಾನುಗುಣವಾಗಿ ದೀಕ್ಷಾದಿ ಸಂಸ್ಕಾರ ಹೊಂದಿದವನು ಆದ ವಟುವು ಮುಖ್ಯ ಗುರುವಾಗಿ ಹೇಳಲ್ಪಡುವನು. ‖ ೪೧-೪೩ ‖ ಇಂಥವನಿಗೆ ಗುರುಪೀಠದಲ್ಲಿ ಸಂಪೂರ್ಣ ಅಧಿಕಾರವಿರುತ್ತದೆ.

ಯಾವ ಗುರುಗಳು ಒಬ್ಬನಿಗೆ ಪಟ್ಟಾಧಿಕಾರವನ್ನು ಮಾಡಿ ಕೆಲವು ಕಾಲದ ನಂತರ ಮತ್ತೊಬ್ಬನಿಗೆ ಅವನು ಸ್ವಗೋತ್ರದವನೇ ಇರಲಿ, ಅನ್ಯ ಗೋತ್ರದವನೇ ಇರಲಿ ಇಂಥವನಿಗೆ ಪಟ್ಟಾಧಿಕಾರ ಮಾಡುವರೋ ಆ ಗುರುಗಳು ಗಾಢವಾದ ಕತ್ತಲುಳ್ಳ ಅಸೂರ್ಯ ನಾಮಕ ಲೋಕದಲ್ಲಿ ಬಿದ್ದು ಕೊಳೆಯುವರು. ‖ ೪೩-೪೪ ‖ ಯಾವ ಗುರುವು ತನ್ನಿಂದ ಪಟ್ಟಾಭಿಷಿಕ್ತನಾದ ಪಟ್ಟಾಧಿಕಾರಿಯು ಇರುವಾಗಲೇ ಮೋಹದಿಂದಾಗಲಿ, ಅಹಂಕಾರದಿಂದಾಗಲಿ, ಪ್ರಮಾದದಿಂದಾಗಲಿ, ಧನದ ಆಶೆಯಿಂದಾಗಲಿ, ಮತ್ತೊಬ್ಬನಿಗೆ ಪಟ್ಟಾಧಿಕಾರ ಮಾಡುವನೋ ಆ ಗುರುವು ನರಕವನ್ನೇ ಹೊಂದುವನು. ‖ ೪೫ ‖

प्राक्तनं गुरुमुत्सृज्य यश्च गुर्वन्तरं व्रजेत् ।
गुरुरन्यश्च शिष्योऽपि भुंजाते नरकं ध्रुवम् ॥ ४६ ॥

तस्मात्पूर्वं पट्टवद्धः स पूज्यो भुवि नापरः ।
पूर्वस्मिन्पट्टबद्धो यो वहूनामपि संमतः ॥ ४७ ॥

स एव लोके पूज्यः स्याद्दर्शनं तस्य मुक्तिदम् ।
पादस्पर्शनमेतस्य तीर्थस्नानफलं भवेत् ॥ ४८ ॥

तेनैव सह सल्लापः पञ्चाक्षरजपो भवेत् ।
अतः पूर्वं पट्टवद्धः सर्वेषामुत्तमो भवेत् ॥ ४९ ॥

अतस्तद्गोत्रसंजातशिष्यस्तं परिपूजयेत् ।
अपूजयित्वा तच्छिष्यो नरकानेव विंदते ॥ ५० ॥

कदाचित्तं विहायाथ सेवन्ते ये द्वितीयकम् ।
ते सर्वे नरकं यान्ति यावच्चंद्रदिवाकरौ ॥ ५१ ॥

स्वयमेवाभिषिक्तो यः पूर्वपट्टादनंतरम् ।

---

ಯಾವ ಶಿಷ್ಯನು ತನ್ನ ಪೂರ್ವದ ಗುರುವನ್ನು ಬಿಟ್ಟು, ಮತ್ತೊಬ್ಬ ಹೊಸ ಗುರುವನ್ನು ಆಶ್ರಯಿಸುವನೋ ಆ ಶಿಷ್ಯನೂ ಆ ಹೊಸ ಗುರುವು ಇಬ್ಬರು ನರಕವನ್ನು ಅನುಭವಿಸುವರು. ॥ ೪೬ ॥ ಆದ ಕಾರಣ ಪ್ರಥಮದಲ್ಲಿ ಪಟ್ಟಾಧಿಕಾರ ಹೊಂದಿದವನೇ ಪೂಜ್ಯನಾಗುವನು, ಹೊಸಬನು ಪೂಜ್ಯನಾಗಲಾರನು. ಬಹು ಜನರ ಸಮ್ಮತಿಯಿಂದ ಪೂರ್ವದಲ್ಲಿ ಪಟ್ಟಾಧಿಕಾರಿಯಾದವನೇ ಪೂಜ್ಯನು, ಆತನ ದರ್ಶನವು ಮಾನವರಿಗೆ ಮುಕ್ತಿಯನ್ನು ಕೊಡುವಂಥಾದ್ದು. ಆತನ ಪಾದಕ್ಕೆ ಸ್ಪರ್ಶನ (ನಮಸ್ಕಾರ) ಮಾಡಿದರೆ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಪ್ರಾಪ್ತವಾಗುವದು. ॥ ೪೭–೪೮ ॥ ಆತನೊಡನೆ ಮಾತನಾಡುವದು ಪಂಚಾಕ್ಷರ ಮಂತ್ರದ ಜಪ ಸಮಾನವಾಗುವದು, ಆದ್ದರಿಂದ ಪೂರ್ವದಲ್ಲಿ ಪಟ್ಟಾಧಿಕಾರಿಯಾದವನೇ ಸರ್ವ ಶ್ರೇಷ್ಠನು. ಆದ ಕಾರಣ ಆ ಗೋತ್ರದಲ್ಲಿ ಜನಿಸಿದ ಶಿಷ್ಯರು ಆತನನ್ನೆ ಪೂಜಿಸಬೇಕು. ಹಾಗೆ ಪೂಜಿಸದಿದ್ದರೆ ಅವರು ನರಕವನ್ನೇ ಹೊಂದುವರು. ॥ ಅಕಸ್ಮಾತ್ ಪೂರ್ವ ಪಟ್ಟಾಧಿಕಾರಿಯನ್ನು ಬಿಟ್ಟು ಎರಡನೆಯ ಅಧಿಕಾರಿಯನ್ನು ಪೂಜಿಸಿದ್ದಾದರೆ ಅವರೆಲ್ಲರೂ ಸೂರ್ಯಚಂದ್ರರಿರುವ ವರೆಗೆ ನರಕವನ್ನು ಹೊಂದುವರು. ॥ ೪೯–೫೧ ॥

असंमतश्च पूर्वस्य स याति नरकं ध्रुवम् ॥ ५२ ॥
द्वितीयपट्टबद्धस्य यदि संदर्शनं भवेत् ।
श्वानयोनिशतं प्राप्य पश्चाद्रौरवमश्नुते ॥ ५३ ॥
पूर्वं प्रतिष्ठितं लिंगं बिल्ववृक्षमथापि वा ।
छेदितॄणां तु यत्पापं तत्पापं लभते नरः ॥ ५४ ॥

इति पट्टाभिषेकविधिः समाप्तः ।

## अथ चरपतिविधानम्

अतः परं प्रवक्ष्यामि चिन्हं चरपतेः क्रमात् ।
कुलीनं सत्यसंधानं सर्वलक्षणसंयुतम् ॥ ५५ ॥

---

ಪೂರ್ವದಲ್ಲಿ ಪಟ್ಟಾಭಿಷಿಕ್ತನಾದ ಗುರುವು ಇರುವಾಗ ಆತನ ಸಮ್ಮತಿಯಿಲ್ಲದೆ ಅನ್ಯನು ತನ್ನಿಂದ ತಾನೆ ಪಟ್ಟಾಭಿಷಿಕ್ತನಾದರೆ ಆವನು ನರಕವನ್ನು ಹೊಂದುವನು. ಇಂತಹ ಅನಧಿಕಾರಿ ಪಟ್ಟ ಬದ್ಧನ ದರ್ಶನವು ಯಾರಿಗೆ ಆಗುವದೋ ಅವನು ನೂರು ಸಾರೆ ನಾಯಿ ಜಾತಿಯಲ್ಲಿ ಹುಟ್ಟಿ ಕೊನೆಗೆ ರೌರವ ನರಕವನ್ನು ಹೊಂದುವರು. ಪೂರ್ವದಲ್ಲಿ ದೇವಾಲಯದಲ್ಲಿ ಸ್ಥಾಪಿತವಾದ ಲಿಂಗವನ್ನು ಕಿತ್ತಿ ಒಗೆದರೆ ಅಥವಾ ಉತ್ತಮವಾದ ಬಿಲ್ವ ವೃಕ್ಷವನ್ನು ಕಡಿದು ಚಲ್ಲಿದರೆ ಯಾವ ಪಾಪ ಪ್ರಾಪ್ತವಾಗುವದೋ ಇಂತಹ ಅನಧಿಕಾರಿಯ ದರ್ಶನದಿಂದ ಅಂಥ ಪಾಪವು ಬರುವದು. ||೫೨–೫೪||
ಇಲ್ಲಿಗೆ ಪಟ್ಟಾಧಿಕಾರ ವಿಧಿಯು ಮುಗಿದುದು.

## — ಅಥ ಚರಾಧಿಕಾರ ವಿಧಾನ —

**ವಿಚಾರ:—** ಐದು ವಿಧವಾದ ಗೋತ್ರ ಸೂತ್ರ ಪ್ರವರಾದಿಗಳುಳ್ಳ ಮೂಲ ಪೀಠಗಳಲ್ಲಿ ಮತ್ತು ಆಯಾ ಶಾಖೆಯ ಪುತ್ರವರ್ಗ ಮಠಗಳಲ್ಲಿ ಕೆಲವು ಕಡೆ ಪಟ್ಟಾಧಿಕಾರ ಮತ್ತು ಚರಾಧಿಕಾರ ಎರಡನ್ನೂ ಮಾಡುತ್ತ ಬಂದ ಪರಂಪರೆಯಿರುತ್ತದೆ. ಕೆಲವು ಮಠಗಳಲ್ಲಿ ಕೇವಲ ಪಟ್ಟಾಧಿಕಾರವನ್ನು ಮಾಡುತ್ತ ಬಂದ ರೂಢಿಯಿರುತ್ತದೆ. ಯಾವ ಪುತ್ರವರ್ಗ ಮಠಕ್ಕೆ ಶಿಷ್ಯಪರಂಪರೆಯು ಬಹು ದೊಡ್ಡದಿರುತ್ತದೆಯೋ ಅಂತಹ ಕಡೆಗೆ ಎಲ್ಲಾ ಶಿಷ್ಯರಿಗೂ ದೀಕ್ಷಾ ಶಿಕ್ಷಾದಿ ಸಮಸ್ತ ಧರ್ಮಕಾರ್ಯಗಳನ್ನು ನಡೆಯಿಸಲಿಕ್ಕೆ ತೊಂದರೆಯಾಗಬಾರದೆಂದೂ ಹಾಗು ದೂರ ದೂರ ವಾಸಿಸುವಂತಹ ಶಿಷ್ಯರಲ್ಲಿ ಏಕಕಾಲಕ್ಕೆ ಕಾರ್ಯಭಾಗವು ಪ್ರಾಪ್ತವಾದರೆ ಎರಡನ್ನೂ ನಿರ್ವಹಿಸುವ ದಕ್ಕಾಗಿಯೂ ಪಟ್ಟಾಧಿಕಾರಿಯ ಸಹಾಯಕ್ಕಾಗಿ ಚರಾಧಿಕಾರವನ್ನು ಮಾಡುತ್ತ ಬಂದಿರುವರು. ಹೀಗೆ ಒಂದೇ ಪುತ್ರವರ್ಗ ಮಠದಲ್ಲಿ ಎರಡು ಅಧಿಕಾರಗಳನ್ನು ಮಾಡುತ್ತ ಬಂದವರಲ್ಲಿ ಕಾಲಕ್ರಮೇಣ ದೂರ ದೂರ ವಾಸ ಮಾಡುವ ಪ್ರಸಂಗ ಉಂಟಾದಾಗ ಪಟ್ಟಾಧಿಕಾರವನ್ನು ಮಾಡುತ್ತ ಬಂದವರು ಉತ್ತರೋತ್ತರ ಪಟ್ಟಾಧಿ

शिवसिद्धान्ततंत्रज्ञं गुरुक्रमसमन्वितम् ।
लक्षणैस्तं परीक्षेत बहुशः शास्त्रकोविदः ॥ ५६ ॥
ततः श्रीभस्मतांबूलं दक्षिणां च यथाक्रमम् ।
महेशेभ्यः प्रदत्वाऽथानुज्ञां प्राप्य महामतिः ॥ ५७ ॥
संस्नाप्य कलशोदैस्तु फलपल्लवसंयुतैः ।
पञ्चब्रह्ममयैः सम्यगौषधीभिः सुपूजितैः ।
रुद्राध्यायेन चाब्लिगैर्मन्त्रैर्मन्त्रपरायणः ॥ ५८ ॥
अलंकुर्याद्यशक्ति वस्त्रहेमांगुलीयकैः ।
उपवेश्य च पीठादौ पूजादिकमथाचरेत् ॥ ५९ ॥
ततः शंखद्वयं सर्वलक्षणैश्च समन्वितम् ।
संपूज्य विधिवद्भक्त्या दण्डपात्रे तथा गुरुः ॥ ६० ॥

---

ಕಾರವನ್ನೇ ಮಾಡುತ್ತ, ಚರಾಧಿಕಾರವನ್ನು ಮಾಡುತ್ತ ಬಂದವರು ಚರಾಧಿಕಾರವನ್ನೇ ಮಾಡುತ್ತಲೂ ಬಂದಿರುವರು. ಇಂತಹ ಚರಾಧಿಕಾರವನ್ನು ಹೇಳುವನು.

ಎಲೈ ಪಾರ್ವತಿಯೆ ಇನ್ನು ಮುಂದೆ ಚರಪತಿಯ ಲಕ್ಷಣವನ್ನು ಕ್ರಮವಾಗಿ ಹೇಳುವೆನು ಕೇಳು? ಸತ್ಕುಲ ಪ್ರಸೂತನೂ, ಸತ್ಯವಂತನೂ, ಗುರುವಿನಲ್ಲಿರಬೇಕಾದ ಸರ್ವ ಲಕ್ಷಣಗಳಿಂದ ಕೂಡಿಕೊಂಡವನೂ, ವೀರಶೈವ ಸಿದ್ಧಾಂತವನ್ನು ಚೆನ್ನಾಗಿ ಬಲ್ಲವನೂ, ಆಯಾ ಗೋತ್ರಸೂತ್ರಾದಿ ಗುರುಪರಂಪರೆಯುಳ್ಳವನೂ ಆದ ವಟುವನ್ನು ಶಾಸ್ತ್ರ ಪಾರಂಗತನಾದ ಗುರುವು ಚೆನ್ನಾಗಿ ಎಲ್ಲಾ ರೀತಿಯಿಂದ ಪರೀಕ್ಷಾ ಮಾಡ-ಬೇಕು. ॥ ೫೫–೫೬ ॥ ಅನಂತರ ಗುರುವು ಆ ಸಮಾರಂಭಕ್ಕಾಗಿ ಆಗಮಿಸಿದ್ದ ಮಾಹೇಶ್ವರರಿಗೆ ಭಸ್ಮ, ತಾಂಬೂಲ, ದಕ್ಷಿಣ ಇತ್ಯಾದಿಗಳನ್ನು ಯಥಾ ಕ್ರಮವಾಗಿ ಕೊಟ್ಟು, ಅವರ ಅನುಮತಿಯನ್ನು ಪಡೆದು ಪಂಚಪಲ್ಲವ, ಕಾರಿಕಾ, ಕೊಬ್ರಿ ಬಟ್ಟಲ, ಎಲಿ, ಅಡಿಕೆ, ಔಷಧಿ ಮೊದಲಾದ ಸಾಮುಗ್ರಿಗಳಿಂದ ಕೂಡಿರುವಂಥ, ಕ್ರಮವಾಗಿ ಪೂಜಿಸಲ್ಪಟ್ಟಂಥ ಪಂಚಬ್ರಹ್ಮಮಯಗಳಾದ ಪಂಚಕಲಶಗಳ ಉದಕದಿಂದ, ಮಂತ್ರಜ್ಞ-ನಾದ ಗುರುವು ರುದ್ರಾಧ್ಯಾಯವನ್ನೂ ವರುಣ ದೇವತಾಕ ವಾದ ವೇದಮಂತ್ರಗಳನ್ನೂ ಹೇಳುತ್ತ ಆ ವಟುವಿಗೆ ಅಭಿಷೇಕ ಮಾಡಬೇಕು. ॥ ೫೭–೫೮ ॥ ಬಳಿಕ ನೂತನ ವಸ್ತ್ರಗಳಿಂದಲೂ, ಶಕ್ತ್ಯಾನುಸಾರವಾಗಿ ಬಂಗಾರದ ಆಭರಣ ಉಂಗುರಾದಿಗಳಿಂದ ಅಲಂಕಾರ ಮಾಡಿ ಪೀಠದ ಮೇಲೆ ಕೂಡ್ರಿಸಿ ಪೂಜಾದಿ ಕಾರ್ಯವನ್ನು ಮಾಡ-ಬೇಕು. ॥ ೫೯ ॥ ತರುವಾಯ ಉತ್ತಮ ಲಕ್ಷಣವುಳ್ಳ ಎರಡು ಶಂಖಗಳನ್ನು ದಂಡ, ಪಾತ್ರ, ಕಮಂಡಲು ಮುಂತಾದವನ್ನು ಕ್ರಮವಾಗಿ ಪೂಜಿಸಿ, ಗುರುವು ತನ್ನ ಸಂಪ್ರದಾಯಾನುಸಾರವಾಗಿ ಆ ಚರಪಟ್ಟಾಧಿಕಾರಿಗೆ ಹೀಗೆ ಬೋಧ ಮಾಡಬೇಕು.—

संप्रदायानुसारेण शिक्षयेत्तं प्रयत्नतः ।
शिवोत्कर्षं वीरशैवमतं स्वाचारमुत्तमम् ॥ ६१ ॥
स्थापय त्वं यथाशास्त्रं चरमूर्तीन्प्रतोपय ।
संचारं कुरु सर्वत्रेत्यादिश्य गुरुरादरात् ॥ ६२ ॥
ततः शंखद्वयं दण्डं पात्रं चोध्दृत्य मन्त्रतः ।
दद्यात्तस्मै महेशानैरनुज्ञातो महामतिः ॥ ६३ ॥
आशीर्वादं ततः कुर्याद्वीरमाहेश्वरांस्तथा ।
भोजयेच्च यथाशक्ति वित्तशाठ्यं न कारयेत् ॥ ६४ ॥
इत्येवं दीक्षितस्यादौ चरपट्टस्य लक्षणम् ।
गदितं गृहिणां लक्ष्म वेदितव्यं त्वया क्रमात् ॥ ६५ ॥

इति श्रीमद्वीरशैवसदाचारसंग्रहे वीरशैवप्रकाशिकावीरशैवकौस्तुभानुसारेण शिष्यवर्गपुत्रवर्गसंप्रदायपट्टाभिषेकचरपतिलक्षणकथनं नाम चतुर्दशप्रकरणं समाप्तम् ।

---

ಎಲೈ ಚರಪತಿಯೇ ಶಿವೋತ್ಕರ್ಷಬೋಧಕವಾದ ವೀರಶೈವ ಸಿದ್ಧಾಂತವನ್ನು ಎಲ್ಲ ಕಡೆಯಲ್ಲಿ ಸ್ಥಿರಗೊಳಿಸು. ಶಾಸ್ತ್ರಾನುಸಾರವಾಗಿ ನಿನ್ನ ಆಚಾರವನ್ನು ಉತ್ತಮ ರೀತಿಯಿಂದ ಕಾಪಾಡಿಕೊ. ಬೇರೆ ಚರಮೂರ್ತಿಗಳನ್ನು ಸಂತೋಷಪಡಿಸು, ಸರ್ವ ಭಾಗದಲ್ಲಿ ಸಂಚಾರ ಮಾಡು ಇತ್ಯಾದಿಯಾಗಿ ಗುರುವು ಒಳ್ಳೇ ಆದರದಿಂದ ಉಪದೇಶ ಮಾಡಬೇಕು. ॥ ೬೦–೬೨ ॥ ಅನಂತರ ಮೊದಲಿಗೆ ಪೂಜಿಸಿ ಸಂಸ್ಕಾರ ಮಾಡಿದಂಥ ಎರಡು ಶಂಖ, ದಂಡ, ಪಾತ್ರ ಮೊದಲಾದವನ್ನು ಗುರುವು ಕೈಯಲ್ಲಿ ತೆಗೆದುಕೊಂಡು ಮಾಹೇಶ್ವರರ ಅನುಮತಿಯನ್ನು ಪಡೆದು ಮಂತ್ರಗಳನ್ನು ಹೇಳುತ್ತ ಚರಪತಿಗೆ ಕೊಟ್ಟು ಆಶೀರ್ವಾದ ಮಾಡಬೇಕು. ಅನಂತರ ಮಾಹೇಶ್ವರರನ್ನು ಭೋಜನದಿಂದ ತೃಪ್ತಿಪಡಿಸಿ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು. ದುಡ್ಡಿನ ಶಾಠ್ಯವನ್ನು ತೋರಿಸಬಾರದು. ಹೀಗೆ ಮೊದಲಿಗೆ ದೀಕ್ಷಾ ಸಂಸ್ಕಾರವನ್ನು ಪಡೆದಂಥ ವಟುವಿನ ಚರಪಟ್ಟದ ಲಕ್ಷಣವು ಹೇಳಲ್ಪಟ್ಟದೆ. ಗೃಹಸ್ಥರಾದ ಪುತ್ರವರ್ಗ ಮತದವರ ಲಕ್ಷಣವನ್ನು ನೀನು ಕ್ರಮವಾಗಿ ತಿಳಿದುಕೊ. ॥ ೬೩–೬೫ ॥ ಇಲ್ಲಿಗೆ ವೀರಶೈವ ಸದಾಚಾರ ಸಂಗ್ರಹದಲ್ಲಿ ವೀರಶೈವ ಪ್ರಕಾಶಿಕಾ ವೀರಶೈವ ಕೌಸ್ತುಭ ಇವುಗಳಿಗೆ ಅನುಗುಣವಾಗಿ ಹೇಳಿದ ಶಿಷ್ಯವರ್ಗ, ಪುತ್ರವರ್ಗ ಸಂಪ್ರದಾಯ ಪಟ್ಟಾಭಿಷೇಕ, ಚರಪತಿ ಲಕ್ಷಣವನ್ನು ಹೇಳುವಂಥ ಹದಿನಾಲ್ಕನೆಯ ಪ್ರಕರಣದ ಪಂಡಿತ ಬಸವರಾಜಶಾಸ್ತ್ರಿ ಬೃಹನ್ಮಠ ಪಗಡದಿನ್ನಿ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು ॥

# ॥ अथ पंचदशप्रकरणम् ॥

## अथ निराभारिलक्षणम्

सुप्रभेदागमे । यः शंभुः सर्वलोकानां मुक्त्यर्थं धरणीतले ।
चरत्यतिथिरूपेण नमस्तस्मै चरात्मने ॥ १ ॥

देव्युवाच

भगवंस्त्वन्मुखादेव गुरोर्लिङ्गस्य लक्षणम् ।
श्रुत्वा तद्द्वयमाहात्म्यमहं धन्याऽभवं विभो ॥ २ ॥
इदानीं चरमाहात्यं तच्चिंन्हं तस्य गौरवम् ।
तदाचारविधिं श्रोतुं ममेच्छा वर्तते विभो ।
कृपया केवलं नाथ वद कारुण्यसागर ॥ ३ ॥

ईश्वर उवाच

सम्यक्पृष्टं त्वया गौरि साधु धीमति मत्प्रिये ।

---

# ಅಥ ಹದಿನೈದನೆಯ ಪ್ರಕರಣ

## — ನಿರಾಭಾರಿ ಲಕ್ಷಣ —

ಸುಪ್ರಭೇದಾಗಮದಲ್ಲಿ– ಯಾವ ಪರಶಿವನು ಸಕಲ ಮಾನವರಿಗೂ ಮುಕ್ತಿಯನ್ನು ಕೊಡುವುದರ ಸಲುವಾಗಿ ಭೂಮಿಯ ಮೇಲೆ ಅತಿಥಿಯ ರೂಪದಿಂದ ಸಂಚರಿಸುವನೋ ಅಂತಹ ಜಂಗಮ ರೂಪವನ್ನು ಧರಿಸಿದಂಥ ಪರಶಿವನಿಗೆ ನಮಸ್ಕಾರವು. ॥ ೧ ॥ ಪಾರ್ವತಿಯು ಪರಮಾತ್ಮನನ್ನು ಕುರಿತು– ಭಗವಂತನೇ? ನಿನ್ನ ಮುಖದಿಂದಲೇ ಗುರುವಿನ ಮತ್ತು ಲಿಂಗದ ಲಕ್ಷಣವನ್ನು ಹಾಗೂ ಅವೆರಡರ ಮಹತ್ವವನ್ನು ಕೇಳಿ ಧನ್ಯಳಾಗಿರುವೆನು. ಪ್ರಭುವೆ? ಈಗ ಜಂಗಮ ಮಾಹಾತ್ಮ್ಯವನ್ನು ಜಂಗಮನ ಲಕ್ಷಣವನ್ನು ಆತನ ಗೌರವವನ್ನು ಆತನ ಆಚಾರ ವಿಧಿಯನ್ನು ಕೇಳಬೇಕೆಂಬ ಲವಲವಿಕೆಯು ನನಗುಂಟಾಗಿರುವದು. ಕಾರುಣ್ಯಸಾಗರ ಕೃಪೆಯಿಂದ ಅದೆಲ್ಲವನ್ನು ಅಪ್ಪಣೆ ಮಾಡು ದೇವಾ ಎಂದು ಕೇಳಲು ಆಗ ಪರಮಾತ್ಮನು ॥ ೩ ॥ ಒಳ್ಳೇ ಮೇಧಾವಿಯೂ ನನ್ನ ಪ್ರಾಣಪ್ರಿಯಳೂ ಆದ ಎಲೈ ಗಿರಿಜೆಯೇ? ಒಳ್ಳೇ ಪ್ರಶ್ನವನ್ನು ಮಾಡಿದಿ. ಆದರೆ ಆ ಜಂಗಮ ಮಾಹಾತ್ಮ್ಯವನ್ನು ಸಂಪೂರ್ಣವಾಗಿ

वक्तुं तच्चरमाहात्म्यं कल्पकोटिशतैरपि ।
ब्रह्मादीनां च सर्वेषामशक्यं मम तु प्रिये ॥ ४ ॥
तथापि त्वन्मुदे देवि संक्षेपेण वदाम्यहम् ।
गोपनीयं प्रयत्नेन मंत्रवत्प्राणवल्लभे ॥ ५ ॥
जङ्काराज्जननं दूरं गकाराद्गतिनाशनम् ।
मकारान्मरणं नष्टं जङ्गमस्त्र्यक्षरात्मकः ॥ ६ ॥
यस्य नास्ति पुनर्जन्म गतिर्नास्ति कदाचन ।
बाधते यं न मरणं शृणु नाथे स जङ्गमः ॥ ७ ॥
जरामरणशून्यत्वाद्गमागमनवर्जनात्
मनुष्याचरराहित्याज्जंगमोऽयमुदाहृतः ॥ ८ ॥
निरालम्बो निर्विकल्पः कर्मपाशविवर्जितः ।
निःशून्यो निष्कलः साक्षाज्जंगमः स परः स्मृतः ॥ ९ ॥

---

ಹೇಳಬೇಕೆಂದರೆ ಬ್ರಹ್ಮಾದಿ ಸಕಲರಿಗೂ ಅನೇಕ ಕೋಟಿ ವರ್ಷಗಳಾದರೂ ಸಾಧ್ಯವಿಲ್ಲ ನನಗೂ ಅಸಾಧ್ಯವೆ. ಆದರೂ ದೇವಿ ನಿನ್ನನ್ನು ಸಂತೋಷಪಡಿಸುವದಕ್ಕಾಗಿ ಸಂಕ್ಷೇಪವಾಗಿ ಹೇಳುವೆನು ಕೇಳು ॥ ಆದರೆ ಪ್ರಿಯೇ ಈ ವಿಷಯವನ್ನು ಮಂತ್ರದಂತೆ ಬಹಳ ಗೌಪ್ಯವಾಗಿಟ್ಟುಕೊಳ್ಳಬೇಕು. ॥ ೪–೫ ॥ ಜಂಗಮ ಎಂಬ ಶಬ್ದದಲ್ಲಿರುವ ಜಂ ಎಂಬುದಕ್ಕೆ ಜನನಾಭಾವವೂ, ಗಕಾರಕ್ಕೆ ಸಂಸಾರದಲ್ಲಿ ಹೊಂದಬೇಕಾದ ಗಮ್ಯಸ್ಥಾನಾಭಾವವೂ, ಮಕಾರಕ್ಕೆ ಮರಣಾಭಾವವು ಎಂದು ಅರ್ಥವಿರುವುದರಿಂದ ಮೂರು ಅಕ್ಷರಗಳಿಂದ ಕೂಡಿದ ಈ ಜಂಗಮ ಶಬ್ದಕ್ಕೆ ಪುನರ್ಜನ್ಮ, ಗಮ್ಯಸ್ಥಾನ, ಮರಣ ಇವು ಮೂರೂ ಇಲ್ಲದವನೆಂದು ಅರ್ಥವಾಗುವದು. ॥ ೬–೭ ॥ ಮುಪ್ಪು ಮರಣಗಳಿಲ್ಲದವನೂ, ಗಮನಾಗಮನ ರಹಿತನೂ, ಮಾನವ ಧರ್ಮದಿಂದ ದೂರಾದವನು ಜಂಗಮನೆಂದು ಹೇಳಲ್ಪಡುವನು ॥ ೮ ॥ ಈ ಜಂಗಮನು ಸ್ವತಂತ್ರನು (ಯಾರ ಆಶ್ರಯವನ್ನು ಅಪೇಕ್ಷಿಸದವನು), ವಿಕಲ್ಪರಹಿತನು (ಅನ್ಯರ ಸಂಗದಿಂದ ಬದಲಾವಣೆ ಹೊಂದದವನು), ಪೂರ್ವಜನ್ಮದ ಕರ್ಮಬಂಧನಕ್ಕೆ ಒಳಗಾಗದವನು, ನಿಃಶೂನ್ಯನೂ, ನಿಷ್ಕಳನೂ (ಅಖಂಡನು) ಆದವನೇ ಜಂಗಮನು ಈತನು ಸಾಕ್ಷಾತ್ ಪರಶಿವನೇ ॥ ೯ ॥

गुणातीतः क्रियातीतः कलातीतश्चिरंतनः ।
तत्वातीतः परः साक्षाज्जंगमः शृणु मत्प्रिये ॥ १० ॥
निर्मोही निष्प्रियः शून्यः सत्वादिगुणवर्जितः ।
निराभारी निष्प्रपञ्चः सच्चिदानन्दलक्षणः ॥ ११ ॥
शुद्धदेहः शुद्धमनाः शुद्धभावः शिवात्मकः ।
शुद्धबुद्धिः शुद्धगतिः शुद्धानां शुद्धिदायकः ॥ १२ ॥
सदसद्वस्तुरहितः सत्यासत्यविवर्जितः ।
कर्माकर्मविनिर्मुक्तश्चरः साक्षान्निरंजनः ॥ १३ ॥
स्वयश्चरः पर इति जङ्गमेऽस्मिन्निरंजने ।
अस्ति भेदत्रयं सम्यग्ज्ञातव्यं वल्लभे त्वया ॥ १४ ॥

देव्युवाच

स्वामिन्सत्करुणावार्धे तस्य भेदत्रयस्य च ।
लक्षणं श्रोतुमिच्छामि वद सत्कृपया विभो ॥ १५ ॥

---

ಮತ್ತು ಗುಣಾತೀತನೂ, ಕ್ರಿಯಾತೀತನು, ಕಲಾತೀತನು, ಅನಾದಿಯು, ತತ್ವಾತೀತನೂ, ಮೋಹರಹಿತನು, ನಿಷ್ಪ್ರಿಯನೂ, ಶೂನ್ಯನೂ, ಸತ್ವರಜಸ್ತಮೋಗುಣ ರಹಿತನೂ, ನಿರಾಭಾರಿಯೂ, ಪ್ರಪಂಚವಿದೂರನೂ, ಸತ್–ಚಿತ್–ಆನಂದ ಸ್ವರೂಪನು, ಪವಿತ್ರವಾದ ದೇಹವುಳ್ಳವನು, ಶುದ್ಧವಾದ ಮನಸ್ಸುಳ್ಳವನು, ಪವಿತ್ರ ಭಾವನೆಯುಳ್ಳವನು, ಮಂಗಲಸ್ವರೂಪನು, ಕೃತ್ರಿಮವಲ್ಲದ ಬುದ್ಧಿಯುಳ್ಳವನು, ಪವಿತ್ರವಾದ ಗತಿಯುಳ್ಳವನು, ಪಾವನವಾದ ಪದಾರ್ಥಗಳನ್ನು ಸಹ ಪಾವನ ಮಾಡುವವನು, ಸತ್ ಅಸತ್ ಸ್ವರೂಪಗಳಾದ ವಸ್ತುಗಳಿಗಿಂತಲೂ ಭಿನ್ನನಾದವನು, ಸತ್ಯ–ಅಸತ್ಯ ಇವುಗಳಿಂದ ದೂರಾದವನು, ಕರ್ಮ ಮತ್ತು ಅಕರ್ಮ ಇವುಗಳಿಂದ ದೂರಾದವನು ಆದ ಚರನು (ಜಂಗಮನು) ನಿರಂಜನ (ಸಾಕ್ಷಾತ್ ಪರಶಿವ)ನು ॥೧೩॥ ಇಂತಹ ನಿರಂಜನ ಜಂಗಮದಲ್ಲಿ ಸ್ವಯ, ಚರ, ಪರ ಎಂದು ಮೂರು ಭಾಗವಿರುವದು. ದೇವಿ? ಇದನ್ನು ನೀನು ಚನ್ನಾಗಿ ತಿಳಿದುಕೊ ಎಂದು ಪರಮಾತ್ಮನು ಹೇಳಿದನು ॥೧೪॥ ಆಗ ಪಾರ್ವತಿಯು— ದೇವಾಧಿದೇವನೂ ಕರುಣಾಸಾಗರನೂ ಆದ ಶಂಕರನೆ? ಆ ಮೂರು ವಿಧ ಜಂಗಮದ ಲಕ್ಷಣವನ್ನು ಕೇಳಲು ಬಹಳ ಅಭಿಲಾಷೆಯುಳ್ಳವರಾಗಿರುವೆನು, ಪ್ರಭುವೇ ದಯೆಯಿಂದ ಅದನ್ನು ಹೇಳಬೇಕೆಂದು ಕೇಳಿದಳು. ॥ ೧೫ ॥

## ईश्वर उवाच

साधु साधु महाभागे सम्यक्पृष्टं त्वयाऽधुना ।
ज्ञातुं शक्यं न सर्वेषामिदं तेऽद्य वदाम्यहम् ॥ १६ ॥
अंगीकृत्य सदाचारं, धृत्वा जङ्गमलक्षणम् ।
ज्ञात्वा सद्धर्ममखिलं, भूत्वा सुज्ञानवान्शुचिः ॥ १७ ॥
त्यक्त्वा दुष्कर्मनिचयं, मुक्त्वा दौर्जन्यलक्षणम् ।
हित्वा दुष्टमतिं, शास्त्रं मत्वा सद्वेदशैवकम् ॥ १८ ॥
मठमेकं समाश्रित्य कृत्वा सल्लिंगपूजनम् ।
तत्पुरस्थितसद्भक्तगृहे भिक्षामटन्मुदा ॥ १९ ॥
तद्भिक्षार्जितसद्द्रव्येष्वास्थां हित्वा निरंतरम् ।
सावधानमनाः सम्यक्सत्यज्ञानपरो भवेत् ॥ २० ॥

---

ಆಗ ಪರಮಾತ್ಮನು– ಅಹೋ ಮಹಾಭಾಗ್ಯಶಾಲಿಯಾದ ದೇವಿಯೇ ಈಗ ಒಳ್ಳೇ ಪ್ರಶ್ನೆಯನ್ನು ಮಾಡಿದಿ. ಈ ವಿಷಯವು ಸರ್ವರಿಗೂ ತಿಳಿಯಲಿಕ್ಕೆ ಸಾಧ್ಯವಾದುದಲ್ಲ ಅದನ್ನು ಹೇಳುವೆನು ಕೇಳು. ‖ ೧೬ ‖

### — ಸ್ವಯ ಜಂಗಮ ಲಕ್ಷಣ —

ಪರಂಪರಾಗತವಾದ ಸದಾಚಾರವನ್ನು ಅಂಗೀಕರಿಸಿ, ಜಂಗಮ ಲಕ್ಷಣ (ಚಿಹ್ನ) ವನ್ನು ಧರಿಸಿಕೊಂಡು, ತನ್ನ ಶ್ರೇಷ್ಠವಾದ ಧರ್ಮವನ್ನೆಲ್ಲಾ ಪೂರ್ಣವಾಗಿ ತಿಳಿದು ಕೊಂಡು, ಸಮ್ಯಗ್ ಜ್ಞಾನವುಳ್ಳವನು ಹಾಗು ಶುಚಿರ್ಭೂತನೂ ಆಗಿ, ಪಾಪಕರಗಳಾದ ದುಷ್ಟ ಕರ್ಮಗಳನ್ನೆಲ್ಲಾ ತ್ಯಾಗ ಮಾಡಿ, ದೌರ್ಜನ್ಯರಹಿತನಾಗಿ, ದುಷ್ಟ ಬುದ್ಧಿಯನ್ನು ಬಿಟ್ಟು ಶಿವೋತ್ಕರ್ಷ ಬೋಧಕವಾದ ವೇದಭಾಗವನ್ನು ಶಿವಾಗಮಗಳನ್ನು ಚನ್ನಾಗಿ ತಿಳಿದವನಾಗಿ ಒಂದು ಮಠವನ್ನು ಆಶ್ರಯಿಸಿದವನಾಗಿ ತನ್ನ ಲಿಂಗಪೂಜಾದಿ ಕಾರ್ಯವನ್ನು ಒಳ್ಳೇ ನಿಷ್ಠೆಯಿಂದ ಮಾಡುವವನು, ಆ ಗ್ರಾಮದಲ್ಲಿರುವ ಸದ್ಭಕ್ತರ ಮನೆಗಳಲ್ಲಿ ಭಿಕ್ಷಾಟನವನ್ನು ಸಂತೋಷದಿಂದ ಮಾಡುತ್ತಾ, ಭಕ್ತಿಯಿಂದ ಸಮರ್ಪಿಸಿದ ಧನಧಾನ್ಯಾದಿ ಸಮಸ್ತ ಪದಾರ್ಥಗಳಲ್ಲಿ ಆಶಾ ರಹಿತನಾಗಿ ಮಠಕ್ಕೆ ಬರುವ ಶಿವಭಕ್ತರಿಗೂ ಗುರು ಜಂಗಮರಿಗೂ ಆದರಾತಿಥ್ಯವನ್ನು ಮಾಡುತ್ತ

गतागतेशभक्तानां चराणामौपचारकम् ।
कुर्वन्यो वसते नित्यं स एव स्वयजङ्गमः ॥ २१ ॥

अथ चरजङ्गमलक्षणम्

षट्स्थलाचारसंपत्तिं धृत्वा, हित्वाऽष्टदुर्मदान् ।
षड्वर्गविक्रियां त्यक्त्वा, कृत्वा षट्कर्मभंजनम् ॥ २२ ॥
षडूर्मिकचयं नीत्वा भित्वा षड्भ्रमणोन्मदम् ।
षडक्षरमनुं जप्त्वा भूत्वा तद्वन्निरंजनः ॥ २३ ॥
पञ्चाक्षरमनुं ध्यात्वा पञ्चक्लेशान्विपाटयन् ।
वञ्चयन् वञ्चतां सम्यग्ज्ञानसंपत्तिवैभवात् ॥ २४ ॥
मलत्रयतरुं छित्वा धूलीकुर्वन्मदाचलम् ।
छिंदन्पाशाष्टकलतां भिंदन् व्यसनसप्तकम् ॥ २५ ॥

---

ಸಮಾಧಾನವಾದ ಮನಸ್ಸುಳ್ಳವನು ಒಳ್ಳೇ ಶ್ರೇಷ್ಠವಾದ ಜ್ಞಾನವುಳ್ಳವನು ಸತ್ಯವಂತನೂ ಆಗಿ ವಿರತಿಯಿಂದ ಮಠದಲ್ಲಿ ವಾಸ ಮಾಡುವವನು ಸ್ವಯ ಜಂಗಮನು. ॥ ೧೭ರಿಂದ ೨೧ ॥

— ಅಥ ಚರಜಂಗಮ ಲಕ್ಷಣ —

ಆರು ಸ್ಥಲಗಳ ಆಚಾರ ಸಂಪತ್ತುಳ್ಳ, ವಿದ್ಯಾ, ಜ್ಞಾನ, ವಕ್ತೃತ್ವ, ಲೇಖನ, ಅಧಿಕಾರ, ಧನ, ತಾರುಣ್ಯ, ಸೌಂದರ್ಯ ಎಂಬ ಎಂಟು ವಿಧವಾದ ಮದವಿಲ್ಲದ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ವಿಧ ಅಂತಃಶತ್ರುಗಳ ವಿಕಾರಕ್ಕೆ ಅವಕಾಶ ಕೊಡದಂಥ, ಯಜನ, ಯಾಜನ ಅಧ್ಯಯನ, ಅಧ್ಯಾಪನ, ದಾನ, ಪತಿಗ್ರಹ ಎಂಬ ಷಟ್‌ಕರ್ಮಗಳ ಬಂಧನಕ್ಕೆ ಒಳಗಾಗದ, ಹಸಿವು, ತೃಷೆ, ಶೋಕ, ಮೋಹ, ಜರೆ, ಮೃತ್ಯು ಎಂಬ ಷಡೂರ್ಮಿಗಳಿಗೆ ಆವಕಾಶ ಕೊಡದ, ಆರು ವಿಧವಾದ ಉನ್ಮಾದಗಳಿಗೆ ಆಶ್ರಯ ಕೊಡದಂಥ, ಷಡಕ್ಷರ ಮಂತ್ರವನ್ನು ಯಾವಾಗಲೂ ಧ್ಯಾನ ಮಾಡುತ್ತಿರುವಂಥ, ಮಾಯಾರಂಜನ ರಹಿತನಾದಾತನೇ ಚರಜಂಗಮನು. ॥೨೨-೨೩॥ ಪಂಚಾಕ್ಷರ ಮಂತ್ರ ಧ್ಯಾನದಿಂದ ಪಂಚಕ್ಲೇಶಗಳನ್ನು ನಾಶಮಾಡಿದಂಥ, ಶ್ರೇಷ್ಠವಾದ ಜ್ಞಾನ ಸಂಪತ್ತಿನ ಬಲದಿಂದ ಮೋಸಗಾರರ ಮೋಸಕ್ಕೆ ವಶನಾಗದಂಥ, ಆಣವ, ಮಾಯಾ, ಕಾರ್ಮಿಕ ಎಂಬ ಮೂರು ಮಲಗಳ ಬೇರನ್ನು ಕತ್ತರಿಸಿ, ಅಹಂಕಾರವೆಂಬ ಪರ್ವತವನ್ನು ಪುಡಿ ಪುಡಿ ಮಾಡಿ, ಎಂಟು ವಿಧವಾದ ಪಾಶವೆಂಬ ಬಳ್ಳಿಯನ್ನು ತುಂಡು ತುಂಡು ಮಾಡಿ, ಏಳು ವಿಧವಾದ ವ್ಯಸನಗಳನ್ನು ಹಸನ ಮಾಡಿ, ವೀರ

वीरमाहेश्वराचारसंपद्वृद्धिं दिने दिने ।
पालयित्वा प्राणसमं कायवाङ्मानसैः परम् ॥ २६ ॥
शैवानुभावकं शास्त्रमंगीकृत्य पुराश्रयम् ।
तदेवाखिलशिष्याणामुपदिश्य दिने दिने ॥ २७ ॥
तदन्तःस्थमलं क्षाल्य कृत्वा तानखिलान् शुचीन् ।
तैः समं निखिलान् देशान्संचरन् शुद्धभावतः ॥ २८ ॥
तद्देशस्थमहाभक्तनिवहैः कृतपूजनम् ।
स्वीकुर्वन्मोदतोऽबाधं पावयंस्तान्महाजनान् ॥ २९ ॥
कांश्चिद्दर्शनमात्रेण कांश्चिदंघ्रिसमीलनात् ।
हस्तस्पर्शनतः कांश्चित्पावयन्प्रणतान् जनान् ॥ ३० ॥

---

ಮಾಹೇಶ್ವರರ ಆಚಾರ ಸಂಪತ್ತನ್ನು ಪ್ರತಿ ದಿವಸ ವೃದ್ಧಿಗೊಳಿಸುತ್ತ ಕಾಯ, ವಾಕ್ಕು, ಮನಸ್ಸು ಎಂಬ ತ್ರಿಕರಣಪೂರ್ವಕವಾಗಿ ತಾನು ಚನ್ನಾಗಿ ಆಚರಿಸುತ್ತಿರುವಂಥ, ಪರಂಪರಾಗತವಾದ ಶಿವಾನುಭವ ಶಾಸ್ತ್ರವನ್ನು ಪ್ರಾಣ ಸಮಾನವಾದುದೆಂದು ಭಾವಿಸುತ್ತ, ತ್ರಿಕರಣಪೂರ್ವಕವಾಗಿ ತಾನು ಅಂಗೀಕರಿಸಿ, ಅದನ್ನು ಪ್ರತಿದಿವಸ ಸಕಲ ವೀರಶೈವರಿಗೆ ಬೋಧ ಮಾಡುತ್ತಿರಬೇಕು. ॥ ೨೬-೨೭ ॥ ಶಿವಾನುಭವ ಶಾಸ್ತ್ರವನ್ನು ಅಧ್ಯಯನ ಮಾಡುವದಕ್ಕಾಗಿ ತನ್ನಲ್ಲಿ ವಾಸ ಮಾಡಿದಂಥ ಅಂತೇವಾಸಿ(ವಟು)ಗಳಿಗೂ ಬೋಧ ಮಾಡುತ್ತ ಅವರ ಅಂತಃಕರಣದಲ್ಲಿದ್ದ ಮಾಲಿನ್ಯವನ್ನು ತೊಳೆದು ಅವರೆಲ್ಲ ರನ್ನು ಪರಿಶುದ್ಧರನ್ನಾಗಿ ಮಾಡಿ ಅವರೊಡನೆ ಶುದ್ಧ ಭಾವನೆಯಿಂದ ದೇಶ ಸಂಚಾರ ವನ್ನು ಮಾಡಬೇಕು. ಆ ಸಂಚಾರ ಕಾಲದಲ್ಲಿ ಆಯಾ ಭಾಗದ ಮಹಾಭಕ್ತರಿಂದ ಆದರಪೂರ್ವಕವಾಗಿ ಮಾಡಲ್ಪಡುವ ಸತ್ಕಾರವನ್ನು ಆನಂದದಿಂದ ಸ್ವೀಕರಿಸುವವನಾಗಿ ಅವರೆಲ್ಲರನ್ನು ಧರ್ಮೋಪದೇಶದಿಂದ ಪಾವನರನ್ನಾಗಿ ಮಾಡುವಂಥ, ತನಗೆ ಶರಣಾಗತ ರಾಗಿ ಬಂದ ಭಕ್ತರಲ್ಲಿ ಕೆಲವರನ್ನು ದರ್ಶನಮಾತ್ರದಿಂದಲೂ, ಕೆಲವರನ್ನು ಪಾದಸ್ಪರ್ಶ ದಿಂದಲೂ, ಮತ್ತೆ ಕೆಲವರನ್ನು ಹಸ್ತಸ್ಪರ್ಶದಿಂದಲೂ ಪಾವನರನ್ನಾಗಿ ಮಾಡುತ್ತ ಈ ರೀತಿಯಾಗಿ ಆಯಾ ಭಾಗದ ಭಕ್ತರ ಭಕ್ತಿ ಭಿಕ್ಷೆಯನ್ನು ಸ್ವೀಕರಿಸುತ್ತ ಎಲ್ಲ

एवं रीत्या भक्तिभिक्षां स्वीकुर्वन्संचरन्सदा ।
चरपट्टाधिकारी यः स एव चरजङ्गमः ॥ ३१ ॥

देव्युवाच

भो स्वामिन् करुणासिन्धो भवता भाषितं खलु ।
चरपट्टाधिकारीति तत्कथं वद मे विभो ॥ ३२ ॥

ईश्वर उवाच

सत्यं सन्मतिके गौरि मयोक्तं नलिनेक्षणे ।
वदामि शृणु संमोदाच्चरपट्टस्य लक्षणम् ॥ ३३ ॥
चरते निखिलान्देशान् रटत्यैशानभावकम् ।
पठते स्वात्मनि परं चरपट्टं तदेव हि ॥ ३४ ॥
गुरुः स चरभक्तानां संमुखे सर्वसंमतम् ।
ददाति यस्यशिष्यस्य स एव चरपट्टवान् ॥ ३५ ॥

---

ಕಡೆಗೆ ಯಾವಾಗಲೂ ಸಂಚಾರ ಮಾಡುವಂಥ ನಿರಂಜನ ಚರಪಟ್ಟಾಧಿಕಾರವನ್ನು ಹೊಂದಿದಂಥ ಜಂಗಮನೇ ಚರ ಜಂಗಮನು ಎಂದು ಪರಮಾತ್ಮನು ಅಪ್ಪಣೆ ಮಾಡಿದನು. ॥ ೨೮–೩೧ ॥

ಆಗ ಪಾರ್ವತಿಯು— ದಯಾಸಾಗರನಾದ ಸ್ವಾಮಿಯೇ ಚರಜಂಗಮನಿಗೆ ಚರಪಟ್ಟಾಧಿಕಾರಿ ಎಂದು ಅಪ್ಪಣೆ ಮಾಡಿದಿರಲ್ಲಾ ಆ ನಿರಂಜನ ಚರಪಟ್ಟದ ಲಕ್ಷಣವು ಏನು? ಅದನ್ನು ಕೃಪೆಯಿಂದ ಹೇಳಬೇಕು ಪ್ರಭುವೆ? ಎಂದು ಪ್ರಾರ್ಥಿಸಿದಳು. ॥೩೨॥

ಆಗ ಪರಮಾತ್ಮನು— ಕಮಲದಂತೆ ಸುಂದರವಾದ ಕಣ್ಣುಳ್ಳ ಮಹಾಬುದ್ಧಿವಂತಿಯಾದ ಗೌರಿಯೇ? ನಾನು ಹೇಳಿದ ನಿರಂಜನ ಚರಪಟ್ಟದ ಲಕ್ಷಣಾರ್ಥವನ್ನು ಹೇಳುವೆನು ಸಂತೋಷದಿಂದ ಕೇಳು. ಚರಪಟ್ಟ ಇದರಲ್ಲಿ ಚ ಎಂದರೆ ಎಲ್ಲಾ ದೇಶದಲ್ಲಿ ಸಂಚಾರ ಮಾಡುವ, ರ ಎಂದರೆ ಶಿವಮಯವಾದ ಭಾವನೆಯಿಂದ ತಿರುಗುವ, ಪಟ್ಟ ಎಂದರೆ ಅಂತಃಕರಣದಲ್ಲಿ ಪರಮಾತ್ಮನ ನಾಮವನ್ನು ಪಠನ ಮಾಡುವ, ಅರ್ಥಾತ್ ಜಗತ್ತೆಲ್ಲವು ಶಿವಮಯವಾದುದೆಂಬ ಭಾವನೆಯಿಂದ ಪರಮಾತ್ಮನ ಸ್ವರೂಪವಾದ ಮಂತ್ರವನ್ನು ಪಠನ ಮಾಡುತ್ತ ಸಂಚರಿಸುವದು, ಚರಪಟ್ಟ ಇದರ ಲಕ್ಷಣಾರ್ಥವು. ಇಂತಹ ನಿರಂಜನ ಚರಪಟ್ಟವನ್ನು ನಿರಾಭಾರಿ ಗುರುವು ತನ್ನ ಶಿಷ್ಯರ (ಮರಿಗಳ)ಲ್ಲಿ ಯಾವ ಮರಿಯು ಎಲ್ಲಾ ನಿರಾಭಾರಿಗಳಿಗೂ ಮತ್ತು ಭಕ್ತಮಾಹೇಶ್ವರರಿಗೂ ಸಮ್ಮತನಾಗುವನೊ ಆ ಮರಿಗೆ ಅವರ ಸಂಮುಖದಲ್ಲಿ ಕೊಡುವನು. ಹೀಗೆ ನಿರಾಭಾರಿ ಗುರುವಿನಿಂದ ನಿರಂಜನ ಚರಪಟ್ಟವನ್ನು ಪಡೆದುಕೊಂಡಾತನು, ಚರಜಂಗಮನು. ॥೩೨–೩೫॥

देव्युवाच

स्वामिन्नेतन्महापट्टं दातव्यं कीदृशे यथा ।
दातव्यं सर्वमेतस्य लक्षणं वद मे विभो ॥ ३६ ॥

ईश्वर उवाच

सम्यग्ज्ञानवति ख्याते सर्वचातुर्यवित्प्रिये ।
वदामि तस्य सर्वं ते लक्षणं शृणु संमुदा ॥ ३७ ॥
कुष्ठिने पंगवेंऽधाय कुब्जायात्यन्तकामिने ।
श्रद्धाभक्तिविहीनाय दुर्मदाय दुरात्मने ॥ ३८ ॥
अनधीतात्मविद्याय परनिंदापराय च ।
परस्त्रीपरवित्तादिपरिग्राहादराय च ॥ ३९ ॥
व्रतभ्रष्टाय सत्कार्यकृतविघ्नाय दुर्हृदे ।
दुर्दोषाहितचित्ताय दुराचारपराय च ॥ ४० ॥

---

ಆಗ ಪಾರ್ವತಿಯು– ಸರ್ವಾಂತರ್ಯಾಮಿಯಾದ ಭಗವಂತನೆ? ಶ್ರೇಷ್ಠವಾದ ಈ ನಿರಂಜನ ಚರಪಟ್ಟವನ್ನು ಎಂಥವನಿಗೆ ಕೊಡಬೇಕು? ಮತ್ತು ಹೇಗೆ ಕೊಡಬೇಕು ಎಂಬುದನ್ನು ನನಗೆ ತಿಳುಹಿಸಿಕೊಡು ಪ್ರಭುವೆ? ಎಂದು ಕೇಳಲು ಪರಮಾತ್ಮನು ಹೇಳುವನು. ॥ ೩೬ ॥

ಸಮೀಚೀನವಾದ ಜ್ಞಾನವುಳ್ಳವಳು, ಕೀರ್ತಿವಂತಳೂ, ಸಮಸ್ತ ಚಾತುರ್ಯವನ್ನು ಬಲ್ಲವಳು ಆದ ಪ್ರಾಣಪ್ರಿಯೆ? ಈ ನಿರಂಜನ ಚರಪಟ್ಟವನ್ನು ಎಂಥವನಿಗೆ ಕೊಡಬಾರದು. ಯಾರಿಗೆ ಕೊಡಬೇಕು ಮತ್ತು ಹೇಗೆ ಕೊಡಬೇಕು ಎಂಬುದೆಲ್ಲವನ್ನು ಸಂತೋಷದಿಂದ ಹೇಳುವೆನು ಕೇಳು. ॥ ೩೭ ॥ ಈ ನಿರಂಜನ ಚರಪಟ್ಟಕ್ಕೆ ಅಯೋಗ್ಯರಾದವರು— ಕುಷ್ಠರೋಗಿಯು, ಕುಂಟನು, ಕುರುಡನು, ಡೂಗ(ಕುಳ್ಳ)ನು, ಅತ್ಯಂತ ಕಾಮುಕನು, ನಂಬಿಗಿ ಭಕ್ತಿಗಳಿಲ್ಲದವನು, ದುರಹಂಕಾರಿಯು, ದುಷ್ಟಸ್ವಭಾವವುಳ್ಳವನು, ಆತ್ಮವಿದ್ಯೆಯನ್ನು ಕಲಿಯದವನು, ಅನ್ಯರ ನಿಂದೆಯಲ್ಲಿ ಆಸಕ್ತನಾದವನು, ಪರಸ್ತ್ರೀ ಪರದ್ರವ್ಯ ಮೊದಲಾದವುಗಳಲ್ಲಿ ಆಶೆಯುಳ್ಳವನು, ಆಚಾರಭ್ರಷ್ಟನು, ಒಳ್ಳೇ ಕಾರ್ಯಗಳಿಗೆ ವಿಘ್ನ ಮಾಡುವವನು, ಕೆಟ್ಟ ಮನಸ್ಸುಳ್ಳವನು, ಕೆಟ್ಟ ಕಾರ್ಯಗಳಲ್ಲಿ ಆಸಕ್ತನಾದವನು, ಸ್ವತಃ ದುರಾಚಾರಿಯಾದವನು, ಉಪಕಾರ

कृतघ्नाय गुरुद्रोहकृतचित्ताय सर्वथा ।
न देयं ज्ञानहीनाय चरपट्टं वरानने ॥ ४१ ॥
दमितेंद्रियवर्गाय सत्याचारपराय च ।
निरहंकारिणे सत्यवचसे शुद्धचेतसे ॥ ४२ ॥
शिवानुभावसच्छास्त्रकथनात्ताधिकारिणे ।
पुरातनीयसन्मार्गनिरताय सदात्मने ॥ ४३ ॥
कुलीनाय सदा लिंगजङ्गमार्चापराय च ।
परद्रव्याबलाम्रुख्यग्रहणेऽनात्तचेतसे ॥ ४४ ॥
नखनेत्रादिसर्वांगेष्वक्षताय च धीमते ।
श्रद्धाभक्तिमते सम्यग्देयं तत्कमलानने ॥ ४५ ॥
अस्मै तदेव दातव्यमित्यास्था स्याद्गुरोरपि ।
शुद्धाचारवतां भक्तमाहेशानां समाज्ञया ॥ ४६ ॥

---

ಸ್ಮರಣೆ ಇಲ್ಲದವನು (ಕೃತಘ್ನ) ಗುರುವಿಗೂ ಸಹ ದ್ರೋಹ ಮಾಡುವ ಮನಸ್ಸುಳ್ಳವನು, ಜ್ಞಾನಹೀನನು ಇಂಥವರೆಲ್ಲರಿಗೂ ದೇವಿಯೇ ನಿರಂಜನ ಚರಪಟ್ಟಾಧಿಕಾರವನ್ನು ಖಂಡಿತವಾಗಿಯೂ ಕೊಡಬಾರದು. ॥ ೩೮–೪೧ ॥

ಈ ನಿರಂಜನ ಚರಪಟ್ಟಾಧಿಕಾರವನ್ನು ಎಂಥವರಿಗೆ ಕೊಡಬೇಕೆಂದರೆ, ಇಂದ್ರಿಯಗಳನ್ನೆಲ್ಲ ತನ್ನ ಸ್ವಾಧೀನದಲ್ಲಿಟ್ಟುಕೊಂಡಂಥ, ಸದಾಚಾರ ಪರನಾದ, ಅಹಂಕಾರವಿಲ್ಲದಂಥ, ಸತ್ಯವಂತನಾದ, ಶುದ್ಧಮನಸ್ಸುಳ್ಳ ಶ್ರೇಷ್ಠವಾದ ಶಿವಾನುಭವ ಶಾಸ್ತ್ರವನ್ನು ಬೋಧಿಸುವ ಸಾಮರ್ಥ್ಯವನ್ನು ಪಡೆದುಕೊಂಡಂಥ, ಸಂಪ್ರದಾಯಾನುಸಾರವಾಗಿ ಬಂದ ಸನ್ಮಾರ್ಗಗಳಲ್ಲಿ ನಿರತನಾದಂಥ, ಒಳ್ಳೇ ಸ್ವಭಾವವುಳ್ಳ, ಸತ್ಕುಲ ಪ್ರಸೂತನಾದ, ಯಾವಾಗಲೂ ಲಿಂಗ ಮತ್ತು ಜಂಗಮ ಪೂಜಾದಲ್ಲಿ ನಿರತನಾದಂಥ, ಪರಸ್ತ್ರೀ ಪರದ್ರವ್ಯ ಪರವಸ್ತು ಇವುಗಳನ್ನು ಗ್ರಹಿಸುವದರಲ್ಲಿ ಆಸಕ್ತಿಯಿಲ್ಲದಂಥ, ಉಗುರು, ಕಣ್ಣು, ಮೊದಲಾದ ಅವಯವಗಳಲ್ಲಿ ನ್ಯೂನವಿಲ್ಲದಂಥ, ಬುದ್ಧಿಶಾಲಿಯಾದಂಥ, ಪೂಜ್ಯರಲ್ಲಿ ಭಕ್ತಿ ವಿಶ್ವಾಸಗಳುಳ್ಳಂಥ, ಎಲೈ ದೇವಿಯೆ? ಈ ಲಕ್ಷಣಗಳುಳ್ಳ ಮಠಸ್ಥಲದ ವಟುವಿಗೆ ನಿರಂಜನ ಚರಪಟ್ಟಾಧಿಕಾರವನ್ನು ಕೊಡತಕ್ಕದ್ದು. ॥ ೪೨–೪೬ ॥

ಅಧಿಕಾರ ಮಾಡುವಂಥ ನಿರಾಭಾರಿ ಗುರುವಿಗೆ ಇಂತಹ ವಟುವಿಗೇನೇ ಅಧಿಕಾರ ಕೊಡಬೇಕೆಂಬ ಅಭಿಲಾಷೆ ಇದ್ದರೂ ಸಹ ಶುದ್ಧಾಚಾರ ಸಂಪನ್ನರಾದ ಭಕ್ತ ಮಾಹೇಶ್ವರರ ಅನುಮತಿಯಿಂದ ಅವರ ಸಮ್ಮುಖದಲ್ಲಿ ಆ ವಟುವಿಗೆ ನಿರಂಜನ ಚರ

देयं तद्गुरुणा तस्मै भक्तमाहेशसंमुखे ।
तत्संमतः स वै नोचेन्न देयं गुरुणा हठात् ॥ ४७ ॥
आत्मीयाखिलशिष्याणां भक्तमाहेशसंसदाम् ।
यः संमतो भवेत्तस्मै देयं तद्गुरुणा शिवे ॥ ४८ ॥
प्रापंचिकवदागंतुकान्यबाधानिवृत्तये ।
पत्रमांत्यं लिखित्वास्मै न देयाद्गुरुरीश्वरि ॥ ४९ ॥
दातव्यं गृहिभिः सर्वैः पार्थिवैः परभीतये ।
आशाहीनैर्विरक्तैस्तन्न देयं न बिभेत्तदा ॥ ५० ॥
एतच्छास्त्रं विचार्येत्थं भक्तमाहेशसंमुखे ।
देयात्तं चरपट्टं हि गुरुः शिष्याय धीमते ॥ ५१ ॥
गुरौ लिंगैक्यतां यातेऽप्यदत्वा स्वाश्रमं तदा ।
भक्तमाहेश्वराः सर्वे मिलितास्तदनंतरम् ॥ ५२ ॥

---

ಪಟ್ಟಾಧಿಕಾರವನ್ನು ಕೊಡಬೇಕು. ಒಂದು ಪಕ್ಷ ಭಕ್ತ ಮಾಹೇಶ್ವರರು ಆ ಮರಿಗೆ ಅಧಿಕಾರ ಮಾಡಲು ಒಪ್ಪದಿದ್ದರೆ ಗುರುವು ಬಲಾತ್ಕಾರದಿಂದ ಅಧಿಕಾರವನ್ನು ಕೊಡಬಾರದು. ॥ ೪೬-೪೭ ॥ ನಿರಾಭಾರಿ ಜಂಗಮನ ಹತ್ತಿರುವ ಎಲ್ಲಾ ಮರಿಗಳಲ್ಲಿ ಯಾವ ಮರಿಯು ಭಕ್ತ ಮಾಹೇಶ್ವರರಿಗೆ ಸಂಮತನಾಗುವನೋ ಆ ಮರಿಗೇ ನಿರಾಭಾರಿ ಗುರುವು ಎಲೈ ದೇವಿಯೇ ತನ್ನ ಅಧಿಕಾರವನ್ನು ಕೊಡಬೇಕು. ॥ ೪೮ ॥ ಎಲೈ ದೇವಿಯೆ? ಪ್ರಾಪಂಚಿಕರಂತೆ, ಮುಂದೆ ಬರಬಹುದಾದ ತೊಂದರೆಗಳ ನಿವಾರಣೆಗಾಗಿ ಶಿಷ್ಯನ ಹೆಸರಿನಲ್ಲಿ ಮೃತ್ಯುಪತ್ರವನ್ನು ಬರೆದು ನಿರಾಭಾರಿ ಗುರುವು ತನ್ನ ಮರಿಗೆ ಕೊಡಬಾರದು. ಧನದ ಆಶೆಯುಳ್ಳ ಮತ್ತು ಪರರ ಭೀತಿಯುಳ್ಳ ಗೃಹಸ್ಥರು ಮತ್ತು ರಾಜರು ಮೃತ್ಯುಪತ್ರವನ್ನು ಬರೆದು ತಮಗೆ ಬೇಕಾದವರಿಗೆ ಕೊಡಬಹುದಲ್ಲದೆ ಆಶಾರಹಿತರಾದ (ಆಶೆಯನ್ನು ದಾಸಿಯನ್ನಾಗಿ ಮಾಡಿಕೊಂಡಂಥ) ವಿರಕ್ತರು ಮೃತ್ಯುಪತ್ರವನ್ನು ಬರೆದು ಕೊಡಬಾರದು. ವಿರಕ್ತರು ಮುಂದೆ ಬರುವ ಯಾವುದಕ್ಕೂ ಹೆದರಬಾರದು ಎಂಬ ಶಾಸ್ತ್ರ ನಿಯಮವನ್ನು ವಿಚಾರ ಮಾಡಿ, ನಿರಾಭಾರಿ ಗುರು ಆಚಾರವಂತನು ಬುದ್ಧಿವಂತನೂ ಆದ ಮಠಸ್ಥಲದ ಶಿಷ್ಯನಿಗೆ ಭಕ್ತ ಮಾಹೇಶ್ವರರ ಸಂಮುಖದಲ್ಲಿ ನಿರಂಜನ ಚರಪಟ್ಟಾಧಿಕಾರವನ್ನು ಕೊಡಬೇಕು. ॥ ೪೯-೫೧ ॥

ಒಂದು ಪಕ್ಷ ಆ ನಿರಾಭಾರಿ ಗುರುವು ತನ್ನ ಚರಾಧಿಕಾರವನ್ನು ಯಾರಿಗೂ ಕೊಡದಲೇ ಲಿಂಗೈಕ್ಯನಾದರೆ ಅನಂತರ ಭಕ್ತ ಮಾಹೇಶ್ವರರೆಲ್ಲ ಒಂದು ಕಡೆಗೆ ಕೂಡಿ, ಆ ನಿರಾಭಾರಿ ಜಂಗಮನ ಬಳಿಯಲ್ಲಿ ಶಿವಾನುಭವ ಶಾಸ್ತ್ರವನ್ನು ಅಧ್ಯಯನ

तदंतेवासिनिचये दृष्ट्वा तं ज्ञानिनं शुचिम् ।
दापितव्यं तदा तस्मै चान्यपट्टाधिकारिणा ॥ ५३ ॥
शिवानुभावसच्छास्त्रपुस्तकादानपूर्वकम् ।
गृहीत्वा गुरुणा पट्टं चरते स चरः स्मृतः ॥ ५४ ॥

अथ परजङ्गमलक्षणम्

तृणं ब्रह्मा तृणं विष्णुस्तृणानींद्रादिदेवताः ।
तृणान्यष्टौ महाभोगास्तृणान्यष्टौ विभूतयः ॥ ५५ ॥
सिद्धयोऽष्टौ तृणान्यन्ये भोगा अपि तृणोपमाः ।
चतुर्विधपदान्येवं तृणानि त्रिजगन्ति च ॥ ५६ ॥
लोकस्थितावलामुख्यमहाभोगास्तृणानि वै ।
स्वर्णालंकारमुख्यानि तृणानीति निराशया ॥ ५७ ॥

---

ಮಾಡುತ್ತಿದ್ದ ಅಂತೇವಾಸಿ (ಮಠಸ್ಥಲಮರಿ)ಗಳ ಗುಂಪಿನಲ್ಲಿ ಜ್ಞಾನಿಯೂ, ಸದಾಚಾರವುಳ್ಳವನು ಸಚ್ಚರಿತ್ರನು ಆದ ಮರಿಯನ್ನು ಹುಡುಕಿ ಆತನಿಗೆ ಮತ್ತೊಬ್ಬ ನಿರಂಜನ ಚರಪಟ್ಟಾಧಿಕಾರಿಯ ಕಡೆಯಿಂದ ಆ ನಿರಂಜನ ಚರಪಟ್ಟಾಧಿಕಾರವನ್ನು ಕೊಡಿಸಬೇಕು. ||೫೨-೫೩|| ನಿರಾಭಾರಿ ಗುರುವು ಆ ಶಿಷ್ಯನಿಗೆ ನಿರಾಭಾರಿ ಚರ ಸಂಸ್ಕಾರದಲ್ಲಿ ಹೇಳಿದ ಯಾವತ್ತು ಸಂಸ್ಕಾರಗಳನ್ನು ಶಾಸ್ತ್ರೋಕ್ತ ಪ್ರಕಾರ ಮಾಡಿ, ಶಿವಾನುಭವ ಶಾಸ್ತ್ರದ ಪುಸ್ತಕ ಕೊಡುವದು ಮುಂತಾದ ಯಾವತ್ತೂ ಕಾರ್ಯಗಳನ್ನು ಮಾಡಿ, ಪಟ್ಟವನ್ನು ಕಟ್ಟಬೇಕು. ಈ ಪ್ರಕಾರ ನಿರಾಭಾರಿ ಗುರುವಿನಿಂದ ನಿರಂಜನ ಚರಪಟ್ಟಾಧಿಕಾರವನ್ನು ಪಡೆದು ಸಂಚಾರ ಮಾಡುವಾತನೇ ನಿರಾಭಾರಿ ಚರಜಂಗಮನು ಎಂದು ಹೇಳಲ್ಪಡುವನು. || ೫೪ ||

— ಪರಜಂಗಮ ಲಕ್ಷಣ —

ಬ್ರಹ್ಮ, ವಿಷ್ಣು, ಇಂದ್ರಾದಿ ದೇವತೆಗಳು ಎಂಟು ವಿಧವಾದ ಮಹಾ ಭೋಗಗಳು ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿಃ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು ವಿಧವಾದ ಐಶ್ವರ್ಯಗಳು, ದೂರ ಶ್ರವಣ, ದೂರದರ್ಶನ, ಆಕಾಶ ಗಮನ, ಪರಕಾಯ ಪ್ರವೇಶ ಮೊದಲಾದ ಎಂಟು ಸಿದ್ಧಿಗಳು, ಇತರ ಲೌಕಿಕಗಳಾದ ಸಂಪತ್ತುಗಳು, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬ ನಾಲ್ಕು ವಿಧ ಮುಕ್ತಿಗಳು ಮತ್ತು ಮೂರು ಲೋಕಗಳು ಹುಲ್ಲು ಕಡ್ಡಿಗೆ ಸಮಾನವಾದವುಗಳೆಂದು ಭಾವಿಸುವಂಥ, ಇಹಲೋಕದಲ್ಲಿಯ ಸ್ತ್ರೀ ಮೊದಲಾದ ಸಕಲ ಭೋಗ್ಯ

मत्वैतानि च वस्तूनि निरस्येतरसंपदः ।
यत्र यत्र स्पृहाऽपर्शस्तत्र तत्रैव संचरन् ॥ ५८ ॥
श्रीखण्डपंकयोर्मल्लीसुमबर्बूरपुष्पयोः ।
लोहकांचनयोरुग्रविषपीयूषयोरपि ॥ ५९ ॥
कुकुंदेऽपि च पिष्टे च शाखाशाल्यन्नयोरपि ।
पयस्युष्णोदके दिव्यमंचलोष्ठावृतावनौ ॥ ६० ॥
कार्पासे पट्टवासे च, गाजौ रत्ने च मौक्तिके ।
क्षोणीभृच्चरयोर्लक्ष्मीवदकिंचनयोरपि ॥ ६१ ॥
गङ्गापल्वलयोः, क्षेत्रे श्मशानेऽपि च, दैवते ।
मानुषे, भाषणे मंत्र, सत्येऽसत्ये शुभेऽशुभे ॥ ६२ ॥

---

ವಸ್ತುಗಳು, ಬಂಗಾರದ ವಸ್ತು ವಡವೆಗಳು, ಮುತ್ತು ರತ್ನಗಳು, ಇತರ ಎಲ್ಲಾ ಸಂಪತ್ತುಗಳು ತೃಣ ಸಮಾನವಾದವುಗಳೆಂದು ತಿಳಿದುಕೊಂಡು ನಿರಾಶೆಯಿಂದ ಎಲ್ಲವನ್ನು ತ್ಯಾಗ ಮಾಡಿ ಯಾವ ಯಾವ ಸ್ಥಾನದಲ್ಲಿ ಆಶಾಕ್ಕೆ ಕಿಂಚಿತ್ತಾದರೂ ಅವಕಾಶವಿಲ್ಲವೋ ಅಂಥ ಸ್ಥಾನದಲ್ಲಿಯೇ ಸಂಚರಿಸುವಂತಹನು ಪರಜಂಗಮನು. ||೫೭-೫೮||

ಈ ಪರಜಂಗಮನು ಸುವಾಸನೆಯುಳ್ಳ, ಶ್ರೀ ಗಂಧದಲ್ಲಿ ದುರ್ವಾಸನೆಯುಳ್ಳ ಕೆಸರಿನಲ್ಲಿ, ಮಲ್ಲಿಗಿ ಹೂವಿನಲ್ಲಿ ಜಾಲಿ ಹೂವಿನಲ್ಲಿ, ಕಬ್ಬಿಣದಲ್ಲಿ ಬಂಗಾರದಲ್ಲಿ, ಕಾಳಕೂಟ ವಿಷದಲ್ಲಿ ಅಮೃತದಲ್ಲಿ, ಬೆಣಚಿ ಕಲ್ಲಿನಿಂದ ತಯಾರಾದ ರಂಗೋಲಿ ಪುಡಿಯಲ್ಲಿ ಗೋದಿ ಹಿಟ್ಟನಲ್ಲಿ, ಗಿಡದ ತಪ್ಪಲಿನಲ್ಲಿ ಸಣ್ಣಕ್ಕಿಯ ಅನ್ನದಲ್ಲಿ, ಹಾಲಿನಲ್ಲಿ ಬಿಸಿ ನೀರಿನಲ್ಲಿ, ಉತ್ತಮವಾದ ಪಲ್ಲಂಗ ಹಾಕಿದ ಮನೆಯಲ್ಲಿ ಹೆಂಟೆಯಿಂದ ತುಂಬಿದ ನೆಲದಲ್ಲಿ, ನೂಲಿನ ವಸ್ತ್ರದಲ್ಲಿ ರೇಶ್ಮಿಯ ಮಡಿಯಲ್ಲಿ, ಕಾಜಿನಲ್ಲಿ ಮುತ್ತು ರತ್ನಗಳಲ್ಲಿ, ರಾಜರಲ್ಲಿ ಬಡ ಸೇವಕರಿಲ್ಲಿ, ಶ್ರೀಮಂತನಲ್ಲಿ ಬಡವನಲ್ಲಿ, ಗಂಗಾ ನದಿಯಲ್ಲಿ ಸಣ್ಣ ಗುಂಡಿಯಲ್ಲಿ, ಪುಣ್ಯಕ್ಷೇತ್ರದಲ್ಲಿ ಸ್ಮಶಾನದಲ್ಲಿ, ದೇವತೆಯಲ್ಲಿ ಮನುಷ್ಯನಲ್ಲಿ, ಮಾತಿನಲ್ಲಿ ಮಂತ್ರದಲ್ಲಿ, ಸತ್ಯದಲ್ಲಿ

मृगद्विण्मेषयोः सर्पपृथुरोम्नोश्च सर्वदा ।
सर्वत्रैकमतिं कृत्वा समदृष्टिं समक्षमाम् ॥ ६३ ॥
भवितव्यमिदं मह्यं भवितव्यमिदं न मे ।
अकृत्वास्थामिति सदा भोग्येषु द्रव्यराशिषु ॥ ६४ ॥
सदा तृप्तिं समासाद्य सदानंदी भवन् स्वयम् ।
स्वपाददर्शनादेव भक्तानां चान्यदेहिनाम् ॥ ६५ ॥
मृगपक्षिपतंगानां पश्वादीनां च जीविनाम् ।
दत्वा मोक्षं विधीन्द्रादिसुरसन्दोहदुर्लभम् ॥ ६६ ॥
स्वपादतीर्थतस्तोयं तीर्थं कृत्वा चरेत्सदा ।
निरंजनः सन् यो लोके स एव परजङ्गमः ॥ ६७ ॥

---

ಅಸತ್ಯದಲ್ಲಿ, ಶುಭದಲ್ಲಿ ಅಶುಭದಲ್ಲಿ, ಸಿಂಹದಲ್ಲಿ ಆಡಿನಲ್ಲಿ, ಹಾವಿನಲ್ಲಿ ಮೀನದಲ್ಲಿ ಇತ್ಯಾದಿ ಪರಸ್ಪರ ವಿರುದ್ಧ ಪದಾರ್ಥಗಳಲ್ಲಿಯೂ ಸಹ ಎಲ್ಲಾ ಕಡೆಯಲ್ಲಿ ಒಂದೇ ವಿಧವಾದ ಭಾವನೆಯುಳ್ಳವನು, ಸಮಾನವಾದ ದೃಷ್ಟಿಯುಳ್ಳವನು, ಒಂದೇ ಪ್ರಕಾರದ ಸಹನಶೀಲತೆಯುಳ್ಳವನು ಆಗಿರುವನು. ॥ ೫೯-೬೩ ॥ ಭೋಗ್ಯ ವಸ್ತುಗಳಲ್ಲಿ ಹಾಗು ಹಣದ ರಾಶಿಯಲ್ಲಿ ಇದು ನನಗೆ ಅವಶ್ಯವಾಗಿ ಬೇಕು ಎಂಬ ಅಥವಾ ಇದು ನನಗೆ ಸಂಪೂರ್ಣ ಬೇಡ ಎಂಬ ಭಾವನೆ ಈ ಪರಜಂಗಮನಿಗೆ ಸ್ವಲ್ಪೂ ಇರುವದಿಲ್ಲ. ಅರ್ಥಾತ್ ಭೋಗ್ಯ ವಸ್ತುಗಳಲ್ಲಿ, ದ್ರವ್ಯ ರಾಶಿಗಳಲ್ಲಿ ಪರಜಂಗಮನಿಗೆ ಆಶೆಯೇ ಇರುವದಿಲ್ಲ. ಎಲ್ಲ ವಸ್ತುಗಳಿಂದಲೂ ಅವನು ಯಾವಾಗಲೂ ತೃಪ್ತಿಯನ್ನು ಹೊಂದಿ ಆನಂದಮಯನಾಗಿರುವನು. ತನ್ನ ಪಾದದರ್ಶನದಿಂದಲೇ ಭಕ್ತರಿಗೂ, ಇತರ ಮಾನವ ರಿಗೂ, ಮೃಗ ಪಕ್ಷಿಗಳಿಗೂ, ಕ್ರಿಮಿ ಕೀಟಗಳಿಗೂ, ಪಶು ಮೊದಲಾದ ಜೀವ ರಾಶಿ ಗಳಿಗೂ, ಬ್ರಹ್ಮ, ಇಂದ್ರ ಮೊದಲಾದ ಸಕಲ ದೇವತೆಗಳಿಗೆ ದುರ್ಲಭವಾದ ಮುಕ್ತಿ ಯನ್ನು ದಯಪಾಲಿಸುವನು. ॥ ೧೬೪-೬೬ ॥ ತನ್ನ ಪಾದತೀರ್ಥದಿಂದ ಇತರ ಜಲವನ್ನು ತೀರ್ಥವನ್ನಾಗಿ ಮಾಡಿ ಅಂದರೆ ಸಾಮಾನ್ಯವಾದ ಕೆರೆ, ಹೊಂಡ, ಗುಂಡಿ, ಹಳ್ಳ (ವರ್ತಿ) ಮುಂತಾದವುಗಳಲ್ಲಿ ಈ ಪರಜಂಗಮನು ತನ್ನ ಪಾದಗಳನ್ನು ತೊಳೆದು ಕೊಂಡದ್ದಾದರೆ ಆ ನೀರೆಲ್ಲ ಪಾವನ ತೀರ್ಥವಾಗುವದು. ಈ ಪ್ರಕಾರವಾಗಿ ನಿರಂಜನ

अयं साक्षात्परं ब्रह्म ह्ययमेव निरंजनः ।
अयमेव महायोगी ह्ययमेव सदात्मकः ॥ ६८ ॥
देहं धृत्वाऽपि निर्देही गुणवानपि निर्गुणः ।
एतस्योत्कर्षतां वक्तुं ममाशक्यं महेश्वरि ॥ ६९ ॥

इति परजङ्गमलक्षणम् । इति श्रीमद्वीरशैवसदाचारसंग्रहे निराभारिस्थलस्थस्वयचरपरलक्षणकथनं नाम पञ्चदशप्रकरणं समाप्तम् ।

---

ನಾದ (ಯಾವ ವಿಧವಾದ ಉಪಾಧಿ ಇಲ್ಲದಂತಹ) ಪರಜಂಗಮನು ಪಾದವಿಟ್ಟ ನೆಲವನ್ನು ಪುಣ್ಯಕ್ಷೇತ್ರವನ್ನಾಗಿ ಜಲವನ್ನು ಪಾವನ ತೀರ್ಥವನ್ನಾಗಿ ಮಾಡುತ್ತ ಯಾವಾಗಲೂ ಜಗತ್ತಿನ ಉದ್ಧಾರಕ್ಕಾಗಿ ಸಂಚರಿಸುತ್ತಿರಬೇಕು. ಇಂತಹ ಪರ ಜಂಗಮನು ಸಾಕ್ಷಾತ್ ಪರಬ್ರಹ್ಮವು. ಈತನು ಮಾಯಾರಂಜನೆಗೆ ಒಳಗಾಗದವನು, ಈತನೇ ಸತ್ಸ್ವರೂಪನು. ಈ ಪರಜಂಗಮನು ದೇಹವನ್ನು ಧರಿಸಿದ್ದರೂ ದೇಹ ರಹಿತನು, ಗುಣವಂತನಾಗಿದ್ದರೂ ಗುಣರಹಿತನು. ಈ ಪರಜಂಗಮನ ಮಹಿಮೆ ಯನ್ನು ಹಾಗು ಉತ್ಕರ್ಷವನ್ನು ಹೇಳಲು ಎಲೈ ದೇವಿಯೆ ನನಗೂ ಸಾಧ್ಯವಿರುವ ದಿಲ್ಲವೆಂದು ಪರಮಾತ್ಮನು ಪಾರ್ವತಿಗೆ ಹೇಳಿದನು.

ಇಲ್ಲಿಗೆ ಪರಜಂಗಮನ ಲಕ್ಷಣ ಮುಗಿದುದು.

ಶ್ರೀ ಮದ್ವೀರಶೈವ ಸದಾಚಾರ ಸಂಗ್ರಹದಲ್ಲಿ ನಿರಾಭಾರಿ ಸ್ಥಲದ ಸ್ವಯ ಚರ ಪರ ಜಂಗಮ ಲಕ್ಷಣವನ್ನು ಹೇಳುವಂತಹ ಹದಿನೈದನೆಯ ಪ್ರಕರಣದ ಪಂಡಿತ ಬಸವರಾಜ ಶಾಸ್ತ್ರಿ ಬೃಹನ್ಮಠ ಪಗಡದಿನ್ನಿ ಇವರಿಂದ ವಿರಚಿತವಾದ ಭಾವಾರ್ಥವು ಮುಗಿದುದು.

ಶ್ರೀ ಮದ್ವೀರಶೈವ ಸದಾಚಾರ ಸಂಗ್ರಹವು ಸಮಾಪ್ತವಾಯಿತು.

## ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆಯಲ್ಲಿ
### ದೊರೆಯತಕ್ಕ

# ಸಂಸ್ಕೃತ ಗ್ರಂಥಗಳು

| | | |
|---|---|---|
| ೧. | ವೀರಶೈವಾನಂದಚಂದ್ರಿಕಾ (ಮೈಸೂರ ವಿದ್ವತ್ ಪರೀಕ್ಷೆಯ ಪಠ್ಯಪುಸ್ತಕ) | ೩=೦೦ |
| ೨. | ಶಿವಮಂತ್ರ ಜಪವಿಧಿಃ .... .... | ೨=೦೦ |
| ೩. | ತಂತ್ರ ಸಂಗ್ರಹ .... .... | ೨=೦೦ |
| ೪. | ಸಂಸ್ಕೃತ ಪ್ರವೇಶಃ .... .... | ೦=೭೫ |
| ೫ | ಸಂಸ್ಕೃತ ಪ್ರಕಾಶಃ .... .... | ೧=೦೦ |
| ೬. | ಸಂಸ್ಕೃತ ಮಾರ್ಗಾದರ್ಶ .... .... | ೦=೫೦ |
| ೭. | ವ್ಯಾಕರಣ ದರ್ಪಣ (ಪ್ರಥಮ ಭಾಗ) ಕನ್ನಡ ಟೀಕಾ .... | ೦=೭೫ |
| | ,, ,, ಮರಾಠಿ ಟೀಕಾ .... | ೦=೮೮ |

# ಕನ್ನಡ ಗ್ರಂಥಗಳು

| | | |
|---|---|---|
| ೮. | ಕಾಡಸಿದ್ಧೇಶ್ವರ ವಚನ .... .... | ೪=೦೦ |
| ೯. | ಸಿದ್ಧೇಶ್ವರ ವಚನ .... .... | ೨=೫೦ |
| ೧೦. | ಸ್ವತಂತ್ರ ಸಿದ್ಧಲಿಂಗೇಶ್ವರ ವಚನ .... .... | ೦=೫೦ |
| ೧೧. | ಹರಿಹರ ದೇವ .... .... | ೨=೦೦ |
| ೧೨. | ಕ್ಷೇತ್ರಜ್ಞ ಸುಮನೋವಾದ .... .... | ೫=೦೦ |
| ೧೩. | ಮಣಿವಚನಗಳು .... .... | ೪=೦೦ |
| ೧೪. | ವೀರಶೈವ ಸದಾಚಾರಸಂಗ್ರಹಃ ಕನ್ನಡ ಟೀಕಾ .... | ೩=೦೦ |
| ೧೫. | ಜ. ಮೂರುಸಾವಿರ ಮಠದ ಹೊಂಬೆಳಗು .... .... | ೨-೦೦ |
| ೧೬. | ವಿವೇಕ ಚಿಂತಾಮಣಿ .... .... | ೫=೦೦ |
| ೧೭. | ಜ. ಗಂಗಾಧರ ಮಹಾಸ್ವಾಮಿಗಳ ಲಾವಣಿ .... | ೦=೨೫ |
| ೧೮. | ಜ. ಗುರುಸಿದ್ಧರಾಜಯೋಗೀಂದ್ರ ಚರಿತ್ರ .... .... | ೧=೨೫ |
| ೧೯. | ಪೃಥಿಕ .... .... .... | ೧=೬೨ |
| ೨೦. | ಪೂಮಾಲೆ .... .... .... | ೦=೭೫ |
| ೨೧. | ವಿಜಯಮಹಾಂತೇಶ ಲಾವಣಿ .... .... | ೧=೦೦ |
| ೨೨. | ಹೂವು ಹಣ್ಣು .... .... .... | ೧=೦೦ |
| ೨೩. | ನೀತಿ ಶತಕ .... .... .... | ೦=೨೫ |
| ೨೪. | ಲಿಂಗಲೀಲಾ ವಿಲಾಸ (ಪ್ರತಿಗಳು ಮುಗಿದಿವೆ) | |
| ೨೫. | ರಘುವಂಶ ರಹಸ್ಯ ,, | |
| ೨೬. | ಗುರು ,, | |
| ೨೭. | ಅಸ್ಪೃಶ್ಯತಾ ,, | |
| ೨೯. | ಕರಡೀಶಚಂಪೂ (ಅಚ್ಚಿಗೆ ಸಿದ್ಧವಾದದ್ದು) ಸಂಸ್ಕೃತ | |
| ೩೦. | ಗುರು ,, | |
| ೩೧. | ಲಿಂಗ ,, | |
| ೩೨. | ಜಂಗಮ ,, | |